


ನವಕರ್ನಾಟಕ ಪ್ರಕಾಶನದ ೩೫೪ನೇ ಪ್ರಕಟಣೆ

ಕೊಂಕಣಿ ಮೂಲ

ಡಾ॥ ಜ್ಯೋತ್ಸ್ನಾ ಕೃಷ್ಣಾನಂದ ಕಾಮತ್

# ಕಮಲಾದೇವಿ ಚಟ್ಟೋಪಾಧ್ಯಾಯ

## ಬದುಕು – ಸಾಧನೆ

ಕನ್ನಡ ಅನುವಾದ

ಡಾ॥ ಗೀತಾ ಶೆಣೈ



**KAMALADEVI CHATTOPADHYAYA : BADUKU-SADHANE** (Kannada)
*KAMALADEVI CHATTOPADHYAYA : LIFE-ACHIEVEMENTS*
*by Dr. Jyotsna Krishnananda Kamath*
*Translated from Konkani by Dr. Geetha Shenoy*
*in the series `Vanita Chintana Male'*

**First Print : 2012** **Pages : 120** **Price : ₹ 70**

*Paper used for this book* : 70 gsm Maplitho 18.6 Kgs ($^{1}/_{8}$ Demy Size)

ಮೊದಲ ಮುದ್ರಣ : 2012

ಪ್ರತಿಗಳ ಸಂಖ್ಯೆ : 1000



**ಬೆಲೆ : ₹ 70**

ಮುಖಪುಟ: ನವಕರ್ನಾಟಕ ವಿನ್ಯಾಸ

ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - 560 001
ದೂರವಾಣಿ: 080-30578020/22 ಫ್ಯಾಕ್ಸ್: 080-30578023
Email : navakarnataka@gmail.com

*ಶಾಖೆಗಳು/ಮಳಿಗೆಗಳು*
ನವಕರ್ನಾಟಕ, ಕ್ರೆಸೆಂಟ್ ರಸ್ತೆ, ಬೆಂಗಳೂರು - 1, ✆ 080-30578028/35, Email : nkpsales@gmail.com
ನವಕರ್ನಾಟಕ, ಗಾಂಧಿನಗರ, ಬೆಂಗಳೂರು - 9, ✆ 080-22251382, Email : nkpgnr@gmail.com
ನವಕರ್ನಾಟಕ, ಕೆ.ಎಸ್. ರಾವ್ ರಸ್ತೆ, ಮಂಗಳೂರು - 1, ✆ 0824-2441016, Email : nkpmng@gmail.com
ನವಕರ್ನಾಟಕ, ಬಲ್ಮಠ, ಮಂಗಳೂರು - 1, ✆ 0824-2425161, Email : nkpbalmatta@gmail.com
ನವಕರ್ನಾಟಕ, ರಾಮಸ್ವಾಮಿ ವೃತ್ತ, ಮೈಸೂರು - 24, ✆ 0821-2424094, Email : nkpmys@yahoo.co.in
ನವಕರ್ನಾಟಕ, ಸ್ಟೇಷನ್ ರಸ್ತೆ, ಗುಲಬರ್ಗಾ - 2, ✆ 08472-224302, Email : nkpglb@gmail.com

**0104123394** **ISBN 978-81-8467-278-7**

Printed by R. S. Rajaram at Navakarnataka Printers, No. 167 & 168, 10th Main III Phase, Peenya Industrial Area, Bangalore - 560 058 and published by him for Navakarnataka Publications (P) Ltd., Embassy Centre, 11, Crescent Road P. B. 5159, Bangalore-560 001 (INDIA). Typeset at Navakarnataka, Bangalore-1

# ಅನುಕ್ರಮಣಿಕೆ

# ಅರಿಕೆ

ಸುಮಾರು ಎರಡು ವರ್ಷಗಳ ಹಿಂದೆ ಕೊಂಕಣಿ ಭಾಸ್ ಆನಿ ಸಂಸ್ಕೃತಿ ಪ್ರತಿಷ್ಠಾನದ ಅಧ್ಯಕ್ಷರಾದ ಶ್ರೀ ಬಸ್ತಿ ವಾಮನ ಶೆಣೈ ಅವರು ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ ಅವರ ಕುರಿತು ಮಾತೃಭಾಷೆಯಲ್ಲಿ ಒಂದು ಗ್ರಂಥವನ್ನು ರಚಿಸಲು ತಿಳಿಸಿದರು. ಕಮಲಾದೇವಿ ಅವರ ಕುರಿತು ಅಭಿಮಾನ ಮತ್ತು ಗೌರವ ಹೆಚ್ಚು ಇದ್ದುದರಿಂದ, ಹಿಂದೆ ಮುಂದೆ ನೋಡದೆ ನಾನು ತಕ್ಷಣ ಒಪ್ಪಿಕೊಂಡೆ. ಅವರ ಕುರಿತು ನಾನು ಕನ್ನಡ ಮತ್ತು ಇಂಗ್ಲಿಷ್ ಭಾಷೆಯಲ್ಲಿ ಎರಡು ಮೂರು ಲೇಖನಗಳನ್ನು ಬರೆದಿದ್ದೆ. ಆದರೆ ಒಂದು ಸ್ವತಂತ್ರ ಗ್ರಂಥವನ್ನು, ಅದರಲ್ಲಿಯೂ ಕೊಂಕಣಿ ಭಾಷೆಯಲ್ಲಿ ಬರೆಯುವುದು ಬಹಳ ಕಷ್ಟದಾಯಕವಾಗಬಹುದು ಎಂಬ ಕಲ್ಪನೆಯೇ ಇರಲಿಲ್ಲ. ಸಂಬಂಧಿಸಿದ ಲೇಖನ, ಗ್ರಂಥ, ಮಾಹಿತಿಯನ್ನು ಒಟ್ಟು ಸೇರಿಸುವ ಕಾರ್ಯದಲ್ಲಿ ನಿರತಳಾದೆ. ಮಾಹಿತಿ ಸಂಗ್ರಹಕ್ಕಾಗಿ ದೂರದೂರದ ಗ್ರಂಥಾಲಯಗಳಿಗೆ ಹೋಗುವುದು ಸಾಧ್ಯವಿರಲಿಲ್ಲ. ಅಗತ್ಯವಿರುವ ಗ್ರಂಥಗಳನ್ನು ಖರೀದಿಸಿದೆ.

ಮುಖ್ಯವಾಗಿ ನನಗೆ ಅವರು ಇಂಗ್ಲಿಷಿನಲ್ಲಿ ಬರೆದ ಆತ್ಮಚರಿತ್ರೆ 'ಇನ್ನರ್ ರೀಸೆಸಸ್ ಆಂಡ್ ಔಟರ್ ಸ್ಪೇಸಸ್' ಬೇಕಿತ್ತು. 1986ರಲ್ಲಿ ಪ್ರಕಟವಾದ ಈ ಕೃತಿಯ ಹೊಸ ಆವೃತ್ತಿಯು ಅವರ ಜನ್ಮಶತಾಬ್ಧಿಯ ವರ್ಷದಲ್ಲಿ (2003) ಬಂದಿರಬಹುದು ಎಂದುಕೊಂಡು ಬೆಂಗಳೂರು, ಮುಂಬೈ, ದೆಹಲಿ, ಪುಣೆಯ ಪ್ರಕಾಶಕರಿಗೆ, ದೊಡ್ಡ ಪುಸ್ತಕ ಮಳಿಗೆಗಳಿಗೆ ದೂರವಾಣಿ ಕರೆ ಮಾಡಿ ಆ ಗ್ರಂಥದ ಕುರಿತು ನಾನು ವಿಚಾರಿಸಿದೆ. ದುಃಖದ ಸಂಗತಿಯೆಂದರೆ ಅವರ ಆತ್ಮಚರಿತ್ರೆಯ ಎರಡನೆಯ ಆವೃತ್ತಿ ಬಂದಿರಲಿಲ್ಲ. ಅಷ್ಟೇ ಅಲ್ಲ ಪ್ರಥಮ ಮುದ್ರಣದ ಒಂದು ಪ್ರತಿ ಕೂಡಾ ಸಿಗಲಿಲ್ಲ.

ನನ್ನ ಮುಂಬೈ ಸ್ನೇಹಿತೆ ಡಾ. ಬಿ. ಲೀಲಾ ನನ್ನ ನೆರವಿಗೆ ಬಂದರು. ಅವರು ಮುಂಬೈ ವಿಶ್ವವಿದ್ಯಾಲಯದ ಗ್ರಂಥಾಲಯದಲ್ಲಿದ್ದ ಈ ಕೃತಿಯ 410 ಪುಟಗಳ ನೆರಳು ಪ್ರತಿ ಕಳುಹಿಸಿ ಕೊಟ್ಟರು. ನಾನು 2007ರ ಅಕ್ಟೋಬರ್ ಮತ್ತು ನವೆಂಬರ್ ತಿಂಗಳಲ್ಲಿ ಏಕಾಗ್ರತೆಯಿಂದ ಈ ಮಹಾನ್ ಗ್ರಂಥದ ಓದಿನಲ್ಲಿ ಮಗ್ನಳಾದೆ. ಓದುತ್ತಿರುವಂತೆ ನಾನು ಧೈರ್ಯಗುಂದಿದೆ. ಆ ಗ್ರಂಥದ ಶೀರ್ಷಿಕೆಯ ರೀತಿಯಲ್ಲಿಯೇ, ಆಕಾಶದಷ್ಟು ವಿಶಾಲವಾದ ಪಟದ ಮೇಲೆ ಭೂಮಂಡಲವನ್ನು ಮಗುಚಿ ಹಾಕಿದ ಕಮಲಾದೇವಿಯವರು, ನಾಜೂಕು ಕುಂಚದಿಂದ ಜೀವನಾನುಭವದ ಬೇರೆ ಬೇರೆ ವ್ಯಕ್ತಿಗಳ, ಜನಾಂಗಗಳ ಚಿತ್ರಣ ಮಾಡಿದ್ದರು. ಅದರಲ್ಲಿ ಚಿತ್ರಿತಗೊಂಡ ನೂರಾರು ಘಟನೆಗಳಲ್ಲಿ ನಾನು ಐಕ್ಯಳಾದೆ! ನನಗೆ ಮತ್ತೆ ಮತ್ತೆ ಅನಿಸಿದ್ದೇನೆಂದರೆ ನಾನು ಕಮಲಾದೇವಿಯವರ ಧೀರೋದಾತ್ತ ವ್ಯಕ್ತಿತ್ವಕ್ಕೆ ಅಲ್ಪವಾದರೂ ನ್ಯಾಯವನ್ನು ಒದಗಿಸುವುದಕ್ಕೆ ಶಕ್ತಳಾಗಬಲ್ಲೆನೆ? ಅವರು ನೀಡಿರುವ ದೇಶದ ನೇತಾರರ ಚಿತ್ರಣ ಅನನ್ಯವಾಗಿತ್ತು. ಆದರೆ ನನಗೆ ಕಮಲಾದೇವಿಯವರ ಚಿತ್ರಣ ನೀಡುವುದು ಮುಖ್ಯವಾಗಿತ್ತು. ಅವರು ಈ ಗ್ರಂಥದಲ್ಲಿ ತನ್ನ ಮತ್ತು ತನ್ನ ಕುಟುಂಬದ ಕುರಿತು ಹೆಚ್ಚೇನೂ ಹೇಳದಿರುವುದು ನನಗೆ ಕೊರತೆಯಾಗಿ ಕಂಡಿದೆ.

ನಾನು ಅವರ ಕುರಿತು ಬೇರೆಯವರು ಬರೆದ ಗ್ರಂಥಗಳನ್ನು, ಲೇಖನಗಳನ್ನು ಓದಿದೆ. ಅವರದೇ ಪತ್ರ ಮತ್ತು ಪ್ರಬಂಧಗಳ ಅಧ್ಯಯನ ಮಾಡಿದೆ. ಅವರೊಂದಿಗೆ ಕೆಲಸ ಮಾಡಿದವರ ಜೊತೆ ಮಾತನಾಡಿದೆ. ಇದರಿಂದ ಅವರ ಅಗಾಧ ವ್ಯಕ್ತಿತ್ವದ ಕೆಲವು ಹೊಳಹುಗಳು ದೊರೆತವು.

ನನಗೆ ದೊರೆತ ಗ್ರಂಥಗಳಲ್ಲಿ ಜಮೀಲಾ ಬ್ರಜಭೂಷಣ್ ಅವರ ಕೃತಿಯಲ್ಲಿ ಕಮಲಾದೇವಿಯವರ ವ್ಯಕ್ತಿತ್ವದ ಪ್ರಾಮಾಣಿಕ ಚಿತ್ರಣ ಇದೆ ಎಂದು ಕಂಡಿತು. ಆದರೆ ವೈಯಕ್ತಿಕ ಬದುಕಿನ ಮೇಲೆ ಸ್ವಲ್ಪವೂ ಒತ್ತು ಬಿದ್ದಿಲ್ಲ. ಡಾ. ಸರೋಜಿನಿ ಶಿಂತ್ರಿ ಅವರ 'ನಾನೊಂದು ಕನಸ ಕಂಡೆ' ಕನ್ನಡ ಗ್ರಂಥವು ಒಂದು ಪ್ರಾಮಾಣಿಕವಾದ ಆದರೆ ಸಣ್ಣ ಪ್ರಯತ್ನವಾಗಿದೆ. ಈ ಗ್ರಂಥವು ಡಾ. ಕಮಲಾ ರತ್ನಂ ಅವರ 'ಕಮಲಾದೇವಿ: ಏಕ್ ಸಮರ್ಪಿತ್ ವ್ಯಕ್ತಿತ್ವ್' ಹಿಂದಿ ಗ್ರಂಥವನ್ನು ಆಧರಿಸಿದೆ !

ಪ್ರಸ್ತುತ ಗ್ರಂಥ 'ಕಮಲಾದೇವಿ ಚಟ್ಟೋಪಾಧ್ಯಾಯ: ಜೇವಿತ್ ಆನ್ ಕಾರ್ಯ್'ದಲ್ಲಿ 15 ಅಧ್ಯಾಯಗಳು ಇವೆ. ನಾನು ತಿಳಿದುಕೊಂಡಿರುವ ಕಮಲಾದೇವಿಯವರ ವ್ಯಕ್ತಿತ್ವದ ಹದಿನೈದು ಮುಖಗಳನ್ನು(ಚಹರೆ) ನೀಡುವ ಪ್ರಯತ್ನವನ್ನು ನಾನು ಮಾಡಿದ್ದೇನೆ. ಹೇಳುವ ವಿಷಯಗಳು ಬಹಳ ಇವೆ. ಹೇಳಿ ಮುಗಿಯುವಂತಹದಲ್ಲ. ಕಮಲಾದೇವಿಯ ವ್ಯಕ್ತಿತ್ವ ಅಷ್ಟು ಬಹುಮುಖಿ ಯಾಗಿತ್ತು. ನನ್ನ ಪ್ರಾಮಾಣಿಕ ಅಭಿಪ್ರಾಯವೇನೆಂದರೆ ಕಮಲಾದೇವಿಯವರಂತಹ ವ್ಯಕ್ತಿ ಯಾವುದೇ ದೇಶದಲ್ಲಿ, ಬಹುತೇಕ ಶತಮಾನಗಳಲ್ಲಿ ಒಬ್ಬರು ಅಥವಾ ಇಬ್ಬರು ಸಿಗುತ್ತಾರೆ. ಯಾವುದೇ ವ್ಯಕ್ತಿಯ ಬುದ್ಧಿವಂತಿಕೆ, ಶಕ್ತಿ, ಸಾಮರ್ಥ್ಯ ಅವರ ಒಂದು ವೃತ್ತಿಯ ತುತ್ತತುದಿಯನ್ನು ತಲುಪುವುದು ಸಾಧ್ಯ. ಪರೋಪಕಾರವನ್ನು ಯಾವುದಾದರೂ ಒಂದು ಪ್ರಕಾರದಲ್ಲಿ ನಡೆಸುವುದು ಸಾಧ್ಯ. ಕಲಾಪ್ರೇಮವನ್ನು ಯಾವುದೇ ಒಂದು ಮಾಧ್ಯಮಕ್ಕೆ ಅರ್ಪಿಸುವುದು ಸಾಧ್ಯ. ದೇಶ ಸೇವೆಯನ್ನು ಯಾವುದೇ ಒಂದು ರೂಪದಲ್ಲಿ ಸಲ್ಲಿಸುವುದು ಸಾಧ್ಯ. ಕಮಲಾದೇವಿಯವರ ವೈಶಿಷ್ಟ್ಯವೆಂದರೆ ಅವರು ಈ ಎಲ್ಲಾ ಪ್ರಕಾರಗಳಲ್ಲಿ ಬೇರೆ ಬೇರೆ ರೂಪಗಳಿಂದ ಸಮಾಜಕ್ಕೆ ಮತ್ತು ದೇಶಕ್ಕೆ ಸಂದಿದ್ದಾರೆ.

ಕಮಲಾದೇವಿಯ ಕುರಿತು ಅವರ ಮಾತೃಭಾಷೆಯಲ್ಲಿ ಗ್ರಂಥ ತರುವುದೆಂದು ಯೋಜಿಸಿ, ಇಬ್ಬರು ಮೂವರು ಆಗುವುದಿಲ್ಲವೆಂದು ಹೇಳಿದರೂ, ಅದನ್ನು ಬಿಟ್ಟುಕೊಡದೆ, ನನ್ನ ಬೆನ್ನಟ್ಟಿ, ನಮ್ಮವರೇ ಆಗಿರುವ ಈ ಮಹಾನ್ ಮಹಿಳೆಯ ಕುರಿತು ಗ್ರಂಥ ರಚಿಸಲು ನನ್ನನ್ನು ತೊಡಗಿಸಿಕೊಂಡು, ಈ ಕಾರಣದಿಂದ ಉತ್ತಮ ಅಧ್ಯಯನ ನಡೆಸುವಂತೆ ವಿಚಾರಿಸಿಕೊಳ್ಳುತ್ತಾ, ಮತ್ತೆ ಮತ್ತೆ ನೆನಪಿಸಿಕೊಳ್ಳುತ್ತಾ, ಬರೆವಣಿಗೆಯನ್ನು ನಿಲ್ಲಿಸದಂತೆ ನೋಡಿಕೊಂಡು, ಈ ಗ್ರಂಥ ಬೆಳಕಿಗೆ ಬರಲು ಕಾರಣಕರ್ತರಾಗಿರುವ ಶ್ರೀ ಬಸ್ತಿ ವಾಮನ ಶೆಣೈ ಅವರಿಗೆ ನಾನು ಅತ್ಯಂತ ಕೃತಜ್ಞಳಾಗಿದ್ದೇನೆ. ಕಮಲಾದೇವಿಯ ಆತ್ಮಚರಿತ್ರೆಯನ್ನು ಹುಡುಕಿ ತೆಗೆದು, ಅದರ ನೆರಳು ಪ್ರತಿ ಮಾಡಿಸಿ ಸಮಯಕ್ಕೆ ಸರಿಯಾಗಿ ಕೈಗೆ ಸಿಗುವಂತೆ ಮಾಡಿದ ಡಾ. ಬಿ. ಲೀಲಾ ಅವರಿಗೆ, ಕಮಲಾದೇವಿ ಅವರೊಂದಿಗೆ ಕೆಲಸ ಮಾಡಿಕೊಂಡಿದ್ದು ಅವರನ್ನು ಹತ್ತಿರದಿಂದ ತಿಳಿದುಕೊಂಡಿರುವ ಎಂ. ವಿ. ನಾರಾಯಣ ರಾವ್ ಮತ್ತು ಪದ್ಮಭೂಷಣ ಎಲ್. ಸಿ. ಜೈನ್ ಅವರು ನೀಡಿರುವ ಮಾಹಿತಿಗಾಗಿ ಅವರಿಗೆ ನಾನು ತುಂಬಾ ಆಭಾರಿಯಾಗಿದ್ದೇನೆ. ಡಿಟಿಪಿ ಮಾಡಿಕೊಟ್ಟು ನನ್ನ ಚಿಂತೆ ದೂರ ಮಾಡಿದ ಶ್ರೀಮತಿ ಸವಿತಾ ಅವರಿಗೆ, ಕಮಲಾದೇವಿಯವರ ಕುರಿತು ಎರಡು ಗ್ರಂಥಗಳು ಸಿಗುವಂತೆ ಸಹಾಯ ನೀಡಿದ ಡಾ. ಗೀತಾ ಶೆಣೈ ಅವರಿಗೆ ನಾನು ಋಣಿಯಾಗಿದ್ದೇನೆ. ಹೆಚ್ಚು ಉತ್ಸಾಹದಿಂದ ಕೊಂಕಣಿ ಭಾಷೆಯ ಈ ಕೃತಿ ಸುಂದರವಾಗಿ ಪ್ರಕಟವಾಗಿ ಬೆಳಕಿಗೆ ಬರುವಂತೆ ಮಾಡಿದ ಶ್ರೀ ಪ್ರಭಾಕರ ಪ್ರಭು ಅವರಿಗೆ ಕೂಡಾ ನಾನು ಆಭಾರಿಯಾಗಿದ್ದೇನೆ. ನನ್ನ ಮಾತೃಭಾಷೆಯಲ್ಲಿ ಇದು ಎರಡನೆಯ ಬರೆವಣಿಗೆ ಪ್ರಯತ್ನವಾಗಿದ್ದು, ಕೊಂಕಣಿ ವಾಚಕ ಬಂಧುಗಳು ಇದನ್ನು ಸ್ವಾಗತಿಸುವರೆಂಬುದು ನನ್ನ ಆಶಯ.

**ಡಾ. ಜ್ಯೋತ್ಸ್ನಾ ಕೃಷ್ಣಾನಂದ ಕಾಮತ್**
110, ಶಶಿಕಿರಣ, 18ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು–55

# ಅನುವಾದಕರ ನುಡಿ

ಕಮಲಾದೇವಿ ಚಟ್ಟೋಪಾಧ್ಯಾಯ, ಮೂಲತಃ ಕರ್ನಾಟಕದ ಕರಾವಳಿ ಜಿಲ್ಲೆಯವರೆಂಬ ವಿಷಯ ಬಹಳ ಜನ ಕನ್ನಡಿಗರಿಗೆ ತಿಳಿದಿಲ್ಲ. ಅವರು ಹುಟ್ಟಿ, ಬೆಳೆದು, ಶಿಕ್ಷಣ ಪಡೆದದ್ದು ಮಂಗಳೂರು ನಗರದಲ್ಲಿ. ಚಿಕ್ಕಂದಿನಲ್ಲಿಯೇ ಸಂಗೀತ ಮತ್ತು ರಂಗಭೂಮಿಯಲ್ಲಿ ಆಸಕ್ತಿ ಹೊಂದಿ ಇದೇ ಕ್ಷೇತ್ರದಲ್ಲಿ ಮುಂದುವರಿಯಲಿದ್ದಾಗ, ಅನಿರೀಕ್ಷಿತವಾಗಿ ಅವರ ಗಮನ ಸ್ವಾತಂತ್ರ್ಯ ಆಂದೋಲನದ ಕಡೆಗೆ ಹರಿಯಿತು. ಡಾ॥ ಹರ್ಡೀಕರ್ ಅವರ ಸೇವಾದಳವನ್ನು ಸೇರಿ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿದಾಗ ಅವರನ್ನು ಬಂಧಿಸಲಾಯಿತು. ಸೆರೆಮನೆ ಸೇರಿದ ಪ್ರಥಮ ಮಹಿಳಾ ಸತ್ಯಾಗ್ರಹಿಯೆಂದು ಅವರಿಗೆ ರಾಷ್ಟ್ರಮಟ್ಟದಲ್ಲಿ ಮನ್ನಣೆ ದೊರೆಯಿತು. ಮಹಾತ್ಮಾ ಗಾಂಧಿ, ನೆಹರೂ, ಸರೋಜಿನಿ ನಾಯ್ಡು ಅವರಂತಹ ಉನ್ನತ ನಾಯಕರೊಂದಿಗೆ ಅಸಹಕಾರ ಚಳವಳಿಯಲ್ಲಿ ಕ್ರಿಯಾಶೀಲರಾಗಿದ್ದ ಕಮಲಾದೇವಿ, ದೇಶಕ್ಕೆ ಸ್ವಾತಂತ್ರ್ಯ ದೊರೆತ ಬಳಿಕ ಸಾಮಾನ್ಯ ಜನರಿಗಾಗಿ ನಡೆಸಿದ ವೈವಿಧ್ಯಮಯ ಕಾರ್ಯಚಟುವಟಿಕೆಗಳು ಉಲ್ಲೇಖನೀಯವಾಗಿವೆ. ನಿರಾಶ್ರಿತರು, ಕುಶಲಕರ್ಮಿಗಳು, ಕಲಾವಿದರು ಮತ್ತು ಮಹಿಳೆಯರಿಗಾಗಿ ದಶಕಗಳ ಕಾಲ ದುಡಿದು ಸಹಕಾರಿ ಸಂಘ, ಕರಕುಶಲ ಮಂಡಳಿ, ಕರಕುಶಲ ವಸ್ತುಪ್ರದರ್ಶನ, ರಂಗಭೂಮಿ ಪರಿಕರಗಳ ಸಂಗ್ರಹಾಲಯ, ಕೇಂದ್ರ ಸಂಗೀತ ಮತ್ತು ನಾಟಕ ಅಕಾಡೆಮಿ, ರಾಷ್ಟ್ರೀಯ ನಾಟಕ ಶಾಲೆ, ಗೃಹವಿಜ್ಞಾನ ಮಹಾವಿದ್ಯಾಲಯ, ಕಾರ್ಮಿಕ ಸಂಘಟನೆ, ರಾಷ್ಟ್ರಮಟ್ಟದಲ್ಲಿ ಕಲಾವಿದರಿಗೆ ಪ್ರಶಸ್ತಿ ಪ್ರದಾನ, ಇತ್ಯಾದಿಗಳ ಸ್ಥಾಪನೆಗಾಗಿ ಜನಶಕ್ತಿಯ ಪರವಾಗಿ ಶ್ರಮಿಸಿದ, ಭಾರತದ ಹಸ್ತಕಲೆಯ ಪುನಶ್ಚೇತನಕ್ಕೆ ಕಾರಣರಾದ ಕಮಲಾದೇವಿ ತಮ್ಮ ಬಹುಮುಖ ಕಾರ್ಯಚಟುವಟಿಕೆಗಳಿಂದ ದೇಶದಲ್ಲಿ ಮಾತ್ರವಲ್ಲ ಪರದೇಶಗಳಲ್ಲಿ ಕೂಡಾ ಮೆಚ್ಚುಗೆ, ಆದರಕ್ಕೆ ಪಾತ್ರರಾಗಿದ್ದಾರೆ.

ಪ್ರಸ್ತುತ ಗ್ರಂಥದಲ್ಲಿ ಡಾ. ಜ್ಯೋತ್ಸ್ನಾ ಕಾಮತ್ ಅವರು ಕಮಲಾದೇವಿಯವರ ಕಾರ್ಯಕ್ಷೇತ್ರವನ್ನು ಬಹಳ ಅಚ್ಚುಕಟ್ಟಾಗಿ ವಿವರಿಸಿದ್ದಾರೆ. ಸ್ವತಃ ಇತಿಹಾಸತಜ್ಞೆಯಾಗಿರುವ ಅವರು, ಘಟನೆಗಳಿಗೆ ಪ್ರಾಮುಖ್ಯತೆ ನೀಡಿ, ಕಮಲಾದೇವಿಯವರ ಜನಪರ ಕಾಳಜಿಗೆ ಹೆಚ್ಚಿನ ಒತ್ತು ನೀಡಿರುವುದು ಈ ಕೃತಿಯ ಮಹತ್ವವನ್ನು ಹೆಚ್ಚಿಸಿದೆ. ಕನ್ನಡದ ಹಿರಿಯ ಲೇಖಕಿಯಾಗಿದ್ದು, ತಮ್ಮ ಈ ಗ್ರಂಥದ ಅನುವಾದಕ್ಕೆ ಅನುಮತಿ ಕೇಳಿದ ಕೂಡಲೇ ಒಪ್ಪಿಗೆ ನೀಡಿ, ಅವರು ಸಹಕರಿಸಿದ್ದಾರೆ. ಅವರ ಪ್ರೀತಿ, ವಿಶ್ವಾಸಕ್ಕೆ ನಾನು ಋಣಿಯಾಗಿದ್ದೇನೆ. ಈ ಗ್ರಂಥವನ್ನು ಪ್ರಕಟಿಸಲು ತಕ್ಷಣ ಒಪ್ಪಿಕೊಂಡ ಕರ್ನಾಟಕದ ಪ್ರತಿಷ್ಠಿತ ಪ್ರಕಾಶನ ಸಂಸ್ಥೆ ನವಕರ್ನಾಟಕದ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಆರ್. ಎಸ್. ರಾಜಾರಾಮ್ ಅವರಿಗೆ ನಾನು ಆಭಾರಿಯಾಗಿದ್ದೇನೆ. ಡಿಟಿಪಿ ಕಾರ್ಯವನ್ನು ಅಚ್ಚುಕಟ್ಟಾಗಿ ನಿರ್ವಹಿಸಿದ ಮತ್ತು ಗ್ರಂಥವನ್ನು ಸುಂದರವಾಗಿ ಮುದ್ರಿಸಿದ ನವಕರ್ನಾಟಕ ಬಂಧುಗಳಿಗೆ ನನ್ನ ಕೃತಜ್ಞತೆಗಳು.

ಈ ಕೃತಿ ಬೆಳಕಿಗೆ ಬರಲು ಪರೋಕ್ಷವಾಗಿ ಕಾರಣರಾದ ಮಂಗಳೂರಿನ ಕೊಂಕಣಿ ಭಾಷೆ ಮತ್ತು ಸಂಸ್ಕೃತಿ ಪ್ರತಿಷ್ಠಾನದ ಅಧ್ಯಕ್ಷರಾದ ಮಾನ್ಯ ಶ್ರೀ ಬಸ್ತಿ ವಾಮನ ಶೆಣೈ ಮತ್ತು ಭಾರತೀಯ ಸಮಾಚಾರ ಸೇವೆಯ ನಿವೃತ್ತ ಅಧಿಕಾರಿ ಶ್ರೀಮತಿ ನಾಗಮಣಿ ಎಸ್. ರಾವ್ ಅವರನ್ನು ನಾನು ಇಲ್ಲಿ ನೆನಪಿಸಿಕೊಳ್ಳಲೇಬೇಕು.

1–1–2012, ಬೆಂಗಳೂರು

**ಡಾ. ಗೀತಾ ಶೆಣೈ**

ಅಧ್ಯಾಯ : ೧

# ಚಿಗುರಿದ ಸೌಂದರ್ಯ: ಬಾಲ್ಯ

ದಕ್ಷಿಣ ಕನ್ನಡ ಜಿಲ್ಲೆ ಅಪರೂಪದ ಪರಿಸರ ಮತ್ತು ಸೌಂದರ್ಯದ ಭೂಮಿಯಾಗಿದೆ. ಈ ಸುಂದರ ವಾತಾವರಣಕ್ಕೆ ನದಿಗಳು, ಸಮುದ್ರ ಮತ್ತು ಹಸಿರು ಕಾಡಿನಿಂದ ತುಂಬಿ ಕೊಂಡಿರುವ ಸಹ್ಯಾದ್ರಿ ಘಟ್ಟ ಕಾರಣವಾಗಿದೆ. ನಿಸರ್ಗದಿಂದ ಪ್ರೇರಣೆ ಪಡೆದು ಕವಿ, ನಾಟಕಕಾರ, ಬರಹಗಾರರಾಗಿರುವ ಮನುಷ್ಯರನ್ನು ನಾವು ಕಾಣುತ್ತೇವೆ. ವಿಶ್ವಕವಿ ರವೀಂದ್ರನಾಥ ಠಾಕೂರರಿಗೆ ಬಂಗಾಲದ ನದಿಪ್ರದೇಶ, ರಾಷ್ಟ್ರಕವಿ ಕುವೆಂಪು ಅವರಿಗೆ ಮಲೆನಾಡಿನ ವನ್ಯಪ್ರದೇಶ ಪ್ರಭಾವ ಬೀರಿದ ಹಾಗೆ ಬಹುಮುಖ ಪ್ರತಿಭೆಯ ಲೇಖಕ ಶಿವರಾಮ ಕಾರಂತರಿಗೆ ದಕ್ಷಿಣ ಕನ್ನಡದ ಅಪರೂಪದ ನಿಸರ್ಗ ಸೌಂದರ್ಯ ಬಂಧಿಸಿದ್ದರಲ್ಲಿ ಆಶ್ಚರ್ಯವೇನಿಲ್ಲ. ತಮ್ಮ ಸಾಹಿತ್ಯ ನಿರ್ಮಾಣದ ಮೇಲೆ ಪರಿಸರದ ಪರಿಣಾಮ ದೊಡ್ಡ ಪ್ರಮಾಣದಲ್ಲಿ ಆಗಿರುವುದನ್ನು ಆ ಮೂರೂ ಪ್ರಸಿದ್ಧ ಲೇಖಕರು ಹೇಳಿದ್ದಾರೆ.

ಶಿವರಾಮ ಕಾರಂತರು ಹುಟ್ಟಿದ ಅಪೂರ್ವ ಸೌಂದರ್ಯದ ಭೂಮಿಯಲ್ಲಿಯೇ, ಈ ಮೂರು ಮೇಧಾವಿ ಮಹಾಪುರುಷರ ಹಾಗೆ ರೂಪಿತಗೊಂಡ ಓರ್ವ ಮೇಧಾವಿ ಮಹಿಳೆ ಮಂಗಳೂರಿನಲ್ಲಿ ಹುಟ್ಟಿದರು. ಆದರೆ ಪ್ರಾರಂಭದಲ್ಲಿ ಈಕೆ ಅವರ ಹಾಗೆ ಬರೆವಣಿಗೆಯ ಕಡೆಗೆ ಹೆಚ್ಚು ಲಕ್ಷ್ಯವನ್ನು ನೀಡಲಿಲ್ಲ. ಬದಲಿಗೆ ಸ್ವಾತಂತ್ರ್ಯ ಹೋರಾಟದಲ್ಲಿ ಧುಮುಕಿದರು. ಮಹಿಳೆಯರ ಸುಧಾರಣೆಯನ್ನು ಕೈಗೊಂಡರು. ಸಾವಿರಾರು ಸಂಖ್ಯೆಯ ನಿರ್ವಸತಿಕರ ಪುನರ್ಜೀವನವನ್ನು ಅಭಿವೃದ್ಧಿಪಡಿಸಿದರು. ದೊಡ್ಡ ಪ್ರಮಾಣದಲ್ಲಿ ಸರಕಾರಿ ಸಂಸ್ಥೆಗಳ ಸಂಘಟನೆ ನಡೆಸಿದರು. ಎಲ್ಲಕ್ಕಿಂತ ಹೆಚ್ಚಾಗಿ ಅಸಡ್ಡೆಗೆ ಒಳಗಾಗಿದ್ದ ಭಾರತದ ಅಸಂಖ್ಯಾತ ಕರಕುಶಲ ಕಾರ್ಯಗಳಲ್ಲಿ ಲಕ್ಷ ಲಕ್ಷ ಜನರು ತೊಡಗಿಕೊಳ್ಳಲು ದಾರಿ ಸುಗಮಗೊಳಿಸಿದರು ಮತ್ತು ಲಲಿತಕಲೆಗಳಿಗೆ ಪುನಶ್ಚೇತನ ನೀಡಿದರು.

ಠಾಕೂರ್, ಕುವೆಂಪು, ಕಾರಂತ ಈ ಮೂರೂ ಅಪ್ರತಿಮ ಸೌಂದರ್ಯೋಪಾಸಕರ ಹಾಗೆ ಇವರು ಕೂಡಾ ಸೌಂದರ್ಯೋಪಾಸಕಿ ಆಗಿದ್ದರು. ಬದುಕಿನ ಸಣ್ಣಸಣ್ಣ ವಿಷಯಗಳಲ್ಲಿ ಕೂಡಾ ಸೌಂದರ್ಯವನ್ನು ಗುರುತಿಸುತ್ತಿದ್ದರು. ಸ್ವಂತ ವಿಚಾರವನ್ನು ಹೊಂದಿದ್ದು, ನಿಶ್ಚಿತ ಮನಸ್ಸುಳ್ಳ ಬುದ್ಧಿವಂತರಾಗಿದ್ದರು. ಆದರೆ ಅವರು ಈ ಬುದ್ಧಿವಂತಿಕೆಯನ್ನು ದೇಶ ಕಟ್ಟುವುದರ ಕಡೆಗೆ, ರಚನಾತ್ಮಕ ಕಾರ್ಯಗಳಿಗೆ, ಕುಶಲಕರ್ಮಿಗಳ ಬದುಕನ್ನು ರೂಪಿಸುವುದರ ಕಡೆಗೆ ಹರಿಸಿದರು. ಹೀಗಾಗಿ ಅವರ ನೈಜ ವ್ಯಕ್ತಿತ್ವವನ್ನು ಅರಿಯಲು ಅವರು ಬೇರೆ ಬೇರೆ ಕಾರ್ಯಕ್ಷೇತ್ರಗಳಲ್ಲಿ ದುಡಿದ ವಿಧಾನವನ್ನು ತಿಳಿದುಕೊಳ್ಳಬೇಕಾಗುತ್ತದೆ. ಈ ಅಪರೂಪದ ಪ್ರತಿಭಾವಂತ ಮಹಿಳೆ ಕಮಲಾದೇವಿ ಚಟ್ಟೋಪಾಧ್ಯಾಯ. ಆಗಿನ ಪುಟ್ಟ ನಗರದಲ್ಲಿ ಹುಟ್ಟಿ ರಾಜ್ಯಾತೀತ, ದೇಶಾತೀತರಾಗಿ ಬೆಳೆದರು. ಅವರು ಮನಸ್ಸು ಮಾಡಿದ್ದರೆ ರಾಷ್ಟ್ರಪತಿ ಹುದ್ದೆಯನ್ನು ತಲುಪಿ ರಾರಾಜಿಸಬಹುದಿತ್ತು. ಆದರೆ ಅವರು ಮನಃಪೂರ್ವಕವಾಗಿ ಹಿಂದೆ ಉಳಿದು, ಭಾರತದ ಕಲಾಪ್ರಕಾರವನ್ನು ರಾಷ್ಟ್ರ, ಅಂತರ್‌ರಾಷ್ಟ್ರೀಯ ಮಟ್ಟಕ್ಕೆ ಬೆಳೆಸಿದರು.

ಅನಂತಯ್ಯ ಧಾರೇಶ್ವರ್, ಕಂದಾಯ ಇಲಾಖೆಯ ಅಧಿಕಾರಿಯಾಗಿ, ಬ್ರಿಟಿಷರ

ಕಾಲದಲ್ಲಿ ಕಲೆಕ್ಟರ್ ಆಗಿದ್ದವರು. ಗಿರಿಜಾಬಾಯಿ ಇವರ ದ್ವಿತೀಯ ಪತ್ನಿ. ಇವರು ಶ್ರೀಮಂತ ಜಮೀನ್ದಾರಿ ಮನೆತನದ ಹುಡುಗಿ. ಹಾಗಿದ್ದರೂ ಆ ಕಾಲದ ಸಾರಸ್ವತ, ಗೌಡಸಾರಸ್ವತ ಜನರು ಸಹಜವಾಗಿ ಬೆಳೆಸಿಕೊಂಡು ಬಂದಿದ್ದ ಸಾದಾ, ಸರಳ ಜೀವನ ಈ ಕುಟುಂಬದ್ದಾಗಿತ್ತು.

ಕಮಲಾದೇವಿ ಹುಟ್ಟಿದ್ದು 1903ನೇ ಇಸವಿ, ಎಪ್ರಿಲ್ 3ರಂದು, ಮಂಗಳೂರಿನಲ್ಲಿ. ಇವರಿಗಿಂತ ಮೊದಲು ಒಂದು ಹೆಣ್ಣು ಮತ್ತು ಎರಡು ಗಂಡು ಮಕ್ಕಳು ಹುಟ್ಟಿ, ತೀರಾ ಸಣ್ಣವಯಸ್ಸಿನಲ್ಲಿ ತೀರಿಕೊಂಡಿದ್ದರು. ಕಮಲ ಮತ್ತು ಅವರ ಸೋದರಿ ಸಗುಣ ಹೆತ್ತವರ ಅತಿಶಯ ಪ್ರೀತಿಯಲ್ಲಿ ಬೆಳೆದರು. ಅನಂತಯ್ಯನವರಿಗೆ ಮೊದಲ ಹೆಂಡತಿಯಿಂದ ಇಬ್ಬರು ಗಂಡುಮಕ್ಕಳಿದ್ದು, ಅವರು ಶಿಕ್ಷಣ ಮುಗಿಸಿ ದೂರದ ಊರಿನಲ್ಲಿ ಉದ್ಯೋಗದಲ್ಲಿದ್ದರು. ಹೀಗಾಗಿ ನಾಲ್ಕು ಮಂದಿಯ ಧಾರೇಶ್ವರ ಕುಟುಂಬ ಲೆಕ್ಕಕ್ಕೆ ಸಣ್ಣದ್ದಾಗಿತ್ತು. ಆದರೆ ಆ ಕಾಲದ ಪದ್ಧತಿಯಂತೆ ಅವರ ದೊಡ್ಡ ಮನೆಯಲ್ಲಿ ಕೆಲಸಕ್ಕೆ ಹೋಗುವವರು, ಕಲಿಯುವವರು ಎಂದು ಬೇರೆ ರೀತಿಯಿಂದ ಆಶ್ರಯ ಪಡೆದ ಗಂಡಸರು–ಹೆಂಗಸರು ಖಾಯಂ ಆಗಿ ಕಾಣಸಿಗುತ್ತಿದ್ದರು. ಸಣ್ಣಪುಟ್ಟ ಊರುಗಳ ಸಂಬಂಧಿಕರು ಸರಕಾರಿ ಕೆಲಸಕ್ಕೆಂದು ಜಿಲ್ಲಾ ಕೇಂದ್ರ ಮಂಗಳೂರಿಗೆ ಬಂದಾಗ ಅವರಲ್ಲಿ ಉಳಿದುಕೊಳ್ಳುತ್ತಿದ್ದರು. ಅವರ ಉಪಸ್ಥಿತಿ ಒಂದು ವಾರದಿಂದ ಹಿಡಿದು ಆರು ತಿಂಗಳವರೆಗೆ ಬೆಳೆಯುವ ಸಂಭವ ಇರುತ್ತಿತ್ತು. ಎಲ್ಲರನ್ನೂ, ಎಲ್ಲವನ್ನೂ ಸಮರ್ಥ ರೀತಿಯಲ್ಲಿ ಸಂಭಾಳಿಸುತ್ತಿದ್ದರು ಗಿರಿಜಾಬಾಯಿ.

ಕಮಲಾದೇವಿಯಲ್ಲಿ ಸೌಂದರ್ಯದ ಪ್ರೀತಿಯು ಬಾಲ್ಯದಿಂದಲೇ ಬೇರೆ ಬೇರೆ ರೀತಿಯಲ್ಲಿ ಬೆಳೆದು ಬಂದದ್ದನ್ನು ಅವರು ತಮ್ಮ ಆತ್ಮಕಥಾನಕದಲ್ಲಿ ಹೇಳಿಕೊಂಡಿದ್ದಾರೆ. ಆಗಿನ ಹಬ್ಬಗಳು, ಉತ್ಸವ, ಆಟ, ತಮಾಷಾ, ಭೂತಾರಾಧನೆ, ವಿವಾಹ, ಉಪನಯನ, ಎಲ್ಲದರಲ್ಲಿಯೂ ಮಗ್ನರಾಗಿ ಅವರು ಖುಷಿ ಪಡುತ್ತಿದ್ದರು. ಆಗಿನ ಸಮೂಹ ಬದುಕಿನಲ್ಲಿ ಪಾಲುಗೊಳ್ಳುತ್ತಿದ್ದರು.

ಶ್ರಾವಣ ಮಾಸ ಬಂತೆಂದರೆ ಹುಡುಗಿಯರಿಗೆ ಹೂ ಸಂಗ್ರಹಿಸುವ ಸಂಭ್ರಮ. ಮಹಿಳೆಯರು ಚೂಡಿಗಳನ್ನು ಕಟ್ಟಿ, ನಿಸರ್ಗಮಾತೆಯ ದೇವೀರೂಪದ ಪೂಜೆ ಕೈಗೊಂಡು, ಹಿರಿಯರಿಗೆ ಚೂಡಿ ಹಂಚಿ ಆಶೀರ್ವಾದ ಸ್ವೀಕರಿಸಿದರೆ, ಸಣ್ಣ ಹುಡುಗಿಯರು ಹಿಂದೆ ಉಳಿಯುತ್ತಿರಲಿಲ್ಲ. ತಾಯಿ ಜೊತೆ ಮನೆಮನೆಗೆ ಹೋಗುತ್ತಿದ್ದರು. ಹೂದಂಡೆ ಕಟ್ಟುವುದು, ರಂಗೋಲಿ ಬಿಡಿಸುವುದು, ನಿತ್ಯದ ಪರಿಪಾಠ. ದೀಪಾವಳಿ ಸಮಯದಲ್ಲಿ ವಿಧವಿಧದ ಆಕಾಶ ಬುಟ್ಟಿ ತಯಾರಿಸುವುದರಲ್ಲಿ ಮಕ್ಕಳಿಗೆ ಭಾರೀ ಸಂಭ್ರಮವಿತ್ತು. ಆಕಾಶಬುಟ್ಟಿಯ ವಿನ್ಯಾಸ ಹಿಂದಿನ ವರ್ಷದ ಹಾಗೆ ಈ ವರ್ಷ ಇರುವಂತಿಲ್ಲ! ಪಕ್ಕದ ಮನೆ ಆಕಾಶಬುಟ್ಟಿಗಿಂತ ನಮ್ಮ ಮನೆಯ ಆಕಾಶಬುಟ್ಟಿ ಹೆಚ್ಚು ವರ್ಣಮಯವಾಗಿ, ಚೆಂದವಾಗಿ ಇರಬೇಕೆಂಬ ಸ್ಪರ್ಧೆ ನಡೆಯುತ್ತಿತ್ತು.

ಅವರ ಮನೆಯ ಮುಂದೆ ಒಂದು ಕಟ್ಟೆ ಇತ್ತು. ಪ್ರತಿದಿನ ನಿರ್ದಿಷ್ಟ ಸಮಯದಲ್ಲಿ ಗಂಡಸರು, ಹೆಂಗಸರು ಪ್ರತ್ಯೇಕವಾಗಿ ಅಲ್ಲಿ ಸೇರುತ್ತಿದ್ದರು. ಬೇರೆ ಬೇರೆ ಊರಿನ ಚಿಕ್ಕಮ್ಮ, ಅತ್ತಿಗೆ, ಅತ್ತೆ ಬಂದಾಗ ಕಥೆಗಳು, ಸುದ್ದಿಗಳು, ಪತ್ರಿಕಾ ಓದು ಇತ್ಯಾದಿ ನಡೆಯುತ್ತಿತ್ತು.

ದಸರೆಯ ಹತ್ತುದಿನ ಗೊಂಬೆಗಳನ್ನು ಕೂಡಿಸುವುದು ಅಷ್ಟೇ ಉತ್ಸಾಹದ ಕಾರ್ಯಕ್ರಮ ವಾಗಿರುತ್ತಿತ್ತು. ಮನೆಮನೆಗಳಲ್ಲಿ ಬಾಳೆ ದಿಂಡಿನಿಂದ, ಎಳೆತೆಂಗಿನಗರಿಗಳಿಂದ, ಹೂಗಳಿಂದ ಎಷ್ಟು ವಿಧದ ವಸ್ತುಗಳನ್ನು ತಯಾರಿಸುತ್ತಿದ್ದರೆಂದರೆ, ಅದಕ್ಕೆ ಲೆಕ್ಕವೇ ಇಲ್ಲ!

ಆ ಕಾಲದಲ್ಲಿ ಮನರಂಜನೆಗೆ ಯಾವ ಕೊರತೆಯೂ ಇರಲಿಲ್ಲ. ಮದುವೆ ಸಂದರ್ಭ ತೆಗೆದುಕೊಂಡರೆ ತಿಂಡಿ–ಊಟದ ಸಮಯದಲ್ಲಿ ಕಥೆಗಳು, ತಮಾಶೆ (ಹೋವಿಯೋ ರೂಪದಲ್ಲಿ), ವಿನೋದಪದ, ಆಟ ತುಂಬಾ ನಡೆಯುತ್ತಿತ್ತು. ಈ ನಿಮಿತ್ತವಾಗಿ

ದಶಾವತಾರ(ಯಕ್ಷಗಾನ), ಗೊಂಬೆಯಾಟ, ಹರಿಕಥೆ, ಏಕಪಾತ್ರಾಭಿನಯದಂತಹ ಪ್ರಸಿದ್ಧ ಪ್ರದರ್ಶನವನ್ನು ಇಡುತ್ತಿದ್ದರು. ಈ ವಿಧದ ರಂಜನೆಯ ಪ್ರಕಾರಗಳು ಕಮಲಾದೇವಿಗೆ ಹೆಚ್ಚು ಇಷ್ಟವಾಗುತ್ತಿತ್ತು. ಅವರ ಜನ್ಮಜಾತ ಕಲಾಪ್ರೇಮಕ್ಕೆ ಇದರಿಂದ ಹೆಚ್ಚಿನ ಒತ್ತಾಸೆ ದೊರೆಯಿತು. ನಂತರದ ವರ್ಷಗಳಲ್ಲಿ ಈ ಪ್ರಾಚೀನ ಕಲಾ ಪ್ರಕಾರಗಳನ್ನು ಕಾಪಾಡಿಕೊಂಡು ಬರಲು ಅವರು ವಿಶೇಷ ಪ್ರಯತ್ನ ನಡೆಸಿರುವುದು ಕಂಡುಬರುತ್ತದೆ. ಇವತ್ತಿನ ಮದುವೆಗಳಲ್ಲಿ ಉಡುಗೊರೆ ನೀಡುವುದು ಮತ್ತು ಅದರ ವಿನಿಮಯ, ಅದರಲ್ಲಿಯೂ ವಿದೇಶಿ ವಸ್ತುಗಳ ಪ್ರದರ್ಶನ ಮತ್ತು ಪ್ರತಿಷ್ಠೆಯ ಪ್ರಶ್ನೆ ಆಗಿರುವ ವರದಕ್ಷಿಣೆಯ ಘಾತಕ ಪರಿಣಾಮದ ಕುರಿತು ಅವರು ಬಹಳ ಬೇಸರದಿಂದ ತಮ್ಮ ಆತ್ಮಚರಿತ್ರೆಯಲ್ಲಿ ಹೇಳಿಕೊಂಡಿದ್ದಾರೆ.

ಹಿಂದಿನ ಕಾಲದಲ್ಲಿ ಹುಡುಗಿಯರಿಗೆ ಮನೆಯಲ್ಲಿಯೇ ಸ್ವಾವಲಂಬನೆಯ ಪಾಠ ಎಷ್ಟೊಂದು ದೊರೆಯುತ್ತಿತ್ತು ಎಂಬುದನ್ನು ಅವರು ನೆನಪಿಸಿಕೊಂಡಿದ್ದಾರೆ. ಹೊಲಿಗೆ, ಕಸೂತಿ, ಹೂದೋಟ ಮಾಡುವುದು, ತರಕಾರಿ ಬೆಳೆಸುವುದು, ಮನೆಮದ್ದು ಮತ್ತು ಅಡುಗೆ ತರಬೇತಿ ಇರುತ್ತಿತ್ತು. ಆದರೆ, ಈಗ? ಅವರ ಬಾಲ್ಯಕಾಲ ಹಿಗ್ಗಿದೆ ನಿಜ. ಬೇಗ ಮದುವೆಯಾಗುವ (ಬಾಲ್ಯ–ವಿವಾಹದ) ಭಯವಿಲ್ಲ ಎನ್ನುವುದೂ ನಿಜ, ಆದರೆ ಈ ಮನೆವಾಳ್ತನದ ತರಬೇತಿಯ ಸದವಕಾಶದ ಒಳ್ಳೇ ಉಪಯೋಗ ಆಗುತ್ತಿಲ್ಲ ಎಂಬುದು ಅವರ ಅನುಭವೀ ಅಭಿಪ್ರಾಯ!

ಕಷ್ಟ–ತೊಂದರೆಗಳನ್ನು ಸಹಿಸಿಕೊಳ್ಳಲು ಹಿಂದಿನ ಕಾಲದ ಮಹಿಳೆಯರು ಹೆಚ್ಚು ಶಕ್ತಿವಂತರಾಗಿದ್ದರು ಎಂಬುದನ್ನು ಉದಾಹರಣೆ ಸಹಿತ ಅವರು ವಿವರಿಸಿದ್ದಾರೆ.

ದಕ್ಷಿಣ ಕನ್ನಡ ಜಿಲ್ಲೆಯ ಅಥವಾ ತುಳುನಾಡಿನ ಶ್ರೀಮಂತ ಸಂಸ್ಕೃತಿಯ ಪರಿಣಾಮ ಕಮಲಾದೇವಿಯ ಮೇಲೆ ಆಳವಾಗಿ ಮೂಡಿದೆ. ಈ ಪ್ರದೇಶದಲ್ಲಿ ಹಿಂದೂ ಧರ್ಮವಲ್ಲದೆ, ಜೈನ, ಕ್ರಿಶ್ಚಿಯನ್, ಮತ್ತು ಮುಸ್ಲಿಂರ ಪ್ರಸಿದ್ಧ ಪೂಜಾಸ್ಥಳಗಳು ಇವೆ. ಜೊತೆಗೆ ಪ್ರಾಚೀನ ಬೌದ್ಧ ಸಂಸ್ಕೃತಿಯ ಕುರುಹು ಕೂಡಾ ಕಾಣಲು ಸಿಗುತ್ತದೆ. ಸಮುದಾಯಗಳ ಹಬ್ಬಗಳಲ್ಲಿ ಸಂಬಂಧಿಸಿದ ಊರಿನ ಜನರು ಪಾಲುಗೊಳ್ಳುವುದನ್ನು ಅವರು ನೋಡಿದ್ದಾರೆ. ಪುರಾತನ ಬೌದ್ಧ ಅವಶೇಷ, ಮೂಡಬಿದ್ರಿ, ಕಾರ್ಕಳದ ಭವ್ಯ ಜೈನ ವಾಸ್ತು, ಇಗರ್ಜಿಗಳಲ್ಲಿರುವ ಚಿತ್ರಕಲೆ, ಮೊಹರಂನ ಹುಲಿಕುಣಿತ ಅವರ ಯುವ ಮನಸ್ಸಿನ ಮೇಲೆ ಅಚ್ಚಳಿಯದ ನೆನಪಾಗಿ ಉಳಿದಿತ್ತು.

ಹೀಗೆ, ಕಮಲಾದೇವಿಯವರು ಬೆಳೆದ ಮುಕ್ತ ಮತ್ತು ವಿಶ್ವಬಂಧುತ್ವದ ಪರಿಸರವು ಅವರ ಭವ್ಯ ವ್ಯಕ್ತಿತ್ವ ಬೆಳೆಯುವುದಕ್ಕೆ ಅನೇಕ ರೀತಿಯಲ್ಲಿ ಸಹಾಯಕವಾದವು.

ಕಮಲಾದೇವಿಯಲ್ಲಿ ಸ್ವಂತಿಕೆ ರೂಪುಗೊಳ್ಳುವುದಕ್ಕೆ ಅವರ ತಾಯಿ ಗಿರಿಜಾಬಾಯಿಯ ಪ್ರಭಾವ ಅಗಾಧವಾಗಿದೆ. ಗಿರಿಜಾಬಾಯಿಗೆ ಸ್ವತಃ ಓದಿನ ತಿಳಿವಳಿಕೆ ಇದ್ದುದರಿಂದ ಮನೆಗೆಲಸದ ನಡುವೆಯೇ ಅವರು ಓದು ಮತ್ತು ಕಲಿಯುವುದರ ಮೂಲಕ ತಿಳಿದು ಕೊಂಡಿದ್ದ ವಿಷಯ ಬಹಳವಿತ್ತು. ಶ್ರೀ ರಾಮಕೃಷ್ಣ, ವಿವೇಕಾನಂದ, ಸ್ವಾಮಿ ರಾಮತೀರ್ಥ, ಇವರ ಗ್ರಂಥಗಳನ್ನು ತರಿಸಿ ಓದುತ್ತಿದ್ದರು. ಅವರು ಆ ಕಾಲದ ಆಧುನಿಕ ವಿಚಾರವಂತರಾಗಿದ್ದರು. ಅವರ ಮನೆಗೆ ಮಹಿಳೆಯರೇ ಹೆಚ್ಚು ಸಂಖ್ಯೆಯಲ್ಲಿ ನಿಯಮಿತವಾಗಿ ಭೇಟಿ ನೀಡುತಿದ್ದರು. ಅವರಿಗೆ ಪತ್ರಿಕೆಗಳನ್ನು ಓದಿ ಸುದ್ದಿಗಳನ್ನು ಹೇಳುವ, ಪುಸ್ತಕಗಳಲ್ಲಿನ ಮಹತ್ವಪೂರ್ಣ ವಿಚಾರಗಳನ್ನು ತಿಳಿಸುವ ಕಾರ್ಯವನ್ನು ಗಿರಿಜಾಬಾಯಿ ನಡೆಸುತ್ತಿದ್ದರು. ಅವರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 1910ರಲ್ಲಿ ಸ್ಥಾಪಿಸಿದ ಮಹಿಳಾ ಸಭಾ

ಇವತ್ತಿಗೂ ಚಲಾವಣೆಯಲ್ಲಿ ಇದೆ. ಹಿಂದೆ ಮಹಿಳೆಯರ, ಮಕ್ಕಳ ಅಭ್ಯುದಯಕ್ಕಾಗಿ ಇದ್ದಂತಹ ಈ ಸಂಸ್ಥೆ ನೂರು ವರ್ಷಗಳ ನಂತರ ಈಗಲೂ ಕಾರ್ಯನಿರ್ವಹಿಸುತ್ತಿದೆ!

ಗಿರಿಜಾಬಾಯಿಗೆ ಸಂಗೀತದ ಪರಿಚಯ ಚೆನ್ನಾಗಿತ್ತು. ಅವರು ಪಿಯಾನೋ ನುಡಿಸುತ್ತಿದ್ದರು. ಇಂಗ್ಲಿಷ್ ಮತ್ತು 2–3 ಭಾರತೀಯ ಭಾಷೆಗಳನ್ನು ತಿಳಿದುಕೊಂಡಿದ್ದರು. ಪ್ರಾಯ ಕಳೆದ ನಂತರವೂ ಬೇರೆ ಭಾಷೆ ಕಲಿಯುವ, ಅದರಲ್ಲಿರುವ ಸಾಹಿತ್ಯವನ್ನು ತಿಳಿದುಕೊಳ್ಳುವ ಉತ್ಸಾಹ ಅವರಲ್ಲಿ ಇತ್ತು. ಗಾರ್ಗಿ, ಮೈತ್ರೇಯಿ, ಈ ರೀತಿಯ ಅಸಾಮಾನ್ಯ ಪೌರಾಣಿಕ ಮಹಿಳೆಯರ ಕುರಿತು ಕತೆಗಳನ್ನು ಅವರು ಹೇಳುತ್ತಿದ್ದರು. ಪಂಡಿತಾ ರಮಾಬಾಯಿ, ಆನಿ ಬೆಸೆಂಟ್ ಅವರಂತಹ ಸುಶಿಕ್ಷಿತರ ಕುರಿತು ಹೆಚ್ಚಿನ ಗೌರವ ಅವರಿಗಿತ್ತು. ಆನಿ ಬೆಸೆಂಟ್ ಮೊದಲ ಬಾರಿ ಮಂಗಳೂರಿಗೆ ಬಂದಾಗ ಗಿರಿಜಾಬಾಯಿ ಪುಟ್ಟ ಕಮಲೆಯನ್ನು ಕರೆದುಕೊಂಡು ಅವರನ್ನು ಭೇಟಿಯಾಗಲು ಹೋಗಿದ್ದರು. ಅಲ್ಲಿ ಆ ಹಿರಿಯ ಮಹಿಳೆಗೆ ಬಗ್ಗಿ ನಮಸ್ಕರಿಸುವಂತೆ ಕಮಲಾಗೆ ತಿಳಿಸಿ, 'ನಿಮ್ಮ ಹಾಗೆ ಸ್ವಾತಂತ್ರ್ಯ ಯೋಧಳಾಗು ಎಂದು ಆಶೀರ್ವಾದ ನೀಡಿ' ಎಂದು ವಿನಂತಿಸಿದ್ದರು. ಅವರು ತನ್ನ ತಲೆಯ ಮೇಲೆ ಕೈಯಿಟ್ಟು ಭಾರತೀಯ ಪದ್ಧತಿಯ ರೀತಿ ಆಶೀರ್ವಾದ ಮಾಡಿದ್ದು ನೆನಪಿದೆ, ಆದರೆ ತಾಯಿಯ ಮಾತನ್ನು ಅರ್ಥ ಮಾಡಿಕೊಳ್ಳಲು ಬಹಳ ವರ್ಷ ಹಿಡಿಯಿತು! ಎಂದು ಕಮಲಾದೇವಿ ಬರೆದಿದ್ದಾರೆ. ಚರಿತ್ರೆಯ ಕೆಲವು ಚಮತ್ಕಾರಗಳು ಕೂಡಾ ಇರುತ್ತವೆ. ಆನಿ ಬೆಸೆಂಟ್ ಇಂಡಿಯನ್ ನ್ಯಾಶನಲ್ ಕಾಂಗ್ರೆಸಿನ ಅಖಿಲ ಭಾರತ ಅಧಿವೇಶನದ ಪ್ರಪ್ರಥಮ ಮಹಿಳಾ ಅಧ್ಯಕ್ಷೆಯಾದರು (1917). ಕಮಲಾದೇವಿ ಪ್ರಪ್ರಥಮ ಸ್ಥಳೀಯ ಅಸೆಂಬ್ಲಿ ಚುನಾವಣೆಯಲ್ಲಿ ನಿಂತ ಮೊದಲ ಮಹಿಳೆಯಾದರು. ಇಷ್ಟು ಮಾತ್ರವಲ್ಲ, ಇಂಡಿಯನ್ ನ್ಯಾಶನಲ್ ಕಾಂಗ್ರೆಸಿನ ಪೂರ್ಣ ಪ್ರಮಾಣದ ಪ್ರಥಮ ಮಹಿಳಾ ಸದಸ್ಯೆಯೆಂದು ಸಂಘಟನೆಯಲ್ಲಿ ತೊಡಗಿಸಿಕೊಂಡರು! ಅಖಿಲ ಭಾರತ ಯುವ ಕಾಂಗ್ರೆಸಿನ (ಯೂತ್‌ಲೀಗ್) ಪ್ರಥಮ ಅಧ್ಯಕ್ಷರಾದರು(1928). ಕಾಂಗ್ರೆಸ್‌ನಲ್ಲಿಯೇ ಇದ್ದು ಸಕ್ರಿಯ ರಾಜಕಾರಣಿಯಾಗಿದ್ದಿದ್ದರೆ ರಾಷ್ಟ್ರಾಧ್ಯಕ್ಷ ಹುದ್ದೆಯನ್ನು ತಲುಪುತ್ತಿದ್ದರು. ವಿಧಿ ಲಿಖಿತಕ್ಕಿಂತ ಸ್ವಂತ ಧ್ವನಿಗೆ ಹೆಚ್ಚಿನ ಗಮನವನ್ನು ನೀಡಿದ್ದರಿಂದ ಅವರು ಎತ್ತರಕ್ಕೇರದಿದ್ದರೂ, ವ್ಯಾಪಕರೂಪದಿಂದ ಜಗತ್ತಿಗೆ ತಲುಪಿದರು. ಆನಿ ಬೆಸೆಂಟರ ಆಶೀರ್ವಾದ ಸಫಲವಾಯಿತು.

ಗಿರಿಜಾಬಾಯಿ ನಿರ್ಭಯ ಮಹಿಳೆ. ಕತ್ತಲೆಗೆ ಅವರು ಹೆದರುತ್ತಿರಲಿಲ್ಲ. ರಾತ್ರಿಹೊತ್ತು ಊರಿನಲ್ಲಿ ನಡೆಯುವ ಪೂಜೆ, ಭಜನೆ, ಹರಿಕಥೆ ಇತ್ಯಾದಿ ಕಾರ್ಯಕ್ರಮಗಳಿಗೆ ಲಾಟೀನು ಹಿಡಿದು ಒಬ್ಬರೇ ಹೋಗುತ್ತಿದ್ದರು. ಭೂತ, ಪಿಶಾಚಿ, ಚೌಡಿ ಈ ರೀತಿಯ ಭಯಂಕರ ವಿಚಾರಗಳು ಮಕ್ಕಳ ತಲೆಯಲ್ಲಿ ಬಾರದ ರೀತಿಯಿಂದ ಅವರನ್ನು ಗಿರಿಜಾಬಾಯಿ ಬೆಳೆಸಿದ್ದರು.

ಬಾಲ್ಯದಲ್ಲಿ ಕಮಲಾಳ ಧೈರ್ಯ ಮತ್ತು ಚಾಣಾಕ್ಷತನದ ಒಂದು ಪ್ರಸಂಗ ಹೀಗಿದೆ: ಶಾಲೆಗೆ ಹೋಗುವ ಹೆಣ್ಣುಮಕ್ಕಳ ಕೊರಳಿನ ಸರವನ್ನು ಸೆಳೆಯುವ ದುಷ್ಟನೊಬ್ಬನಿದ್ದ. ಕಮಲಾ ಅವನನ್ನು ನೋಡಿದ್ದಳು. ಒಂದು ದಿನ ಅವನು ಕಮಲೆಯ ಹಿಂದೆಯೇ ಬರತೊಡಗಿದ. ಅವಳು ಧೈರ್ಯವಾಗಿ ಅವನ ಹತ್ತಿರವೇ ನಡೆಯಲಾರಂಭಿಸಿದಳು. ಹತ್ತಿರದಲ್ಲಿ ಪೋಲೀಸ್ ಪಹರೆಯ ಚೌಕಿ ಇತ್ತು. ಅಲ್ಲಿ ಪೋಲೀಸ್ ಒಬ್ಬನಿದ್ದ. ಕಳ್ಳ ತನ್ನನ್ನು ಸಮೀಪಿಸಿ ಕೊರಳಸರವನ್ನು ಎಳೆಯುವುದರೊಳಗೆ ಕಳ್ಳ! ಕಳ್ಳ! ಎಂದು ಜೋರಾಗಿ ಅವಳು ಕಿರಿಚಿಕೊಂಡಳು. ಅದನ್ನು ಕೇಳಿದ ಪೋಲೀಸ್ ತಕ್ಷಣ ಬಂದು ಕಳ್ಳನನ್ನು ಹಿಡಿದ. ಈ ಸುದ್ದಿ ಎಲ್ಲರನ್ನೂ ತಲುಪಿತು. ವಿಷಯ ಕೇಳಿದ ಕೂಡಲೇ ಗಿರಿಜಾಬಾಯಿಯ ಕಣ್ಣಲ್ಲಿ

ಸಂತೋಷ ಮತ್ತು ಗರ್ವದ ಕಣ್ಣೀರು ಕಾಣಿಸಿಕೊಂಡದ್ದು ಕಮಲಾದೇವಿಗೆ ಚೆನ್ನಾಗಿ ನೆನಪಿತ್ತು.

ಗಿರಿಜಾಬಾಯಿಯ ತಾಯಿ ಕೂಡಾ ಅಸಾಮಾನ್ಯ ಮಹಿಳೆ. ಅವರು ಸಂಸ್ಕೃತ ವಿದುಷಿಯಾಗಿದ್ದರಿಂದ, ಮನೆಯಲ್ಲಿ ಧಾರ್ಮಿಕ ವಿಷಯಕ್ಕೆ ಸಂಬಂಧಿಸಿದ ಅವರ ಸ್ವಂತ ಗ್ರಂಥಾಲಯವಿತ್ತು. ಸಂಪ್ರದಾಯ ಕಟ್ಟುನಿಟ್ಟಿನದ್ದಾಗಿದ್ದ ದಿನಗಳಲ್ಲಿ, ಪುರುಷರು ಮತ್ತು ಮಹಿಳೆಯರು ಸೇರಿ ವಿಚಾರ ವಿನಿಮಯ, ಚರ್ಚೆಗಳನ್ನು ನಡೆಸುವುದು ಅಸಾಧ್ಯವಾಗಿದ್ದ ದಿನಗಳಲ್ಲಿ, ಅವರ ಮನೆಗೆ ಸಂಸ್ಕೃತ ವಿದ್ವಾಂಸರು ಬರುತ್ತಿದ್ದರು. ಅವರ ಧಾರ್ಮಿಕ ಚರ್ಚೆಯಲ್ಲಿ ಗಿರಿಜಾಬಾಯಿಯವರ ತಾಯಿ ಭಾಗವಹಿಸುತ್ತಿದ್ದರು. ಅವರು ಬಸ್ ಸೌಕರ್ಯ ಇನ್ನೂ ಪ್ರಾರಂಭವಾಗದ ದಿನಗಳಲ್ಲಿ ಎತ್ತಿನ ಬಂಡಿಯಲ್ಲಿ ಕುಳಿತು ಒಬ್ಬರೇ ದೂರ ದೂರ ಪಯಣಿಸುತ್ತಿದ್ದರು. ಅಲ್ಲಿಂದ ರೈಲು ಗಾಡಿಯಲ್ಲಿ ಅಥವಾ ದೋಣಿಯಲ್ಲಿ ಮುಂದಿನ ಪ್ರವಾಸ ಕೈಗೊಳ್ಳುತ್ತಿದ್ದರು. ಅವರಿಗೆ ಒಬ್ಬ ಮಗನಿದ್ದ. ಅವನ ಸಾವನ್ನು ಕಾಣುವ ದೌರ್ಭಾಗ್ಯ ಅವರದಾಯಿತು. ಆಗ ಅವರು ತೋರಿಸಿದ ಸ್ಥೈರ್ಯ ಮತ್ತು ಸಂಯಮ ಎಷ್ಟು ಅಗಾಧವಾಗಿತ್ತೆಂದರೆ, ಅದು ಎಲ್ಲರೂ ನೆನಪಿನಲ್ಲಿಟ್ಟ ಪ್ರಸಂಗವಾಗಿ ಉಳಿಯಿತು.

ಅಜ್ಜಿ, ವಿಧವೆಯಾದ ಬಳಿಕ ಮಗಳ ಮನೆಗೆ ಬಂದು ನಿಂತರು. ಅವರ ಕೋಣೆಯಲ್ಲಿ ದೊಡ್ಡದೊಡ್ಡ ಗ್ರಂಥಗಳು ಇದ್ದವು. ಪುಟ್ಟ ಕಮಲೆ ಕೈಯಲ್ಲಿ ಎತ್ತಿಕೊಳ್ಳಬಹುದಾದ ಗ್ರಂಥವನ್ನು ತಿರುವು ಮುರುವಾಗಿ ಹಿಡಿದು ಅವರದೇ ಧ್ವನಿಯಲ್ಲಿ ಓದಿಕೊಳ್ಳುವುದು ಎಲ್ಲರಿಗೂ ಮನರಂಜನೆಯ ವಿಷಯವಾಗಿತ್ತು!

ಇಂತಹ ನಿರ್ಭಯ ಮತ್ತು ಮುಕ್ತ ವಾತಾವರಣದಲ್ಲಿ ಕಮಲಾದೇವಿ ಬೆಳೆದರು. ವ್ಯಕ್ತಿಗೆ ರಕ್ತಗತವಾಗಿ ಬಂದ ಬುದ್ಧಿವಂತಿಕೆ, ಇದಕ್ಕೆ ಪೂರಕವಾಗಿ ಮನೆಯ ಸಂಸ್ಕಾರ ಮತ್ತು ತರಬೇತಿ ದೊರೆತರೆ ಅವರ ಮಾನಸಿಕ ಬೆಳವಣಿಗೆ ಹೇಗೆ ಇರುತ್ತದೆ ಎಂದು ನೋಡಲು ಕಮಲಾದೇವಿ ಉತ್ತಮ ಉದಾಹರಣೆಯಾಗಿದ್ದಾರೆ.

ಗಿರಿಜಾಬಾಯಿಗೆ ತನ್ನ ತಾಯಿಯ ಹಾಗೆ ಓದುವುದೆಂದರೆ ತುಂಬಾ ಇಷ್ಟ. ಆದರೆ ಅವರ ಒಲವು ಏನಿದ್ದರೂ ಧರ್ಮ ಮತ್ತು ಆಧ್ಯಾತ್ಮಿಕತೆಯ ಕಡೆಗೆ ಇರದೆ, ರಾಜಕಾರಣ ಮತ್ತು ಸಮಾಜ ಸುಧಾರಣೆಯ ಕಡೆಗೆ ಇತ್ತು. ಅವರು ಲೋಕಮಾನ್ಯ ತಿಲಕರ 'ಕೇಸರಿ'ಯನ್ನು ನಿಯಮಿತವಾಗಿ ಓದುತ್ತಿದ್ದರು. ರಾಷ್ಟ್ರೀಯತೆಯ ವಿಚಾರಗಳಿರುವ ಪತ್ರಿಕೆಗಳನ್ನು ಮನೆಗೆ ತರಿಸುತ್ತಿದ್ದರು. ಅವರಿಗೆ ಅಂಧಶ್ರದ್ಧೆ, ಜಾತಕ, ಪೂಜೆ, ವ್ರತಗಳಲ್ಲಿ ನಂಬಿಕೆ ಇರಲಿಲ್ಲ. ಅವರು ಒಣಹರಟೆಯಲ್ಲಿ ಕಾಲಹರಣ ಮಾಡುತ್ತಿರಲಿಲ್ಲ. ಇದೇ ಶಿಸ್ತಿನಲ್ಲಿ ಕಮಲಾದೇವಿ ಬೆಳೆದು ದೊಡ್ಡವರಾದರು. ಅವರಿಗೆ ನಿಯಮಿತ ಪತ್ರವ್ಯವಹಾರ ನಡೆಸುವುದನ್ನು ತಾಯಿ ಕಲಿಸಿದ್ದರು. ವಯಸ್ಸಿಗೆ ಬಂದ ಹುಡುಗಿಗೆ ಚಳವಳಿಯಲ್ಲಿ ಭಾಗವಹಿಸಲು ಅವರು ಪ್ರೋತ್ಸಾಹ ನೀಡಿದರು. ಕಮಲಾದೇವಿ ಜೈಲಿನಲ್ಲಿದ್ದಾಗ ಗಿರಿಜಾಬಾಯಿ ಪಿಕೆಟಿಂಗ್ ಮಾಡಿ ಮಗಳ ಕೆಲಸವನ್ನು ಮುಂದುವರಿಸುತ್ತಿದ್ದರು.

ಕಮಲಾದೇವಿಯ ಪ್ರಾಥಮಿಕ ಶಿಕ್ಷಣ ಕಾನ್ವೆಂಟಿನಲ್ಲಿ ಆಯಿತು. ಈ ಶಿಕ್ಷಣದಿಂದ ಶಿಸ್ತು ದೊರೆಯಿತು. ಇದರಿಂದ ಮನಸ್ಸು, ದೇಹದ ಮೇಲೆ ಸಂಯಮ ಸಾಧ್ಯವಾಯಿತು. ಆಂತರಿಕ ಶಕ್ತಿಯನ್ನು ಬೆಳೆಸಿಕೊಳ್ಳಲು ಸಹಾಯವಾಯಿತು ಎಂಬುದು ಕಮಲಾದೇವಿಯ ಅಭಿಪ್ರಾಯ. ಯೇಸುಕ್ರಿಸ್ತನ ಜೀವನ ಮತ್ತು ಸಂದೇಶದಿಂದ ಅವರು ಪ್ರಭಾವಿತರಾದ್ದರು. ಆದರೆ ಕ್ರಿಶ್ಚಿಯನ್ನರು ಮಾಡುವ ಮತಾಂತರದ ವಿಚಾರ ಅವರ ಮನಸ್ಸಿಗೆ ಹಿಡಿಸಿರಲಿಲ್ಲ. ಬೋಧನೆಯಿಂದ ಯಾರಿಗೂ ಮೋಕ್ಷ ಸಿಗುವುದಿಲ್ಲ! ಸ್ವಂತ ಪರಿಶ್ರಮ ಮತ್ತು ತ್ಯಾಗದಿಂದಲೇ

ಮೋಕ್ಷ ಸಾಧ್ಯ ಎಂಬುದು ಅವರು ಮುಂದೆ ತಿಳಿದುಕೊಂಡ ಸತ್ಯವಾಯಿತು.

ಬ್ರಿಟಿಷರ ಮತ್ತು ಮಿಷನರಿಗಳ ಪ್ರೋತ್ಸಾಹದಿಂದಲೇ ಕಾನ್ವೆಂಟ್ ನಡೆಯುತ್ತಿತ್ತು. ಆ ಕಾಲದ ಚರಿತ್ರೆಯ ಪಾಠವು ಬ್ರಿಟಿಷರ ಸಾಧನೆ ಮತ್ತು ಭಾರತದ ನಿಂದೆಯಿಂದ ತುಂಬಿ ಕೊಂಡಿರುತಿತ್ತು. ಮನೆಯಲ್ಲಿ ತಾಯಿಯ ರಾಷ್ಟ್ರಾಭಿಮಾನದ ಶಿಕ್ಷಣ ಮತ್ತು ಶಾಲೆಯಲ್ಲಿ ಬ್ರಿಟಿಷ್ ಸಾಮ್ರಾಜ್ಯಶಾಹಿಯ ಪರಿಚಯಾತ್ಮಕ ಶಿಕ್ಷಣ. ಇವೆರಡು ವಿರುದ್ಧ ವಲಯಗಳಲ್ಲಿ ಕಮಲಾದೇವಿಯ ಬಾಲ್ಯ ಕಳೆಯಿತು.

ಶಾಲೆಯಲ್ಲಿ ಪಿಯಾನೋದಲ್ಲಿ ಪಾಶ್ಚಾತ್ಯ ಸಂಗೀತ ಪಾಠ ಮತ್ತು ಹಾಡು ಹೇಳುವ ತರಬೇತಿ ದೊರತರೆ, ಮನೆಯಲ್ಲಿ ಸಾರಂಗಿ ವಾದ್ಯ, ಢೋಡೆ ತಾಳ, ಹಿಂದುಸ್ಥಾನಿ, ಕರ್ನಾಟಕ ಪದ್ಧತಿಯ ಹಾಡು ಹೇಳುವುದನ್ನು ಕಮಲಾದೇವಿ ಕಲಿತರು.

ಕಮಲಾ ಅವರ ತಂದೆ ಅನಂತಯ್ಯ ಪುರೋಗಾಮಿ, ವಿಚಾರವಂತರಾಗಿದ್ದರು. ಬದಲಾಗುತ್ತಿರುವ ದಿನಗಳ ಅಗತ್ಯವನ್ನು ಅವರು ಮನಗಂಡಿದ್ದರು. ಪತ್ನಿಯ ಪ್ರಗತಿಶೀಲ ವಿಚಾರಗಳಿಗೆ ಬೆಂಬಲ ನೀಡಿದ್ದರು. ಆದರೆ ಅಂದಿನ ಕ್ರಮಗಳಿಗೆ ಅನುಗುಣವಾಗಿ ಕಮಲಾದೇವಿಯ ವಿವಾಹವನ್ನು ತಮ್ಮ ಹತ್ತಿರದ ಸ್ನೇಹಿತನ ಮಗನೊಂದಿಗೆ ಬಹಳ ಬೇಗನೆ ನಿಶ್ಚಯಿಸಿಬಿಟ್ಟರು! ಬಾಲ್ಯದಲ್ಲಿ ಕಮಲಾಳಿಗೆ ತಂದೆಯ ಪ್ರೀತಿ ದೊರೆತಿತ್ತು. ಮನೆಯ ಒಳಹೊರಗೆ ತಿರುಗಾಡುತ್ತಾ, ಕೊಟ್ಟಿಗೆ, ಹತ್ತಿರದ ಗದ್ದೆ, ಹೂದೋಟವೆಂದು ಎಲ್ಲಾ ಕಡೆಗಳಲ್ಲಿ ಅಲೆದಾಡುತ್ತಾ ತೊಂದರೆ ನೀಡುವ ಮಗಳ ಕುರಿತು ಗಿರಿಜಾಬಾಯಿ ದೂರು ನೀಡಿದರೆ, ಆ ತಂದೆ ನಗುತ್ತಿದ್ದರು. ಬಾಲ್ಯದಲ್ಲಿ ತನ್ನನ್ನು ಸರಿಯಾಗಿ ಅರ್ಥಮಾಡಿಕೊಂಡ ವ್ಯಕ್ತಿ ತಂದೆ ಮಾತ್ರ ಎಂಬ ವಿಶ್ವಾಸ ಕಮಲಾದೇವಿಯದ್ದಾಗಿತ್ತು.

ಆದರೆ ಈ ಸುಖದ ದಿನಗಳಿಗೆ ಒಂದೇ ಬಾರಿ ಅಂತ್ಯ ಬಂತು. ಅನಂತಯ್ಯ ಕಾಯಿಲೆ ಬಿದ್ದು ಬೇಗನೇ ತೀರಿಕೊಂಡರು. ಆ ಕಾಲದಲ್ಲಿ ಮನೆ ಯಜಮಾನರ ಸಾವಿನಿಂದ ಮಹಿಳಾ ಸದಸ್ಯರ ಅಸ್ತಿತ್ವಕ್ಕೆ ಭೀಕರ ಹೊಡೆತ ಬೀಳುತ್ತಿತ್ತು. ಅನಂತಯ್ಯನವರು ಮರಣಶಾಸನವನ್ನು ಬರೆದಿರಲಿಲ್ಲ. ಹಾಗಾಗಿ ಅವರು ಸಂಪಾದಿಸಿದ ಮತ್ತು ಪಿತ್ರಾರ್ಜಿತ ಆಸ್ತಿ ಎಲ್ಲವೂ ಮೊದಲ ಪತ್ನಿಯ ಗಂಡುಮಕ್ಕಳ ಪಾಲಾಯಿತು. ವಾಸದ ಮನೆ ಮಾತ್ರ ಗಿರಿಜಾಬಾಯಿಯ ವಶಕ್ಕೆ ಬಂತು. ಗದ್ದೆ-ತೋಟದ ಉತ್ಪನ್ನ ನಿಂತುಹೋಯಿತು. ಗಿರಿಜಾಬಾಯಿ ತೌರಿನ ಕಡೆಯಿಂದ ಸುಸ್ಥಿತಿಯಲ್ಲಿದ್ದರು. ಅವರು ಗಂಡನ ಜೊತೆಗೂಡಿ ಶ್ರಮದಿಂದ ಬೆಳೆಸಿದ ಆಸ್ತಿ-ಹಣ ಅವರಿಗೆ ಸಿಗದೇ ಹೋಯಿತು. ಬಹುತೇಕ ಈ ಕಾರಣದಿಂದಲೇ ಅತಂತ್ರ ಗಿರಿಜಾಬಾಯಿ ಮಗಳಿಗೆ 14ನೇ ವಯಸ್ಸಿನಲ್ಲಿಯೇ ಮದುವೆ ಮಾಡಿಕೊಡಲು ತಯಾರಾಗಿದ್ದಿರಬೇಕು. ವರ ನಯಂಪಳ್ಳಿ ಕೃಷ್ಣರಾವ್, ಮಂಗಳೂರಿನ ಶ್ರೀಮಂತ ಮನೆತನದ ಸುಬ್ಬರಾವ್ ಅವರ ಸುಪುತ್ರ. ಸ್ವತಃ ಬಾಲ್ಯ ವಿವಾಹದ ವಿರುದ್ಧ ಹೋರಾಡುತ್ತಾ ಬಂದ ಮಹಿಳೆಗೆ ಮಗಳ ಮದುವೆಯನ್ನು ಅಷ್ಟು ಚಿಕ್ಕವಯಸ್ಸಿನಲ್ಲಿ ಮಾಡಬೇಕಾಗಿ ಬಂತು! ಅವರ ಸಂಬಂಧಿಕರು ಅವರ ಆಸ್ತಿಯ ಕೆಲಭಾಗ ಅವರಿಗೆ ಸಿಗುವ ಹಾಗೆ ಪ್ರಯತ್ನ ನಡೆಸಿದರು. ಆದರೆ ಅವರಲ್ಲಿದ್ದ ಸ್ವಾಭಿಮಾನ ಮತ್ತು 'ಹೆಣ್ಣುಮಕ್ಕಳಿಗೆ ಶಿಕ್ಷಣ ಸ್ವಾವಲಂಬನೆಯನ್ನು ನೀಡುತ್ತದೆ!' ಎನ್ನುವ ಅಖಂಡ ವಿಶ್ವಾಸದಿಂದ ಅವರು ಆಸ್ತಿಯ ಮೇಲೆ ಹಕ್ಕು ಸಾಧಿಸುವ ಪ್ರಯತ್ನ ನಡೆಸಲಿಲ್ಲ. ಮಗಳಿಗೆ ಶಿಕ್ಷಣ ನೀಡುವುದನ್ನು ಮುಂದುವರಿಸಿದರು.

ಮಂಗಳೂರಿನ ಎರಡು ಪ್ರತಿಷ್ಠಿತ ಮನೆತನಗಳು ಒಂದೆಡೆ ಬರಲು ಸಾಧ್ಯವಾಯಿತು. ಇದು ಕಮಲ-ಕೃಷ್ಣಾರ ಮದುವೆ ಕಾರಣವಾಗಿ ಆಯಿತಂತೆ! ಆದರೆ ಮದುವೆ ನಡೆದು

ವರ್ಷ ಕಳೆಯುವುದರೊಳಗೆ ಕೃಷ್ಣ ನಯಂಪಳ್ಳಿ, ಕಮಲಾದೇವಿಗಿಂತ ನಾಲ್ಕು ವರ್ಷ ಹಿರಿಯ ಪತಿ–ಹುಡುಗ ತೀರಿಕೊಂಡನು! ಅರ್ಥಾತ್ ಹೆಂಡತಿಯಾಗುವ ಮೊದಲೇ ಕಮಲಾ ವಿಧವೆಯಾದರು. ಗಿರಿಜಾಬಾಯಿಗೆ ಮತ್ತೊಂದು ವಜ್ರಾಘಾತವಾಯಿತು. ಅವರು ಮಗಳಿಗೆ ಶಿಕ್ಷಣ ನೀಡಿ ಅವಳು ತನ್ನ ಕಾಲಿನ ಮೇಲೆ ನಿಂತುಕೊಳ್ಳುವ ಏಕಮಾತ್ರ ಗುರಿಯನ್ನು ಸಾಧಿಸುವುದಕ್ಕಾಗಿ ಕಮಲಾದೇವಿಯನ್ನು ಮತ್ತೆ ಶಾಲೆಗೆ ಕಳುಹಿಸಲು ಪ್ರಾರಂಭಿಸಿದರು. ಊರಿನ ಜನರ ಟೀಕೆಟಿಪ್ಪಣಿಗಳ ಕಡೆಗೆ ಗಮನ ನೀಡಲಿಲ್ಲ. ಕೆಲವೇ ದಿನಗಳಲ್ಲಿ ಸಾಮಾಜಿಕ ಜಾಗೃತಿ ಅಧಿಕಗೊಂಡಿತು. ಇಷ್ಟ ಬಂದೆಡೆ ಹೋಗುವ ಅವಕಾಶ ಒದಗಿತು. ಕಮಲಾದೇವಿಯ ಸೋದರಿ ಸಗುಣಳಿಗೆ ಮೈಹುಷಾರಿಲ್ಲವಾಯಿತು. ಅವಳ ಚಿಕಿತ್ಸೆಗೆಂದು ಅವಳನ್ನು ಮತ್ತು ಕಮಲಾದೇವಿಯನ್ನು ಕರೆದುಕೊಂಡು ಗಿರಿಜಾಬಾಯಿ ಮದ್ರಾಸಿಗೆ ತೆರಳಿದರು. ಆಗ ಕಮಲಾದೇವಿ ಸೀನಿಯರ್ ಕೇಂಬ್ರಿಡ್ಜ್ ಶಾಲಾ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ್ದರು.

## ಅಧ್ಯಾಯ : ೨

# ಅರಳತೊಡಗಿತು ಕಮಲ: ಪ್ರಾಯ, ಲಗ್ನ, ಶಿಕ್ಷಣ

ಧಾರೇಶ್ವರ ಕುಟುಂಬದ ಮೂವರು ಸದಸ್ಯರು ಗಿರಿಜಾಬಾಯಿ, ಸಗುಣ, ಮತ್ತು ಕಮಲ ಮದ್ರಾಸ್ ತಲುಪಿದರು. ಈ ಮಹಾನಗರದಲ್ಲಿ ಕಮಲಾದೇವಿಗೆ ಶಿಕ್ಷಣ ಮಾತ್ರವಲ್ಲ ಬೇರೆ ಬೇರೆ ಹವ್ಯಾಸಗಳನ್ನು ಬೆಳೆಸಲು ಬಹಳ ಅವಕಾಶಗಳು ದೊರೆತವು. ಅವರ ಸೋದರಮಾವ ಕಲ್ಲೆ ನಾರಾಯಣ ರಾವ್, ಪ್ರಸಿದ್ಧ ವಕೀಲರು. ನಂತರ ಲಾ ಕಾಲೇಜಿನ ಮೊದಲ ಭಾರತೀಯ ಪ್ರಾಂಶುಪಾಲರಾಗಿದ್ದವರು. ಅವರು ರಾಷ್ಟ್ರೀಯ ಚಳವಳಿಯ ಕಾರ್ಯದಲ್ಲಿ ಕ್ರಿಯಾಶೀಲರಾಗಿದ್ದುದರಿಂದ ಅವರ ಮನೆ, ಆ ಕಾಲದ ರಾಜಕೀಯ ವ್ಯಕ್ತಿಗಳು ಭೇಟಿ ನೀಡುವ ಕೇಂದ್ರವಾಗಿತ್ತು. ಗೋಪಾಲಕೃಷ್ಣ ಗೋಖಲೆ, ಸರ್ ರಾಮಕೃಷ್ಣ ಭಂಡಾರಕರ್, ಶ್ರೀನಿವಾಸ ಶಾಸ್ತ್ರೀ, ಸರ್ ನಾರಾಯಣ ಚಂದಾವರ್ಕರ್, ಜಸ್ಟಿಸ್ ರಾನಡೆ, ಅವರ ಸಮಾಜಸೇವಕಿ ಪತ್ನಿ ರಮಾಬಾಯಿ ರಾನಡೆ, ತೇಜ್ ಬಹಾದ್ದೂರ್ ಸಪ್ರು, ಸರ್ ಶಂಕರನ್ ನಾಯರ್, ಈ ರೀತಿಯ ಬೇರೆ ಬೇರೆ ಪ್ರದೇಶಗಳ ರಾಜಕೀಯ ಮುಖಂಡರುಗಳ ಆತ್ಮೀಯ ಸ್ನೇಹಿತರಾಗಿದ್ದರು ನಾರಾಯಣ್ ರಾವ್. ಹೀಗಾಗಿ ಕಮಲಾದೇವಿಗೆ ಅವರನ್ನು ಹತ್ತಿರದಿಂದ ನೋಡಿ ಗೊತ್ತಿತ್ತು. ದೇಶದ ಸುದ್ದಿಗಳನ್ನು ಕೇಳಿ, ಮಾತನಾಡಿ ರೂಢಿ ಇತ್ತು. ಮೊದಲಿಂದಲೂ ಪರಿಚಯವಿದ್ದ ಆನಿ ಬೆಸೆಂಟ್ ಮತ್ತು ಮಾರ್ಗರೇಟ್ ಕಸಿನ್ಸ್ ಇವರ ಕರ್ಮಭೂಮಿ ಮದ್ರಾಸ್ ಆಗಿದ್ದರಿಂದ, ಅವರು ನಡೆಸುತ್ತಿದ್ದ ಶಿಕ್ಷಣ ಮತ್ತು ಸಮಾಜ ಸೇವೆಯ ಗಾಢ ಪರಿಚಯವಾಯಿತು. ಅವರು ಮಹಿಳೆಯರಿಗಾಗಿ ನಡೆಸುತ್ತಿದ್ದ ಕಾರ್ಯಕ್ರಮಗಳಿಗೆ ಕಮಲಾದೇವಿ ಪ್ರತ್ಯಕ್ಷದರ್ಶಿಯಾದರು. ಅವರಿಗೆ ಅತ್ಯಂತ ಪ್ರಿಯವಾಗಿದ್ದ ನಾಟಕ ಮತ್ತು ಸಂಗೀತ ಕ್ಷೇತ್ರದಲ್ಲಿ ತರಬೇತಿ, ಜೊತೆಗೆ ಅದರಲ್ಲಿ ಭಾಗವಹಿಸುವ ಸದವಕಾಶ ಕೂಡಾ ಅವರಿಗೆ ಸಿಕ್ಕಿತು.

ಕಮಲಾದೇವಿ ಕ್ವೀನ್ಸ್ ಮೇರೀಸ್ ಕಾಲೇಜಿಗೆ ಸೇರಿಕೊಂಡರು. ಅಲ್ಲಿ ಅವರ ಜೊತೆ, ನಂತರ ಭಾರತದ ಕೋಗಿಲೆಯೆಂದು ಪ್ರಸಿದ್ಧರಾದ ಕವಯತ್ರಿ, ಸ್ವಾತಂತ್ರ್ಯಯೋಧರೆನಿಸಿದ ಸರೋಜಿನಿ ನಾಯ್ಡು ಅವರ ಸೋದರಿ ಸುಹಾಸಿನಿ ಚಟ್ಟೋಪಾಧ್ಯಾಯ ಕಲಿಯುತ್ತಿದ್ದರು. ಅವರ ಮತ್ತೊಬ್ಬ ಸೋದರಿ ಸುನಾಲಿನಿ ಕೂಡಾ ಅಲ್ಲಿಯೇ ಕಲಿಯುತ್ತಿದ್ದರು. ಮದ್ರಾಸಿನ ಸಾಂಸ್ಕೃತಿಕ ಬದುಕಿನಲ್ಲಿ ಚಟ್ಟೋಪಾಧ್ಯಾಯ ಕುಟುಂಬವು ಒಂದು ವಿಧದ ಕ್ರಾಂತಿಯನ್ನೇ ಉಂಟುಮಾಡಿತ್ತು. ಅವರ ತಂದೆಯ ಹೆಸರಿನಲ್ಲಿ ನಿರ್ಮಿಸಿದ ಅಘೋರ ಮಂದಿರವು ಸಾಹಿತ್ಯ, ಸಂಗೀತ, ನಾಟಕ, ಭಾಷಣಗಳ ಒಟ್ಟು ಪ್ರಯೋಗಶಾಲೆಯಾಗಿತ್ತು. ಈ ವಿಷಯಗಳನ್ನು ತಿಳಿದುಕೊಂಡಿದ್ದ ಪುರುಷರು, ಮಹಿಳೆಯರು ಅಲ್ಲಿಗೆ ಭೇಟಿ ನೀಡಿ, ಹೊಸ ಪ್ರಯೋಗಗಳನ್ನು ನೋಡುತ್ತಿದ್ದರು, ವಿಚಾರ ವಿನಿಮಯ ಮಾಡುತ್ತಿದ್ದರು. ಪ್ರಸಿದ್ಧ ಹಿಂದುಸ್ತಾನಿ, ಕರ್ನಾಟಕಿ ಮತ್ತು ಪಾಶ್ಚಾತ್ಯ ಸಂಗೀತದ ಗಾಯಕರ ಕಚೇರಿಗಳು ಅಲ್ಲಿ ನಡೆಯುತ್ತಿದ್ದವು. ಒಂದು ಪತ್ರಿಕೆಯನ್ನು ಕೂಡಾ ಅವರು ಪ್ರಕಟಿಸುತ್ತಿದ್ದರು. ಆಕ್ಸ್‌ಫರ್ಡ್‌ಗೆ ಹೋಗಿಬಂದಿರುವ ಸರೋಜಿನಿ ನಾಯ್ಡು ಅವರ ಇನ್ನೊಬ್ಬ ಸೋದರಿ ಮೃಣಾಲಿನಿ ಆ ಮಂದಿರವನ್ನು (ಅದಕ್ಕೆ ಕ್ಲಬ್, ಸಲೂನ್ ಎಂದು ಕೂಡಾ ಕರೆಯುತ್ತಿದ್ದರು) ನಡೆಸುತ್ತಿದ್ದರು.

ಕಮಲಾದೇವಿ ಈ ಮಂದಿರದಲ್ಲಿ ನಡೆಯುವ ಎಲ್ಲಾ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಪ್ರಾರಂಭಿಸಿದರು. ತನ್ನ ಮನಸ್ಸಿಗೆ ಇಷ್ಟವಾಗುವ ಹವ್ಯಾಸದಲ್ಲಿ ಪಾಲುಗೊಳ್ಳುವ ಅವಕಾಶ ದೊರೆತದ್ದಕ್ಕೆ ಅವರು ಸಂತುಷ್ಟರಾದರು. ಮಂಗಳೂರಿನ ಸಾಂಪ್ರದಾಯಿಕ ವಾತಾವರಣದಲ್ಲಿ ಮಗಳಿಗೆ ಶಿಕ್ಷಣ ನೀಡಿ ಮುಂದೆ ತರುವುದು ಹೇಗೆಂಬ ಚಿಂತೆ ಗಿರಿಜಾಬಾಯಿಗೆ ಇತ್ತು. ಈಗ ಆ ಚಿಂತೆಯೂ ದೂರವಾಯಿತು. ಸರಿಯಾದ ಚಿಕಿತ್ಸೆ ದೊರೆತು ಸಗುಣಾಳ ಆರೋಗ್ಯ ಸುಧಾರಿಸಲಾರಂಭಿಸಿತು.

ಚಟ್ಟೋಪಾಧ್ಯಾಯ ಕುಟುಂಬದ ಸಹೋದರ ಹರೀಂದ್ರನಾಥ್ ಎಲ್ಲರ ಪ್ರೀತಿಗೆ ಪಾತ್ರರಾಗಿದ್ದ ವ್ಯಕ್ತಿ. ಅವರ ಹಿರಿಯಣ್ಣ ವೀರೇಂದ್ರನಾಥ್ ಸಣ್ಣವಯಸ್ಸಿನಲ್ಲಿಯೇ ಇಂಗ್ಲೆಂಡಿಗೆ ತೆರಳಿ, ಭಾರತಕ್ಕೆ ಸ್ವಾತಂತ್ರ್ಯ ದೊರೆಯಬೇಕೆಂಬ ಆಶಯದ ಕ್ರಾಂತಿಕಾರಿ ದಳವನ್ನು ಸೇರಿದ್ದರು. ಅವರು ಭಾರತಕ್ಕೆ ಬಂದರೆ ಕಾಲಾಪಾನಿ ಶಿಕ್ಷೆಗೆ ಗುರಿಯಾಗುವುದು ಖಂಡಿತವಿತ್ತು. ಹೀಗಾಗಿ ಅವರು ಯುರೋಪಿನಲ್ಲಿಯೇ ಉಳಿದು ಅಲ್ಲಿಂದಲೇ ಬೇರೆಬೇರೆ ವಿಧದಲ್ಲಿ ದೇಶಸೇವೆ ನಡೆಸುತ್ತಿದ್ದರು. ಜಾಗತಿಕ ಸಮಾಜವಾದಿ ಪಕ್ಷದ ಸದಸ್ಯರಾಗಿದ್ದರು. ಆಗಿನ ಸಮತಾವಾದಿಗಳು ಮತ್ತು ಸಮಾಜವಾದಿಗಳ ನಡುವೆ ಈಗಿನ ಹಾಗೆ ಕಠಿಣ ಮತಬೇಧವಿರಲಿಲ್ಲ. ಜಗತ್ತಿನ ಬಹಳಷ್ಟು ಧೀಮಂತ ಜನರಿಗೆ ವೈಯಕ್ತಿಕ ರೂಪದಿಂದ ವೀರೇಂದ್ರನಾಥ್ ಪರಿಚಯವಿದ್ದರು.

ಹರೀಂದ್ರನಾಥ್, ಬಹುಮುಖ ಪ್ರತಿಭಾಶಾಲಿ. ಕವಿ, ಭಾಷಣಕಾರ, ನಟ, ನಾಟಕಕಾರ, ಸಂಗೀತ ಸಂಯೋಜಕ, ಸ್ವತಃ ಉತ್ತಮ ಗಾಯಕ ಮತ್ತು ಎರಡು ಮೂರು ವಾದ್ಯಗಳನ್ನು ನುಡಿಸಬಲ್ಲವರು. ಆಕರ್ಷಕ ವ್ಯಕ್ತಿತ್ವವಿದ್ದುದರಿಂದ ಯಾವುದೇ ಪಾತ್ರದಲ್ಲಿ ಅವರು ಮಿಂಚುತ್ತಿದ್ದರು. ಅವರು ಉಸ್ತಾದ್ ಅಬ್ದುಲ್ಲಾ ಕರೀಮ್ ಖಾನರ ಜೊತೆ ಗಾಯನವನ್ನು ಕೂಡಾ ನಡೆಸಿದ್ದರು. ಡಾ. ಆನಿ ಬೆಸೆಂಟ್ ಅವರಿಂದ ಹರೀಂದ್ರನಾಥರ ಕವನ ಸಂಕಲನ ಬೆಳಕಿಗೆ ಬಂದಿತ್ತು.

ಚಟ್ಟೋಪಾಧ್ಯಾಯ ಕುಟುಂಬದ ಸದಸ್ಯರು ಕಮಲಾದೇವಿಗೆ ಹತ್ತಿರದವರಾದರು. ಕಮಲಾದೇವಿಯ ಸಹಜ ಸೌಂದರ್ಯ, ಲಾವಣ್ಯ, ಗಾಂಭೀರ್ಯ ಮತ್ತು ಬುದ್ಧಿವಂತಿಕೆಗೆ ಹರೀಂದ್ರನಾಥ್ ಮರುಳಾದರು! ಅವರು ಅವಳ ಕುರಿತು ಸುಂದರ ಕವಿತೆಗಳನ್ನು ರಚಿಸಿ ಕಳುಹಿಸಲು ಪ್ರಾರಂಭಿಸಿದರು. ಸಾರ್ವಜನಿಕ ಕಾರ್ಯಕ್ರಮವೊಂದರಲ್ಲಿ, ತಮ್ಮ ಒಂದು ಕವನವನ್ನು ಭಾವಪೂರ್ಣವಾಗಿ ವಾಚಿಸುತ್ತಾ ಅವರು ಕಮಲಾದೇವಿಯ ಕಡೆಗೆ ನೋಟ ಹರಿಸಿದ್ದನ್ನು ಹಿರಿಯರು ನೆನಪಿಸಿಕೊಳ್ಳುತ್ತಿದ್ದರು! ಎಷ್ಟೋ ವಿಚಾರಗಳಲ್ಲಿ ಕಮಲಾ ಮತ್ತು ಹರೀಂದ್ರನಾಥರ ಇಷ್ಟಾನಿಷ್ಟಗಳು ಒಂದೇ ರೀತಿಯದ್ದಾಗಿದ್ದವು. ಅವರಿಬ್ಬರೂ ಹತ್ತಿರವಾದರು. ಇಬ್ಬರೂ ಮದುವೆಯಾಗಲು ನಿರ್ಧರಿಸಿದರು.

ಇದು ಗಿರಿಜಾಬಾಯಿಯ ಗಮನಕ್ಕೆ ಮೊದಲು ಬಂದಿರಲಿಲ್ಲ. ಆದರೆ ಹರೀಂದ್ರನಾಥರಿಗೆ ಇನ್ನೊಬ್ಬರ ಮೇಲೆ ಪ್ರಭಾವ ಬೀರುವ ಕಲೆ ಚೆನ್ನಾಗಿ ಕರಗತವಾಗಿತ್ತು. ಗಿರಿಜಾಬಾಯಿ ಕೂಡಾ ಅವರಿಂದ ಪ್ರಭಾವಿತರಾದರು. ಅವರು ಒಂದೇ ಒಂದು ಷರತ್ತನ್ನು ಮುಂದಿಟ್ಟರು. ಮದುವೆಯ ನಂತರವೂ ಕಮಲಾ ತನ್ನ ಶಿಕ್ಷಣವನ್ನು ಮುಂದುವರಿಸಬೇಕು ಎಂದುಕೊಂಡು. ಹರೀಂದ್ರನಾಥ್ ಮಂಗಳೂರಿಗೆ ಬಂದು ಅವರೊಡನಿದ್ದು ಅವರ ವ್ಯವಹಾರಗಳನ್ನು ನೋಡಿಕೊಳ್ಳಬೇಕೆನ್ನುವುದು ಗಿರಿಜಾಬಾಯಿಯ ಆಶಯವಾಗಿತ್ತು. ಅದಕ್ಕೆ ಹರೀಂದ್ರನಾಥರು ಸಮ್ಮತಿಸಿದರು.

ಈ ಸುದ್ದಿ ಕಮಲಾದೇವಿಯ ಮಾವನಿಗೆ (ಮೊದಲ ಪತಿಯ ತಂದೆ) ತಲುಪಿತು. ಅವರು ಆಕೆಯ ತಂದೆಯ ಆಪ್ತ ಸ್ನೇಹಿತರಾಗಿದ್ದವರು. ಕಮಲಾದೇವಿಯ ಪುನರ್ವಿವಾಹದ ಕುರಿತು ಅವರ ಆಕ್ಷೇಪಣೆ ಇರಲಿಲ್ಲ. ಆದರೆ ಹುಡುಗ ಯೋಗ್ಯನಾಗಿರಬೇಕೆಂಬುದು ಅವರ ಅಪೇಕ್ಷೆಯಾಗಿತ್ತು. ಅವರು ಹರೀಂದ್ರನಾಥರ ವಿಳಾಸ ಪಡೆದು, ಆತನ ಹಿಂದಿನ ಚರಿತ್ರೆ ಇತ್ಯಾದಿ ಪತ್ತೆ ಹಚ್ಚಿದರು. ಕಮಲಾದೇವಿಯ ಸ್ವಭಾವ ಮತ್ತು ಇರುವಿಕೆ ಎರಡಕ್ಕೂ ಆತ ಯೋಗ್ಯ ವರನಲ್ಲವೆಂಬ ಅಭಿಪ್ರಾಯಕ್ಕೆ ಬಂದರು. ಇದನ್ನು ಕಮಲಾದೇವಿಗೆ ಕೂಡಾ ಮನಗಾಣಿಸಿದರು. ಆಕೆ ಶಿಕ್ಷಣದ ಕಡೆಗೆ ಗಮನವನ್ನು ನೀಡಿದರೆ ವಿದೇಶಕ್ಕೆ ಕಳುಹಿಸುವ ಖರ್ಚನ್ನು ಭರಿಸುವುದಕ್ಕೆ ಕೂಡಾ ಅವರು ತಯಾರಿದ್ದರು. ಆದರೆ ಕಮಲಾದೇವಿ ಇದಕ್ಕೆ ಒಪ್ಪಲಿಲ್ಲ. ಅಲ್ಲಿಯವರೆಗೆ ಕಮಲಾದೇವಿ ಆ ಮನೆಯ ಪ್ರೀತಿಯ ಸೊಸೆಯಾಗಿ ಸಲಿಗೆಯಿಂದ ಇದ್ದರು. ಈ ಘಟನೆಯ ನಂತರ ಆ ಸಂಬಂಧ ಉಳಿಯಲಿಲ್ಲ.

ವಿವಾಹವಾಗುವ ಮೊದಲೇ ಹರೀಂದ್ರನಾಥರ ಎರಡು ಪ್ರಣಯ ಪ್ರಸಂಗಗಳು ಇದ್ದವು. ಅವರು ಕವಿ, ಭಾವನಾತ್ಮಕ ಜೀವಿ, ಇಂತಹವರ ದುರ್ಬಲ ಕ್ಷಣಗಳು ಇರುತ್ತವೆ ಎನ್ನುವ ತಿಳಿವಳಿಕೆ ಗಿರಿಜಾಬಾಯಿಗೂ ಇತ್ತು, ಅವರ ಮಗಳಿಗೂ ಇತ್ತು. ಈ ರೀತಿಯ ತರುಣರು ಮದುವೆಯಾಗಿ ಜವಾಬ್ದಾರಿ ಹೆಗಲೇರಿದ ನಂತರ ಸುಧಾರಿಸಿಕೊಳ್ಳುತ್ತಾರೆ ಎನ್ನುವುದು ಎಲ್ಲರ ನಂಬಿಕೆಯಾಗಿರುತ್ತದೆ. ಇದಕ್ಕೆ ಗಿರಿಜಾಬಾಯಿ ಮತ್ತು ಕಮಲಾದೇವಿ ಅಪವಾದವಾಗಿರಲಿಲ್ಲ.

ಕಮಲಾದೇವಿಯಲ್ಲಿ ಇದ್ದಂತಹ ಪಕ್ವತೆ, ಗಾಂಭೀರ್ಯ, ಸಂಯಮ, ಅವಳನ್ನು ಪ್ರೀತಿಸಿ ಬಂದ ವ್ಯಕ್ತಿಯಲ್ಲಿ ಇರಲಿಲ್ಲ. ಆದರೆ ಹರೀಂದ್ರನಾಥರ ಅಪೂರ್ವ ('ವಿಲಕ್ಷಣ'ವೆನ್ನಬಹುದಾದ!) ಪ್ರತಿಭೆಯಿಂದ ಅವರ ಈ ಕೊರತೆಯು ಕ್ಷುಲ್ಲಕವಾಗಿ ಕಂಡಿತು, ಉಳಿದವರು ಅವರನ್ನು 'ಅಪರೂಪದ ಜೋಡಿ' ಎಂದು ಹೊಗಳಿದರು. 'ನಾವು ಜೊತೆಯಾಗಿ ಹೋಗುವಾಗ ದೇವದೂತರು ಕೂಡಾ ಮತ್ಸರ ಪಡುತ್ತಿದ್ದರು!' ಎಂದು ಇಂಗ್ಲೆಂಡಿನಲ್ಲಿರುವಾಗ ಹರೀಂದ್ರನಾಥ್ ಉದ್ಗಾರ ತೆಗೆದಿದ್ದರು.

1919ನೇ ಇಸವಿಯಲ್ಲಿ ಕಮಲಾದೇವಿಯ ವಿವಾಹ ಹರೀಂದ್ರನಾಥ್ ಚಟ್ಟೋಪಾಧ್ಯಾಯರೊಂದಿಗೆ ಸಿವಿಲ್ ಪದ್ಧತಿಯಂತೆ ನಡೆಯಿತು. ಆಗ ಕಮಲಾದೇವಿಗೆ ಹದಿನಾರರ ಹರೆಯ. ಇದು ಎರಡೂ ಕಡೆಯ ಸ್ನೇಹಿತರಿಗೆ ನವೀನ ಯುಗದ ಆದರ್ಶ ಮದುವೆಯಂತೆ ಕಂಡಿತು. ಅತ್ಯಂತ ಪ್ರಗತಿಶೀಲರಾಗಿದ್ದ ಚಟ್ಟೋಪಾಧ್ಯಾಯ ಕುಟುಂಬದ ಸದಸ್ಯರು ಈ ಮದುವೆಯನ್ನು ಸಂತೋಷದಿಂದ ಸ್ವಾಗತಿಸಿದರು. ಆ ಕಾಲದಲ್ಲಿಯೇ ಸರೋಜಿನಿಯವರು ತನಗಿಂತ ವಯಸ್ಸಿನಲ್ಲಿ ಬಹಳ ದೊಡ್ಡವರಾಗಿದ್ದ ಡಾ. ಗೋವಿಂದರಾಜು ನಾಯ್ಡು ಅವರೊಂದಿಗೆ ಪ್ರೇಮವಿವಾಹ ಮಾಡಿಕೊಂಡಿದ್ದರು. ಲಗ್ನವಾದ ಕೂಡಲೇ ಹರೀಂದ್ರನಾಥರ ಮೇಲೆ ಅವರ ಸೋದರಿಯರ ಪ್ರಭಾವ ಹೆಚ್ಚು ಇರುವುದು ಕಮಲಾದೇವಿಗೆ ತಿಳಿಯಿತು. ಹರೀಂದ್ರನಾಥ್ ಮಂಗಳೂರಿಗೆ ಹೋಗಿ ನೆಲೆಸಲು ಮೃಣಾಲಿನಿ ಬಿಡಲೇ ಇಲ್ಲ! ಎರಡು ತಿಂಗಳೊಳಗೆ ಹರೀಂದ್ರನಾಥರನ್ನು ಉಚ್ಚಶಿಕ್ಷಣಕ್ಕಾಗಿ ಇಂಗ್ಲೆಂಡಿಗೆ ಕಳುಹಿಸುವ ವ್ಯವಸ್ಥೆ ಮಾಡಲಾಯಿತು. ಆದರೆ ಈ ವಿಚಾರವನ್ನು ಕಮಲಾದೇವಿಗೆ ತಿಳಿಸಲೇ ಇಲ್ಲ! ಪ್ರಯಾಣದ ಸಿದ್ಧತೆ ಪ್ರಾರಂಭವಾದಾಗ ಅವರ ಗಮನಕ್ಕೆ ಅದು ಬಂತು. ಹರೀಂದ್ರನಾಥ್ ಇಂಗ್ಲೆಂಡಿಗೆ ತೆರಳಿದ ನಂತರ ಅವರ ಮನೆಯವರು ಕಮಲಾದೇವಿಯಲ್ಲಿ ಆಸಕ್ತಿ ತೋರಿಸಲೇ ಇಲ್ಲ! ಕಮಲಾದೇವಿ ಮಂಗಳೂರಿಗೆ ಮರಳಿ ಬಂದರು.

ಗಿರಿಜಾಬಾಯಿಗೆ ಒಂದು ವಿಚಾರದಲ್ಲಿ ಮಾತ್ರ ಅಧೈರ್ಯವಿತ್ತು. ಅದೇನೆಂದರೆ, ಹರೀಂದ್ರನಾಥ್ ಲಹರಿ ಮನುಷ್ಯ! ಅವರಿಗೆ ಷೋಕಿಯ ಬದುಕೆಂದರೆ ತುಂಬ ಇಷ್ಟ. ಈ ಕಾರಣದಿಂದಾಗಿ ಪಾಲಿಸಬೇಕಾಗಿರುವ ನಿಷ್ಠೆ, ನಿಯಮಗಳಿಗೆ ಅವರು ಗಮನ ಹರಿಸುತ್ತಿರಲಿಲ್ಲ.

ಅವರು ಮಂಗಳೂರಿಗೆ ಮರಳಿ ಬಂದ ಕೆಲವೇ ದಿನಗಳಲ್ಲಿ ಸಗುಣಾಳ ಸಾವು ಸಂಭವಿಸಿತು. ಮದ್ಯವ್ಯಸನಿಯಾಗಿದ್ದ ಅವಳ ಗಂಡ, ಹೆಂಡತಿಯನ್ನು ಹೀನವಾಗಿ ಕಾಣುತ್ತಿದ್ದನು. ಇದರಿಂದ ಕಮಲಾದೇವಿ ಬಹಳ ಬೇಸರ ಅನುಭವಿಸುತ್ತಿದ್ದರು. ಆದರೆ ತನ್ನ ಬದುಕಿನಲ್ಲಿಯೂ ಹೆಂಡ ಸೇವನೆ, ಅದರಿಂದ ಯಾತನೆ ಅನುಭವಿಸುವ ಪ್ರಸಂಗ ಬರಬಹುದು ಎಂದು ಆಲೋಚಿಸುವುದು ಕೂಡಾ ಆ ಹದಿನಾರು ವರ್ಷದ ಹುಡುಗಿಗೆ ಸಾಧ್ಯವಿರಲಿಲ್ಲ.

ಗಾಂಧೀಜಿಯವರು ಸತ್ಯಾಗ್ರಹ ಮತ್ತು ಅಹಿಂಸಾತ್ಮಕ ರೀತಿಯಲ್ಲಿ ಕಾನೂನು ಭಂಗ ಮಾಡುವ ಚಳವಳಿಯನ್ನು ಪ್ರಾರಂಭಿಸಿದ್ದರು. ಈ ಚಳವಳಿ 1919ನೇ ಇಸವಿ, ಎಪ್ರಿಲ್ 6 ರಂದು ಮುಂಬೈಯಲ್ಲಿ ಪ್ರಾರಂಭವಾಗುವುದರಲ್ಲಿತ್ತು. ಕ್ರಾಂತಿಯ ವಿಚಾರವನ್ನು ಆಪ್ತವಾಗಿಸಿ ಕೊಂಡಿದ್ದ ಯುವತಿ ಕಮಲಾದೇವಿಗೆ ಸತ್ಯಾಗ್ರಹದಲ್ಲಿ ನಂಬಿಕೆ, ವಿಶ್ವಾಸ ಇರದಿದ್ದುದು ಆಶ್ಚರ್ಯವೇನಲ್ಲ! ಆದರೆ 'ಹ್ಯುಮನ್ ಡೈನಮೋ' ಎಂದೇ ಪ್ರಸಿದ್ಧರಾಗಿದ್ದ, ಲಕ್ಷಾಂತರ ಜನರಿಗೆ ತನ್ನ ಮಾತಿನಿಂದ ಮೋಡಿ ಮಾಡುತ್ತಿದ್ದ ವ್ಯಕ್ತಿಯನ್ನು ನೋಡಲು ಅವರಲ್ಲಿ ಬಹಳ ಉತ್ಸಾಹವಿತ್ತು. ಗಾಂಧೀಜಿಯವರನ್ನು ಭೇಟಿಯಾಗಬಹುದೆಂದು ಸರೋಜಿನಿ ನಾಯ್ಡು ಅವರಿಗೆ ತಿಳಿಸಿದ್ದರು. ಹಿಂದಿನ ದಿನ ಚೌಪಾಟಿಯಲ್ಲಿ ಅಸಂಖ್ಯಾತ ತಲೆಗಳ ಆಚೆ ಪುಟ್ಟದಾಗಿ ಕಂಡ ವ್ಯಕ್ತಿಯನ್ನು ಮರುದಿನ ಹತ್ತಿರದಿಂದ ನೋಡುವ ಅವಕಾಶ ಅವರಿಗೆ ದೊರೆಯಿತು.

ಗಾಂಧೀಜಿಯ ಅಂತಃಶಕ್ತಿ ಅವರ ವ್ಯಕ್ತಿತ್ವದಲ್ಲಿ ಸ್ಪಷ್ಟವಾಗಿ ಗೋಚರಿಸುತ್ತಿತ್ತು. ಅವರ ಕಣ್ಣಿನಲ್ಲಿ ಕರುಣೆ ಎದ್ದು ಕಾಣುತ್ತಿತ್ತು. ಇಲ್ಲಿಯವರೆಗೆ ದಯೆ, ಮಾಯೆ, ಕರುಣೆ ಎಂಬ ಶಬ್ದಗಳು ಬದುಕಿನಿಂದ ಮಾಯವಾಗಿಬಿಟ್ಟಿವೆ ಎಂಬುದು ಕಮಲಾದೇವಿಯ ಭಾವನೆ ಯಾಗಿತ್ತು. ಅವರ ದೃಷ್ಟಿಯಲ್ಲಿ ಒಬ್ಬ ಮನುಷ್ಯನನ್ನು ಉತ್ತಮಗೊಳಿಸುವುದು ಈ ಗುಣಗಳೇ. ಅವರು ಇಲ್ಲಿ ಒಬ್ಬ ವ್ಯಕ್ತಿಯ ಆಚಾರ, ವಿಚಾರ, ಮಾತುಗಳನ್ನು ಅವರ ವ್ಯಕ್ತಿತ್ವದ ಪಾರದರ್ಶಕತೆಯಲ್ಲಿ ಕಂಡರು. ಅವರು ಗಾಂಧೀಜಿಯವರ ಭಾಷಣವನ್ನು ಕೇಳುತ್ತಿರುವುದು ಇದೇ ಮೊದಲಬಾರಿ. ಗಾಂಧೀಜಿಯ ಮಾತು ನಿಧಾನವಾಗಿದ್ದರೂ, ಅದು ದೃಢವಾಗಿ ಹೊರಬರುತ್ತಿತ್ತು. ಅವರ ವಿಚಾರ ಎಷ್ಟು ಖಚಿತವಾಗಿ ಇರುತ್ತಿತ್ತೆಂದರೆ, ಇವು ಅವರು ಚೆನ್ನಾಗಿ ಅಭ್ಯಾಸ ಮಾಡಿ ಹೇಳುತ್ತಿರುವ ಮಾತುಗಳು ಎಂಬಂತೆ ಭಾಸವಾಗುತ್ತಿತ್ತು. ಭಾರತೀಯರ ಮೇಲೆ ಬಾಪೂ ಹಾಕಿದ ಮೋಡಿ ಯಾವ ರೀತಿಯದು ಎನ್ನುವುದು ಕಮಲಾದೇವಿಗೆ ತಿಳಿದುಹೋಯಿತು. ಆ ಸಭೆಯಲ್ಲಿ ಎಲ್ಲರೂ ಸ್ವದೇಶಿ ವಸ್ತುಗಳನ್ನು ಬಳಸಬೇಕು ಎಂದು ಪ್ರತಿಜ್ಞೆ ಮಾಡಬೇಕಿತ್ತು. ಸಮಾಜದ ಏಕತೆಗೆ, ಅಹಿಂಸೆಯ ಪಾಲನೆಗೆ ಕೂಡಾ ಶಪಥವನ್ನು ತೆಗೆದುಕೊಳ್ಳಬೇಕಿತ್ತು. ನೆರೆದ ಸಣ್ಣ ಸಂಖ್ಯೆಯ ಜನರು ಆ ಶಪಥವನ್ನು ಮಾಡಿದರು. ಹರತಾಳ ಪ್ರಾರಂಭವಾಯಿತು. ಗಾಂಧೀಜಿಯವರ ಅಸಹಕಾರ ಚಳವಳಿ ಅತ್ಯಂತ ಶಾಂತರೂಪದ್ದಾಗಿದ್ದರೂ, ಬ್ರಿಟಿಷರು ಹೆದರಿದರು! ಗಾಂಧೀಜಿ ಬರೆದ 'ಹಿಂದ್ ಸ್ವರಾಜ್ಯ' ಮತ್ತು ರಸ್ಕಿನ್ ಕವಿಯ 'ಅನ್‌ಟು ದಿಸ್ ಲಾಸ್ಟ್' ಗ್ರಂಥದ ಗುಜರಾತಿ ಭಾಷಾಂತರ, ಇವೆರಡೂ ರಾಜದ್ರೋಹಿ ಗ್ರಂಥಗಳೆಂದು ಅವರು ನಿರ್ಧರಿಸಿದರು! ಕಮಲಾದೇವಿಗೆ ಇದು ತಮಾಷೆಯ ವಿಚಾರವಾಯಿತು. ಅವರು ಈ ಎರಡೂ ಗ್ರಂಥಗಳನ್ನು ತನಗೆ ಸಾಧ್ಯವಾದಷ್ಟು

ಮಾರಾಟ ಮಾಡಿದರು. ಮಾರುವಾಗ 'ನಿಮಗೆ ಜೈಲಾಗಬಹುದು, ಬಂಧನ ಖಂಡಿತ!' ಎಂದು ಹೇಳುತ್ತಾ ಹೋದರು. ಆದರೆ ಯಾರೂ ಇದಕ್ಕೆ ಲಕ್ಷ್ಯ ಕೊಡಲೇ ಇಲ್ಲ. ಅಷ್ಟೇ ಅಲ್ಲ ಜನರು ತಮ್ಮ ಕಿಸೆಯಲ್ಲಿದ್ದ ಹಣವನ್ನೆಲ್ಲಾ ನೀಡಿ ಜಾಸ್ತಿ ಸಂಖ್ಯೆಯ ಗ್ರಂಥಗಳನ್ನು ಖರೀದಿಸಿ, ಎಲ್ಲರಿಗೂ ಅದನ್ನು ಹಂಚಿ, ಕಮಲಾದೇವಿಗೆ ಹಣ ಸಂಗ್ರಹಿಸಿ ನೀಡಿದರು!

ಆದರೆ, ಬ್ರಿಟಿಷರ ವಿರುದ್ಧ ಕೆಲವರಲ್ಲಿ ಕುದಿಯುತ್ತಿದ್ದ ಸಿಟ್ಟು ಹೊರಬೀಳುವುದಕ್ಕೆ ಇದರಿಂದ ಅವಕಾಶ ದೊರೆಯಿತು. ಹೆಚ್ಚಿನ ಜನರಿಗೆ ದೇಶದಲ್ಲಿ ಏನಾಗುತ್ತಿದೆ? ಎನ್ನುವುದರ ಕುರಿತು ಜಾಗೃತಿ ಉಂಟಾಯಿತು. ಶಾಂತವಾಗಿ ನಡೆಯುತ್ತಿದ್ದ ಸಭೆ ಅಥವಾ ಕಾರ್ಯಕ್ರಮಗಳಿಗೆ ನಾಲ್ಕಾರು ಪೋಲೀಸರು ಬಂದು ಜನರನ್ನು ಲಾಟಿಯಿಂದ ಒಂದೇಸವನೆ ಹೊಡೆದೋಡಿಸುವ ಕ್ರಮ ಅಲ್ಲಿಂದಲೇ ಜಾರಿಗೆ ಬಂತು. ಜಲಿಯನ್‌ವಾಲಾಬಾಗ್‌ನ ದುರಂತ ಘಟಿಸಿದ್ದು ಆಗಲೇ. ಅದರ ಕರಾಳ ಛಾಯೆ ಪಂಜಾಬಿನಿಂದ ದೂರವಿದ್ದ ಮುಂಬೈ ಮತ್ತು ದಕ್ಷಿಣದ ಮದ್ರಾಸಿನವರೆಗೆ ಪಸರಿಸುತ್ತಾ ಹೋಯಿತು.

ಈ ಸಂದರ್ಭದಲ್ಲಿ ಗಾಂಧೀಜಿಯವರು ಸಾಧಿಸಿದ ಸಂಯಮ ಮತ್ತು ಆ ಸಂಯಮ ಸಂತಪ್ತ ಜನರನ್ನು ನಿಯಂತ್ರಿಸಿದ್ದು ಭಾರತದ ಸ್ವಾತಂತ್ರ್ಯ ಸಮರದಲ್ಲಿ ಉಜ್ವಲ ಉದಾಹರಣೆಯಾಗಿ ಉಳಿಯಿತು. ಹಿಂಸಾತ್ಮಕ ಬ್ರಿಟಿಷ್ ಸಾಮ್ರಾಜ್ಯವನ್ನು ಅಹಿಂಸಾತ್ಮಕ ರೀತಿಯಿಂದ ಎದುರಿಸುವ ವಿಧಾನ ಜಾರಿಗೆ ಬಂತು! ಅಸಹಕಾರ ಚಳವಳಿ ಪ್ರಾರಂಭ ವಾಯಿತು. ನ್ಯಾಯವಾದಿಗಳು ತಮ್ಮ ಪ್ರಾಕ್ಟಿಸ್‌ನ್ನು ಕೈಬಿಟ್ಟರು. ವಿದ್ಯಾರ್ಥಿಗಳು ಶಾಲೆ-ಕಾಲೇಜನ್ನು ತೊರೆದು ಹೊರಬಂದರು. ಎಷ್ಟೋ ಜನರು ತಮ್ಮ ಸರಕಾರಿ ಉದ್ಯೋಗವನ್ನು ಬಿಟ್ಟುಕೊಟ್ಟರು. ಚಳವಳಿಯಲ್ಲಿ ಸಕ್ರಿಯವಾಗಿ ಪಾಲುಗೊಳ್ಳಲು ಕಮಲಾದೇವಿಯ ಜೀವ ಚಡಪಡಿಸುತ್ತಿತ್ತು. ಆದರೆ ಅವರ ಚಿಕ್ಕ ವಯಸ್ಸು (16 ವರ್ಷ) ಅದಕ್ಕೆ ಅಡ್ಡ ಬಂತು! ಅವರು ನೂಲು ತೆಗೆದು ಬಟ್ಟೆ ನೇಯುವ ಚಳವಳಿಯ ಕುರಿತು ಚಿಕ್ಕ ನಾಟಕಗಳನ್ನು ಬರೆದು, ಆಡಿಸಿ, ಸಮಾಧಾನ ಪಟ್ಟುಕೊಳ್ಳಬೇಕಾಯಿತು.

ಆಗ ಕಮಲಾದೇವಿಯ ಸಾರ್ವಜನಿಕ ಬದುಕಿನ ಮೇಲೆ ಉಂಟಾದ ಗಾಂಧೀಜಿ ಪ್ರಭಾವವು ಅವರ ಜೀವನಪರ್ಯಂತ ಉಳಿಯಿತು. ಸ್ವಾತಂತ್ರ್ಯ ದೊರೆತ ಕೂಡಲೇ ಅವರು ಪಕ್ಷವನ್ನು ತೊರೆದು, ಸಕ್ರಿಯ ರಾಜಕಾರಣದಿಂದ ದೂರವೇ ಉಳಿದರು. ಆದರೆ ತನ್ನ ಸ್ವಂತಿಕೆಯಿಂದ ಗಾಂಧೀಜಿಯವರ ಎಷ್ಟೋ ರಚನಾತ್ಮಕ ವಿಚಾರಗಳಿಗೆ ಜೀವಂತರೂಪವನ್ನು ನೀಡಿದರು ಎಂಬುದನ್ನು ನಾವು ಆಮೇಲೆ ನೋಡುತ್ತೇವೆ. ಸೋದರಿಯ ಸಾವು, ಪತಿಯ ವಿದೇಶಯಾತ್ರೆ ಮತ್ತು ಮಂಗಳೂರಿನ ಜನರ ದೂರವಿಡುವ ಸ್ವಭಾವದಿಂದಾಗಿ ತನ್ನ ಮುಂದಿನ ಶಿಕ್ಷಣಕ್ಕೆ ವಿದೇಶಕ್ಕೆ ಹೋಗುವ ನಿರ್ಧಾರವನ್ನು ಅವರು ಕೈಗೊಂಡರು. ತಾಯಿಯಿಂದ ಪೂರ್ಣ ಬೆಂಬಲ ದೊರೆಯಿತು. ಅವರು ವಿದೇಶಕ್ಕೆ ಹೋಗಲು ಇದ್ದ ಚಿನ್ನವನ್ನೆಲ್ಲಾ ಮಾರಿ ಟಿಕೇಟ್ ಖರೀದಿಸಿದ್ದರೆಂದು ತಿಳಿದುಬರುತ್ತದೆ.

ಇಂಗ್ಲೆಂಡಿಗೆ ಹೋಗಿ ತನಗೆ ಇಷ್ಟವಾದ ನಾಟಕ ಮತ್ತು ಸಂಗೀತ ಕ್ಷೇತ್ರದಲ್ಲಿ ತರಬೇತಿ ಪಡೆಯುವುದು ಅವರ ವಿಚಾರವಾಗಿತ್ತು. ಆದರೆ ಗಾಂಧೀಜಿ ಪ್ರಭಾವದಿಂದ ಸಾರ್ವಜನಿಕ ಸೇವಾ ಕಾರ್ಯಕರ್ತೆಯಾಗಲು ಅವರು ನಿರ್ಧರಿಸಿದರು. ಮತ್ತು ಇದಕ್ಕೆ ಉಪಯುಕ್ತ ವೆನಿಸುವ ವಿಷಯದ ಕುರಿತು ಅಧ್ಯಯನ ಮಾಡಲು ಬೇರೆ ಬೇರೆ ಸಂಸ್ಥೆಗಳಿಗೆ ಭೇಟಿ ನೀಡಿದರು. ಆ ದಿನಗಳಲ್ಲಿ ಸಾಮಾಜಿಕ ವಿಷಯಗಳ ಅಧ್ಯಯನಕ್ಕೆ ತರಗತಿ ಉಪನ್ಯಾಸ ಗಳಿಗಿಂತ ಕ್ಷೇತ್ರಕಾರ್ಯಕ್ಕೆ ಆದ್ಯತೆ ಸಲ್ಲುತ್ತಿತ್ತು. ಆದ್ದರಿಂದ ಅವರು ಲಂಡನ್ನಿನ ಬೆಡ್‌ಫರ್ಡ್

ಕಾಲೇಜಿನ 'ಡಿಪ್ಲೊಮ ಇನ್ ಸೋಶಿಯಾಲಾಜಿ' ಕೋರ್ಸಿಗೆ ಸೇರಿಕೊಂಡರು. ಆದರೆ ಆ ಕಾಲೇಜಿನ ಪ್ರಾಂಶುಪಾಲೆಯಾಗಿದ್ದ ಮಿಸ್ ಲ್ಯೂಕ್ ಬಹಳ ಶಿಸ್ತಿನ ವ್ಯಕ್ತಿ. ಅವರು ತರಬೇತಿಯಲ್ಲಿದ್ದ ಕಷ್ಟಗಳನ್ನು ಕಮಲಾದೇವಿಗೆ ವಿವರಿಸಿದರು. ಅದರಲ್ಲಿಯೂ ಭಾರತೀಯರ ವಿಚಿತ್ರವೇಷ (ಸೀರೆ ಉಡುವುದು) ಪಶ್ಚಿಮದ ಜನರಿಗೆ ತಮಾಷೆಯ ವಿಚಾರವಾಗಬಹುದು! ಎಂದು ತಿಳಿಸಿದರು (ಈಸ್ಟ್ ಎಂಡ್, ಲಂಡನ್ನಿನ ಬಡವರ ವಸತಿ ಕೇಂದ್ರವಾಗಿತ್ತು). ಕಮಲಾದೇವಿ ಪಾಶ್ಚಾತ್ಯ ಉಡುಪು ಧರಿಸಿದರೆ ಮಾತ್ರ ಅವರಿಗೆ ಪ್ರವೇಶ ನೀಡಬೇಕು ಎನ್ನುವುದು ಅವರ ಉದ್ದೇಶವಾಗಿತ್ತು.

ಕಮಲಾದೇವಿ ಒಪ್ಪಲಿಲ್ಲ. "ಮಕ್ಕಳು ನಿನ್ನನ್ನು ಅವಮಾನಿಸಬಹುದು. ಚಪ್ಪಾಳೆ ತಟ್ಟಿ ಗೇಲಿ ಮಾಡಬಹುದು!" ಎಂದು ಪ್ರಿನ್ಸಿಪಾಲರು ಗದರಿದರು. ಅದಕ್ಕುತ್ತರವಾಗಿ, "ಅವರು ಮೊದಲ ನಾಲ್ಕು ದಿನ ನಗಬಹುದು. ಚುಡಾಯಿಸಬಹುದು. ಅವರು ಯಾವಾಗಲೂ ಇದೇ ರೀತಿ ಬರುವವರಿಗೆ ಎಷ್ಟು ದಿನ ಕಾಟ ಕೊಡಬಹುದು? ನಾನು ಇದಕ್ಕೆ ತಯಾರಿದ್ದೇನೆ" ಎಂದರು ಕಮಲಾದೇವಿ.

ಆಮೇಲೆ ಮಿಸ್ ಲ್ಯೂಕ್ ಮಾತನಾಡಲಿಲ್ಲ. ಅವರ ಮೌನವನ್ನು ಸಮ್ಮತಿಯೆಂದು ಪರಿಗಣಿಸಿ ಮುಂದುವರಿದ ಕಮಲಾದೇವಿ ಪ್ರವೇಶ ದೊರಕಿಸಿಕೊಂಡರು. ನಂತರ ಕೋರ್ಸ್ ಮುಗಿಸಿದರು. ಬ್ರಿಟಿಷರು ಭಾರತದಲ್ಲಿ ನಡೆಸುತ್ತಿರುವ ಶೋಷಣೆಯ ಪ್ರತ್ಯಕ್ಷದರ್ಶನವನ್ನು ಅವರ ದೇಶದಲ್ಲಿಯೇ ಕಾಣುವಂತಾಯಿತು ಕಮಲಾದೇವಿಗೆ.

1922ರಲ್ಲಿ ಕಮಲಾದೇವಿ ತನ್ನ ಪತಿ ಹರೀಂದ್ರನಾಥ್ ಅವರೊಂದಿಗೆ ಇಡೀ ಯುರೋಪು ಸುತ್ತಾಡಿ ಬಂದರು. ಅವರ ಭಾವ ಪ್ರಸಿದ್ಧ ಕ್ರಾಂತಿಕಾರಿ ವೀರೇಂದ್ರನಾಥರು ಇಂಗ್ಲೆಂಡಿನಿಂದ ಗಡೀಪಾರಾಗಿ ಬರ್ಲಿನ್‌ನಲ್ಲಿ ಇದ್ದರು. ಅವರ ವ್ಯಾಪಕ ಓದು, ಮಾತು, ಮತ್ತು ಮೌಲಿಕ ವಿಚಾರವಂತಿಕೆ ಕಮಲಾದೇವಿಯ ಮೇಲೆ ಹೆಚ್ಚಿನ ಪ್ರಭಾವವನ್ನು ಬೀರಿತು. ತಾಯ್ನಾಡಿಗೆ ಬರಲು ವೀರೇಂದ್ರನಾಥ್ ಚಡಪಡಿಸುತ್ತಿದ್ದರು. ಆದರೆ ಕೊನೆಯವರೆಗೂ ಅದು ಅವರಿಗೆ ಸಾಧ್ಯವಾಗಲೇ ಇಲ್ಲ! ಯುರೋಪಿನ ಬೇರೆ ಬೇರೆ ದೇಶಗಳಲ್ಲಿ ಸುತ್ತಾಡಿದ ದಂಪತಿಗಳು ಭಾರತಕ್ಕೆ ಹಿಂತಿರುಗಿದರು. ಅವರ ಏಕಮಾತ್ರ ಪುತ್ರ 1923ರಲ್ಲಿ ಜನಿಸಿದ. ತಂದೆ ತಾಯಿ ಇಬ್ಬರಿಗೂ ಪೂಜ್ಯರಾಗಿದ್ದ ಶ್ರೀ ರಾಮಕೃಷ್ಣ ಪರಮಹಂಸರ ಹೆಸರನ್ನು ಮಗನಿಗೆ ಇಡಲಾಯಿತು. ಎಲ್ಲರಿಂದ ಅವನು 'ರಾಮು' ಎಂದೇ ಗುರುತಿಸಿಕೊಂಡನು.

## ಅಧ್ಯಾಯ ೩

# ಸೇವಾಕ್ಷೇತ್ರದಲ್ಲಿ ಪ್ರವೇಶ

ಕಮಲಾದೇವಿಯವರ ರಾಜಕೀಯ ಕ್ಷೇತ್ರದ ಪ್ರವೇಶವು ಒಬ್ಬ ಸೇವಿಕೆಯ ರೂಪದಲ್ಲಿ ಅಥವಾ ಸೇವಾವೃತ್ತಿಯ ನೆವನದಲ್ಲಿ ಆಯಿತು. ಅವರದೇ ಮಾತಿನಲ್ಲಿ ಈ ಘಟನೆಯನ್ನು ಆಲಿಸೋಣ.

ಮಂಗಳೂರಿಗೆ ಹಿಂತಿರುಗಿ ಬಂದ ನಂತರ ಅಲ್ಲಿಯೇ ನೆಲೆಯೂರುವ ವಿಚಾರದಲ್ಲಿ ಅವರಿದ್ದರು. "....1924ನೇ ಇಸವಿಯ ಮಳೆಗಾಲದ ದಿನಗಳು. ಜ್ವರ ಬಂದು ಮಲಗಿ ಕೊಂಡಿದ್ದ ನಾನು ಸುಧಾರಿಸಿಕೊಳ್ಳುತ್ತಿದ್ದೆ. ಒಂದು ಅಪರಾಹ್ನ ನನ್ನನ್ನು ಭೇಟಿಯಾಗಲು ಒಬ್ಬ ಮಹಿಳೆ ಮತ್ತು ಒಬ್ಬ ಗೃಹಸ್ಥ ಬಂದಿದ್ದಾರೆ ಎಂದು ತಿಳಿಯಿತು. ಅವರಿಬ್ಬರೂ ಹುಬ್ಬಳ್ಳಿಯಿಂದ ಬಂದವರು. ಆ ಮಹಿಳೆ ಉಮಾಬಾಯಿ ಕುಂದಾಪುರ. ಮಧ್ಯಮ ಗಾತ್ರದ, ಮಿಂಚು ಕಣ್ಣಿನ, ಹೊಳೆಯುವ ಶ್ವೇತವರ್ಣದ ರೂಪವಂತ ಮಹಿಳೆ. ಮುಖದಲ್ಲಿ ಸ್ಥಿರ ಮಂದಹಾಸ. ಅವರೊಂದಿಗೆ ಇದ್ದ ಸದ್ಗೃಹಸ್ಥರು ಡಾ. ಎನ್. ಎಸ್. ಹರ್ಡೀಕರ್. ಅವರು ಹಿಂದೂಸ್ಥಾನ ಸೇವಾದಳ(ಎಚ್.ಎಸ್.ಡಿ.) ಎಂಬ ಹೆಸರಿನಲ್ಲಿ ಸ್ಥಾಪಿಸಿದ ಸೇವಾಸಂಸ್ಥೆಯ ಮುಖ್ಯಸ್ಥರು. ಆ ವರ್ಷದ ಕೊನೆಯಲ್ಲಿ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನವು ಬೆಳಗಾವಿಯಲ್ಲಿ ನಡೆಯುವುದಿತ್ತು. ಮಹಾತ್ಮಾಗಾಂಧಿಯವರು ಅದರ ಅಧ್ಯಕ್ಷರಾಗುವುದೆಂದು ನಿರ್ಧಾರ ವಾಗಿತ್ತು. ಈ ಬೃಹತ್ ಸಭೆಗಾಗಿ ದೊಡ್ಡ ಪ್ರಮಾಣದಲ್ಲಿ ಸ್ವಯಂಸೇವಕರ ಅಗತ್ಯವಿತ್ತು. ಅವರನ್ನು ಒಟ್ಟುಗೂಡಿಸುವ ಕಾರ್ಯದಲ್ಲಿ ಈ ಗೌರವಾನ್ವಿತ ವ್ಯಕ್ತಿಗಳು ಶ್ರಮಪಡುತ್ತಿದ್ದರು.

ಈ ಭೇಟಿ ನನ್ನ ಬದುಕಿನಲ್ಲಿ ಮಹತ್ವಪೂರ್ಣ ಬದಲಾವಣೆಯನ್ನು ತರಬಹುದೆಂಬ ಕಲ್ಪನೆ ಆಗ ನನಗೆ ಬಂದಿರಲಿಲ್ಲ. ಅವರು ಬಂದ ಉದ್ದೇಶ ತಿಳಿಯುವುದರೊಳಗೆ ನಾನು ಸ್ವತಃ ಸ್ವಯಂಸೇವಕಳಾಗಲು ಸಿದ್ಧಳಾದೆ. ಉಮಾಬಾಯಿ ತನ್ನ ಮಂದಹಾಸದೊಂದಿಗೆ ಹೇಳಿದರು, 'ಕಾಂಗ್ರೆಸ್ ಸ್ವಯಂಸೇವಕರ ಬದುಕು ಬಹಳ ಕಷ್ಟದಾಯಕವಾದುದು. ನಿನಗೆ ಹಿಡಿಸಲಿಕ್ಕಿಲ್ಲ. ಶಿಬಿರದ ಬದುಕೆಂದರೆ, ಎಲ್ಲಾ ವಿಧದ ಅನಾನುಕೂಲತೆಗಳಿಂದ ತುಂಬಿಕೊಂಡು ಇರುತ್ತದೆ. ಮನೆಯ ಯಾವುದೇ ಸೌಕರ್ಯ ನಿನಗೆ ಸಿಗಲಾರದು. ಕಠಿಣ ಶಿಸ್ತಿನ ಜೀವನ. ನಿನ್ನಲ್ಲಿ ಬೇರೆ ಯಾವುದಾದರೂ ರೀತಿಯ ಸಹಾಯವನ್ನು ಕೇಳಬೇಕೆಂದು ನಾವು ಬಂದೆವು'. ನಾನು ಅವರ ಮಾತು ಕೇಳಲಿಲ್ಲ. ಸ್ವಯಂಸೇವಿಕೆಯೆಂದು ಹೆಸರು ನೋಂದಾಯಿಸಿ ಸೇವಾದಳದಲ್ಲಿ ಭರ್ತಿಯಾದೆ".

ಉಮಾಬಾಯಿ ಕುಂದಾಪುರ ಅವರೊಂದಿಗೆ ಅಲ್ಲಿಗೆ ಬಂದಿದ್ದ ಡಾ. ನಾರಾಯಣ ಸುಬ್ಬರಾವ್ ಹರ್ಡೀಕರ್(1889–1975), ಹದಿನಾಲ್ಕನೇ ಎಳೆವಯಸ್ಸಿನಲ್ಲಿ ದೇಶಸೇವೆಯ ಪ್ರತಿಜ್ಞೆ ಮಾಡಿದ ಅತ್ಯಂತ ಧೀರ ವ್ಯಕ್ತಿಯಾಗಿದ್ದರು. ಅಮೇರಿಕೆಯಲ್ಲಿ ವೈದ್ಯಕೀಯ ಕಲಿತು, ಆ ದಿನಗಳಲ್ಲಿ ಅಲ್ಲಿದ್ದ ಲಾಲಾಲಜಪತ ರಾಯ್ ಅವರೊಂದಿಗೆ ದುಡಿಯುತ್ತಿದ್ದವರು. ಅವರು ಭಾರತಕ್ಕೆ ಮರಳಿ ಬಂದ ನಂತರ ಗಾಂಧೀಜಿಯವರ ಪ್ರಭಾವಕ್ಕೆ ಒಳಗಾದರು. ಸತ್ಯಾಗ್ರಹಿಗಳಿಗೆ ಪೋಲೀಸರ ಕಠಿಣ ಪೆಟ್ಟುಗಳನ್ನು, ಕ್ರೌರ್ಯವನ್ನು ಅಹಿಂಸಾತ್ಮಕ ರೂಪದಲ್ಲಿ ತಾಳಿಕೊಳ್ಳಲು ವಿಶೇಷ ತರಬೇತಿಯ ಅಗತ್ಯವಿತ್ತು. ಅವರು ದೈನಂದಿನ ಜೀವನದಲ್ಲಿ

ಸಂಯಮ ಮತ್ತು ಶಿಸ್ತನ್ನು ಅಳವಡಿಸಿಕೊಂಡಿದ್ದ ಜನರನ್ನು ಸೇರಿಸಿ ತರಬೇತಿಯನ್ನು ನೀಡುತ್ತಿದ್ದರು. 1921ನೇ ಇಸವಿಯಲ್ಲಿ ಸ್ಥಾಪನೆಯಾದ ಅವರ ಹಿಂದುಸ್ಥಾನಿ ಸೇವಾದಳವು ದೇಶದಾದ್ಯಂತ ಇದ್ದ ಸ್ವಯಂಸೇವಕರನ್ನು ಶಿಬಿರಗಳ ಮೂಲಕ ತಯಾರು ಮಾಡುತ್ತಿತ್ತು.

ಬೆಳಗಾವಿಯಲ್ಲಿ ನಡೆದ ಭಾರತೀಯ ರಾಷ್ಟ್ರೀಯ ಕಾಂಗ್ರೆಸಿನ ಮಹಾ ಅಧಿವೇಶನವು ಅನೇಕ ದೃಷ್ಟಿಯಿಂದ ಐತಿಹಾಸಿಕ ಘಟನೆಯಾಗಿ ಉಳಿಯಿತು. ಗಾಂಧೀಜಿಯವರು ಮತ್ತೊಮ್ಮೆ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷರಾಗಿ ಕೆಲಸ ಮಾಡಿದರು. ಅದು ಈ ಅಧಿವೇಶನದ ನಂತರ ಒಂದು ವರ್ಷ ಮಾತ್ರ! ಈ ಅಧಿವೇಶನದಿಂದಲೇ ದಕ್ಷಿಣ ಭಾರತದಲ್ಲಿ ಹಿಂದಿ ಭಾಷೆಯ ಪ್ರಚಾರ, ಖಾದಿ, ಸ್ವದೇಶಿಯಿಂದ ಹಿಡಿದು ಉಳಿದ ವಿಧಾಯಕ ಕಾರ್ಯಕ್ರಮಗಳು ಗಂಭೀರ ರೀತಿಯಿಂದ ಪ್ರಾರಂಭಗೊಂಡವು. ಈಗಿನ ಕರ್ನಾಟಕ ರಾಜ್ಯವು ಆಗ ಐದು ಪ್ರದೇಶಗಳಲ್ಲಿ ಹಂಚಿಹೋಗಿತ್ತು. ಕನ್ನಡ ಪ್ರದೇಶದ ಭೇದ ಪರಿಗಣನೆಯಾಗದ ಸಂದರ್ಭದಲ್ಲಿ, ಐದೂ ಪ್ರದೇಶಗಳ ದೇಶಪ್ರೇಮಿ ಮತ್ತು ಸಾಹಸಿ ಜನರನ್ನು ಒಟ್ಟುಗೂಡಿಸಲಾಗಿತ್ತು. ಅಧಿವೇಶನದ ರಾತ್ರಿ ಮೈಸೂರು ರಾಜ್ಯದ ಪ್ರಸಿದ್ಧ ಕಲಾವಿದರನ್ನು ಕರೆಯಿಸಿ ಮನರಂಜನಾ ಕಾರ್ಯಕ್ರಮವನ್ನು ನಡೆಸಲಾಯಿತು. ಅದರಲ್ಲಿಯೂ ಮಹಿಳಾ ಸ್ವಯಂಸೇವಿಕೆಯರು ದೊಡ್ಡ ಪ್ರಮಾಣದಲ್ಲಿ ಒಟ್ಟುಸೇರಿ ಎಲ್ಲಾ ರೀತಿಯ ಕಷ್ಟಕರ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದು ಅದೇ ಮೊದಲಬಾರಿಯಾಗಿತ್ತು. ಅವರ ನಿಷ್ಠೆಯ ಕಾರ್ಯ ಗಾಂಧೀಜಿಯವರ ಗಮನಕ್ಕೆ ಬಂತು. ಮುಖ್ಯ ಸಮಾರಂಭದಲ್ಲಿ ಗಾಂಧೀಜಿ ಹೇಳಿದ್ದೇನೆಂದರೆ, "ನನ್ನ ಮೊದಲ ನಾಲ್ಕು ಅಧಿವೇಶನದ ಅನುಭವದಿಂದ ನಾನು ಏನು ಹೇಳಲು ಶಕ್ತನಿದ್ದೇನೆಯೆಂದರೆ, ಬೆಳಗಾವಿಯ ಅಧಿವೇಶನದಲ್ಲಿ ಸ್ವಯಂ ಸೇವಿಕೆಯರ ದಳವು ಶಿಸ್ತಿನಿಂದ ಮನಃಪೂರ್ವಕವಾಗಿ, ದಿನದ 16 ಗಂಟೆಗಳ ಕಾಲ ನಿಂತು, ತಿರುಗಾಡಿ ಮಾಡಿದ ಕೆಲಸದಿಂದ ವಿಕ್ರಮವನ್ನು ಸ್ಥಾಪಿಸಿದ್ದಾರೆ! ಇಂತಹ ದಕ್ಷ ತಂಡಕ್ಕೆ ಯೋಗ್ಯ ತರಬೇತಿ ನೀಡಿದರೆ ಸ್ವರಾಜ್ಯ ಬೇಗನೆ ಸಿಗಲು ಸಾಧ್ಯವಾಗುವುದು!"

ಡಾ. ಹರ್ಡೀಕರರ ಸೇವಾದಳದ ತರಬೇತಿ ನಿಜವಾಗಿಯೂ ಕಠಿಣ ಮತ್ತು ಹೆಚ್ಚು ಶ್ರಮದಾಯಕವಾಗಿತ್ತು. ಕಮಲಾದೇವಿಯ ಸೇವೆ ಗುಡಿಸುವುದು ಮತ್ತು ಕಸ ತುಂಬುವ ಕಾರ್ಯದಿಂದ ಪ್ರಾರಂಭವಾಯಿತು. ಆ ಕುರಿತು ಅವರಿಗೆ ಹೆಚ್ಚಿನ ಅಭಿಮಾನವಿತ್ತು! ಕರಾವಳಿಯ ಸೆಕೆಯ ಅಭ್ಯಾಸವಿದ್ದು ನಾಜೂಕಾಗಿ ಬೆಳೆಸಿದ ಹುಡುಗಿಗೆ ಬೆಳಗಾವಿಯ ಡಿಸೆಂಬರ್ ತಿಂಗಳ ಚಳಿ, ತಣ್ಣಗಿನ ನೀರಿನ ಸ್ನಾನ ಮೈನಡುಗಿಸುತ್ತಿತ್ತು. ರಾತ್ರಿ, ಮಧ್ಯರಾತ್ರಿ ಚಳಿಯಲ್ಲಿ ಎಚ್ಚರವಿದ್ದು ಅಧಿವೇಶನಕ್ಕೆ ದೂರದೂರದಿಂದ ಬರುತ್ತಿದ್ದ ಸದಸ್ಯರನ್ನು ಸ್ವಾಗತಿಸಿ ಅವರ ವಾಸದ ಮನೆಯವರೆಗೆ ತಲುಪಿಸಬೇಕಿತ್ತು. ಕ್ರಮೇಣ ದಳದ ಕಠಿಣ ವ್ಯಾಯಾಮ, ಮುಂಜಾನೆಯ ಪ್ರಭಾತಫೇರಿ ಮತ್ತು ಹೆಚ್ಚಿನ ವೇಳೆ ಎಚ್ಚರವಿದ್ದು ಕೆಲಸ ಮಾಡುವುದು ಅವರಿಗೆ ರೂಢಿಯಾಯಿತು.

ಸ್ವಯಂಸೇವಕರೆಲ್ಲರಿಗೂ ತ್ರಿವರ್ಣ(ಧ್ವಜದ ಬಣ್ಣದ) ಅಂಚಿನ ಕಪ್ಪು ಬಣ್ಣದ ಸೀರೆ ಸಮವಸ್ತ್ರವಾಗಿತ್ತು. ಒಬ್ಬರೇ ನಡೆದು ಬರುವಾಗ ಈ ಬಣ್ಣ ಏನೂ ಅನ್ನಿಸುತ್ತಿರಲಿಲ್ಲ. ಆದರೆ ನೂರಾರು ಸ್ವಯಂಸೇವಕರು ನಡೆದು ಬರುತ್ತಿರಬೇಕಾದರೆ, ಶೋಕಪ್ರದರ್ಶನಕ್ಕೆ ಹೊರಟ ಹಾಗೆ ಕಮಲಾದೇವಿಗೆ ಭಾಸವಾಗುತ್ತಿತ್ತು! 1927ನೆ ಇಸವಿಯಲ್ಲಿ ಮದ್ರಾಸ್ ಅಧಿವೇಶನ ನಡೆದ ಸಂದರ್ಭದಲ್ಲಿ ಅವರನ್ನು ಸ್ವಯಂಸೇವಿಕಾ ತಂಡದ ಮುಖಂಡರನ್ನಾಗಿ ನಿಯೋಜಿಸಲಾಗಿತ್ತು. ಆಗ ಅವರು ಕಪ್ಪು ಬಣ್ಣದ ಬದಲು ಕೇಸರಿ ವರ್ಣದ ಸೀರೆಯನ್ನು

ಪ್ರಚಾರಕ್ಕೆ ತಂದರು. ಈ ದಳಕ್ಕೆ 'ಆರೆಂಜ್ ಬ್ರಿಗೇಡ್' ಎನ್ನುವ ಹೆಸರು ಅದೇ ವರ್ಷ ಚಾಲನೆಗೆ ಬಂತು.

ಕೆಲವು ವರ್ಷಗಳ ನಂತರ ಕಮಲಾದೇವಿಗೆ ಯುರೋಪಿಗೆ ಹೋಗುವ ಪ್ರಸಂಗ ಬಂತು. ಆಗ ಧ್ವಜದ ಬಣ್ಣದ ಸೀರೆಗೆ ಬದಲಾಗಿ, ಸೀರೆಯಿಂದಲೇ ಧ್ವಜ ನಿರ್ಮಾಣವಾದ ಚಮತ್ಕಾರ ಅವರ ಕೈಯಿಂದ ಘಟಿಸಿತು! ಬರ್ಲಿನ್(ಜರ್ಮನಿ) ನಗರದಲ್ಲಿ ಅಂತರ್ರಾಷ್ಟ್ರೀಯ ಮಹಿಳಾ ಸಂಪರ್ಕ ಸಮಾವೇಶ (ಇಂಡಿಯನ್ ನ್ಯಾಶನಲ್ ಅಲೈಯೆನ್ಸ್ ಫಾರ್ ವಿಮೆನ್) ನಡೆದಿತ್ತು. ಭಾರತದ ಪ್ರತಿನಿಧಿಯಾಗಿ ಅಖಿಲ ಭಾರತ ಮಹಿಳಾ ಅಧಿವೇಶನದ (ಎ.ಐ.ಡಬ್ಲ್ಯು. ಸಿ.) ವತಿಯಿಂದ ಅಧ್ಯಕ್ಷರಾದ ಸರೋಜಿನಿ ನಾಯ್ಡು, ಪ್ರಧಾನ ಕಾರ್ಯದರ್ಶಿ ಕಮಲಾದೇವಿ, ಮತ್ತು 3–4 ಪ್ರತಿನಿಧಿಗಳು ಬರ್ಲಿನಿಗೆ ಹೋಗಿದ್ದರು. ಅಲ್ಲಿ ಕಮಲಾದೇವಿಗೆ ಕಾಡಿದ್ದು ರಾಷ್ಟ್ರಧ್ವಜದ ಅಭಾವ! ಅಲ್ಲಿಯ ಸಂಘಟಕರು ಭಾರತಕ್ಕೆ ನೀಡಿದ್ದು ಬ್ರಿಟಿಷರ ಯೂನಿಯನ್ ಜಾಕ್. ಈ ಗುಲಾಮಗಿರಿ ಸಂಕೇತವು ಕಮಲಾದೇವಿಯನ್ನು ಕೆರಳಿಸಿತು. ಆದರೆ ತ್ರಿವರ್ಣ ಧ್ವಜವನ್ನು ಅವರು ತೆಗೆದುಕೊಂಡು ಹೋಗಿರಲಿಲ್ಲ. ರಾತೋರಾತ್ರಿ ಭಾರತದ ತಂಡವು ತಮ್ಮ ಕೇಸರಿ, ಬಿಳಿ, ಹಸಿರು ವರ್ಣದ ಸೀರೆಯನ್ನು ಹೊರತೆಗೆದು ಕತ್ತರಿಸಿ, ತ್ರಿವರ್ಣ ಧ್ವಜವನ್ನು ತಯಾರಿಸಿಯೇಬಿಟ್ಟರು. ಮರುದಿನ ಉದ್ಘಾಟನೆಯ ಸಮಯದಲ್ಲಿ ಭಾರತದ ತ್ರಿವರ್ಣ ಧ್ವಜವು ಗಾಳಿಯಲ್ಲಿ ಹಾರಾಡುತ್ತಿರುವಾಗ ಅಲ್ಲಿ ಸೇರಿದ ಮಹಿಳೆಯರು, ಪುರುಷರ ಮನಸ್ಸಿನಲ್ಲಿ ದೇಶಾಭಿಮಾನ ತುಂಬಿಕೊಂಡದ್ದನ್ನು ಅನೇಕ ವರ್ಷಗಳ ನಂತರ ಕಮಲಾದೇವಿ ನೆನಪಿಸಿಕೊಂಡಿದ್ದಾರೆ.

ಕಮಲಾದೇವಿ ಅವರ ಸೌಂದರ್ಯಪ್ರಜ್ಞೆ ಮತ್ತು ದೇಶಾಭಿಮಾನ ಶಾಶ್ವತವಾಗಿ ಕೂಡಿ ಕೆಲಸ ಮಾಡಿದ್ದು ನಂತರದ ವರ್ಷಗಳಲ್ಲಿ ಸ್ಪಷ್ಟವಾಗುತ್ತಾ ಹೋಯಿತು.

ಈ ದಿನಗಳಲ್ಲಿ ಕಮಲಾದೇವಿಯ ಮೇಲೆ ಹೆಚ್ಚಿನ ಪ್ರಭಾವ ಬೀರಿದವರು ಮಾರ್ಗರೇಟ್ ಕಸಿನ್ಸ್ (ಗ್ರೆಟ್ಟಾ). ಐರ್ಲೆಂಡಿನಲ್ಲಿ ಹುಟ್ಟಿದ ಗ್ರೆಟ್ಟಾ (1878–1954), ಡಾ. ಆನಿ ಬೆಸೆಂಟರ ಹಾಗೆಯೇ ಥಿಯೊಸಾಫಿಕಲ್ ಸೊಸೈಟಿಯ ತತ್ತ್ವದಿಂದ ಆಕರ್ಷಿತರಾಗಿ ಭಾರತಕ್ಕೆ ಬಂದವರು. ಅವರು ಮತ್ತು ಅವರ ಪತಿ ಜೇಮ್ಸ್ ಕಸಿನ್ಸ್ ಅವರು ಭಾರತದಲ್ಲಿ ನಡೆಸಿದ ಸಾಮಾಜಿಕ ಸೇವೆ ಅಪಾರ. ಇಬ್ಬರೂ ಶಿಕ್ಷಣ ಕ್ಷೇತ್ರಕ್ಕೆ ತಮ್ಮನ್ನು ಸಮರ್ಪಿಸಿಕೊಂಡು ಕೊನೆಯವರೆಗೆ ದುಡಿದು ಇಲ್ಲಿಯೇ ಕೊನೆಯುಸಿರೆಳೆದರು.

ಗ್ರೆಟ್ಟಾಗೆ ಸಂಗೀತ, ನಾಟಕದಲ್ಲಿ ಒಲವು ಬಹಳವಿತ್ತು. ಸಂಗೀತದಲ್ಲಿ ಡಾಬ್ಲಿಯ ರಾಯಲ್ ವಿಶ್ವವಿದ್ಯಾಲಯದ ಪದವಿಯನ್ನು ಅವರು ಹೊಂದಿದ್ದರು. ಅವರು ಭಾರತಕ್ಕೆ ಬರುವ ಮೊದಲೇ ಐರಿಷ್ ಮಹಿಳೆಯರಿಗೆ ಸ್ವಾತಂತ್ರ್ಯ ಮತ್ತು ಮತದಾನದ ಹಕ್ಕನ್ನು ದೊರಕಿಸಿ ಕೊಡಲು ಹೋರಾಟ ನಡೆಸಿದವರು. ಸಮಾನ ರೂಪದ ಒಲವು ಮತ್ತು ವಿಚಾರಶೀಲತೆ ಯಿಂದಾಗಿ ಕಮಲಾದೇವಿ ಮತ್ತು ಗ್ರೆಟ್ಟಾ ಹತ್ತಿರವಾದರು. ಆನಿಬೆಸೆಂಟರು ಪ್ರಾರಂಭಿಸಿದ ರಾಷ್ಟ್ರೀಯ ಶಿಕ್ಷಣ ಚಳವಳಿಯಲ್ಲಿ (ನ್ಯಾಶನಲ್ ಎಜ್ಯುಕೇಶನ್ ಮೂವ್‌ಮೆಂಟ್) ಸಹಭಾಗಿಯಾಗಿ ಗ್ರೆಟ್ಟಾ ಕೆಲಸ ಮಾಡುತ್ತಿದ್ದರು. ಮಂಗಳೂರಿನಲ್ಲಿ ಪ್ರಾರಂಭವಾದ ಈ ಸಂಸ್ಥೆಯ ಹೆಣ್ಮಕ್ಕಳ ಶಾಲೆಗೆ ಮುಖ್ಯಸ್ಥರಾಗಿ ಬಂದ ಗ್ರೆಟ್ಟಾ ಅತಿ ಶೀಘ್ರದಲ್ಲಿಯೇ ಗಿರಿಜಾಬಾಯಿ ಮತ್ತು ಕಮಲಾದೇವಿಗೆ ಆತ್ಮೀಯ ಸ್ನೇಹಿತೆಯಾದರು. ಮದ್ರಾಸಿನ ಸಂಸ್ಥೆಯ ಜವಾಬ್ದಾರಿ ಕೂಡಾ ಗ್ರೆಟ್ಟಾ ಅವರದೇ ಆಗಿತ್ತು.

ಒಂದು ದಿನ ಅವಸರದಲ್ಲಿ ಬಂದ ಗ್ರೆಟ್ಟಾ ಹೊಸ ಜವಾಬ್ದಾರಿಯೊಂದನ್ನು

ವಹಿಸಿಕೊಳ್ಳುವಂತೆ ಕಮಲಾದೇವಿಗೆ ಆಗ್ರಹಪಡಿಸತೊಡಗಿದರು. 1926ನೇ ಇಸವಿಯ ಕೊನೆಯಲ್ಲಿ ಮದ್ರಾಸ್ ಲೆಜಿಸ್ಲೇಟಿವ್ ಕೌನ್ಸಿಲ್ ಮಹಿಳೆಯರಿಗಾಗಿ ಒಂದು ಸ್ಥಾನವನ್ನು ಘೋಷಿಸಿತ್ತು. ರಾಜಕೀಯದಲ್ಲಿ ಪ್ರಾತಿನಿಧ್ಯ ಬೇಕೆಂದು ದೇಶದಾದ್ಯಂತ ಕೆಲವು ಮಹಿಳೆಯರು ಚಳವಳಿ ನಡೆಸುತ್ತಿದ್ದ ಸಂದರ್ಭವದು. ಈ ಅನಿರೀಕ್ಷಿತ ಅವಕಾಶವನ್ನು ಬಿಟ್ಟುಬಿಡುವ ಹಾಗಿಲ್ಲ! ಹಾಗೆಂದುಕೊಂಡೇ ಆ ಸ್ಥಾನಕ್ಕೆ ಕಮಲಾದೇವಿಯನ್ನು ನಿಲ್ಲಿಸಲು ಗ್ರೆಟ್ಟಾ ಅವಸರದಲ್ಲಿ ಬಂದಿದ್ದರು. ಕಮಲಾದೇವಿಗೆ ಈ ಹುದ್ದೆಯಲ್ಲಿ ಆಕರ್ಷಣೆ ಇರಲಿಲ್ಲ. ಆದರೆ ಗ್ರೆಟ್ಟಾ ಬಿಡಲಿಲ್ಲ! 'ಈ ಅವಕಾಶ ದೇಶಸೇವೆಗೆ, ಮುಖ್ಯವಾಗಿ ಮಹಿಳೆಯರ ಉದ್ಧಾರಕ್ಕೆ ಉತ್ತಮ ಆರಂಭ ನೀಡುತ್ತದೆ!' ಎಂದು ಒತ್ತಾಯಪಡಿಸಿ ಕಮಲಾದೇವಿಯನ್ನು ಸಿದ್ಧಗೊಳಿಸಿದರು. ಅಸೆಂಬ್ಲಿ ಸದಸ್ಯರಾಗುವವರಿಗೆ ಸ್ಥಳೀಯವಾಗಿ ಕೆಲವು ಆಸ್ತಿ ಇರುವುದು ಆವಶ್ಯಕವಾಗಿತ್ತು. ತ್ವರಿತವಾಗಿ ಸ್ವಲ್ಪ ಜಾಗವನ್ನು ಕೂಡಾ ಖರೀದಿ ಮಾಡಲಾಯಿತು.

ಸ್ವಯಂಸೇವಕರನ್ನು ಸ್ವತಃ ಗ್ರೆಟ್ಟಾ ಅವರೇ ತಯಾರು ಮಾಡಿದರು. ಮನೆಮನೆಗೆ ತೆರಳಿ ಪ್ರಚಾರ ಮಾಡುವ ವ್ಯವಸ್ಥೆ ನಡೆಸಿದರು. ಪ್ರತಿದಿನ ಸಂಗೀತ ಮತ್ತು ಮನೋರಂಜನೆಯ ಕಾರ್ಯಕ್ರಮಗಳನ್ನು ನಡೆಸಲಾಯಿತು. ಮಹಿಳೆಯರು ನಡೆಸುತ್ತಿದ್ದ ಈ ಅಹೋರಾತ್ರಿಯ ಸದ್ದಿನಿಂದ ನಿದ್ದೆಯಲ್ಲಿದ್ದ ಮಂಗಳೂರು ನಗರ ಎದ್ದು ಕುಳಿತಿತು. ಸುಂದರವಾಗಿ ವಿನ್ಯಾಸಗೊಳಿಸಿದ ನೀಲಿ ಬಿಲ್ಲೆ(ಬ್ಯಾಡ್ಜ್) ಧರಿಸಿದ ಸ್ವಯಂಸೇವಿಕೆಯರು ತಿರುಗಾಡುತ್ತಾ ಪ್ರಚಾರ ಮಾಡುವುದು ಹೊಸ ಸುದ್ದಿಯಾಗಿಬಿಟ್ಟಿತು. ಇಡೀ ದೇಶದಲ್ಲಿ ಅದೇ ಮೊದಲಬಾರಿಗೆ ಚಿಕ್ಕ ವಯಸ್ಸಿನ ಮಹಿಳೆಯೊಬ್ಬಳು ಅಸೆಂಬ್ಲಿ ಚುನಾವಣೆಗೆ ಸ್ಪರ್ಧಿಸುತ್ತಿದ್ದಾಳೆ! ಆದರೆ ಕಮಲಾದೇವಿಗೆ ದೊರೆತ ಸಮಯ ಬಹಳ ಕಡಿಮೆ ಇತ್ತು.

ಕಮಲಾದೇವಿ ಬರೀ 51 ಮತಗಳಿಗೆ ಸೋತುಹೋದರು. ಈ ಸ್ಥಾನವನ್ನು ಪಡೆಯುವ ಆಸೆ ಕಮಲಾದೇವಿಗೆ ಇರಲಿಲ್ಲ. ಅವರು ಸ್ಪರ್ಧಾಕಣಕ್ಕೆ ಇಳಿಯಲು ಗ್ರೆಟ್ಟಾ ಅವರ ಆಗ್ರಹವೇ ಕಾರಣ. ಇದರಿಂದ ಗ್ರೆಟ್ಟಾಗೆ ಮಾತ್ರ ತುಂಬ ದುಃಖವಾಯಿತು. ಈ ಘಟನೆಯಿಂದ ಕಮಲಾದೇವಿಯಲ್ಲಿ ವ್ಯವಸ್ಥಿತ ಸಂಘಟನೆಯ ಲಾಭದ ಅರಿವು ಉಂಟಾಯಿತು. ರಾಜಕೀಯ ಕ್ಷೇತ್ರದಲ್ಲಿ ವಿಶ್ವಾಸದ್ರೋಹ ಮತ್ತು ಆತ್ಮವಿಶ್ವಾಸವನ್ನು ಕುಂಠಿತಗೊಳಿಸುವ ವಿವಿಧ ಉಪಾಯಗಳನ್ನು ಎದುರಿಸುವ ಪ್ರತ್ಯಕ್ಷ ಅನುಭವ ಅವರಿಗೆ ಉಂಟಾಯಿತು. ಸಕ್ರಿಯ ರಾಜಕಾರಣದಲ್ಲಿ ಅವರ ಸ್ಥಾನ ಮೇಲೇರಲು ಈ ಅಸೆಂಬ್ಲಿ ಚುನಾವಣೆ ಹಲವು ರೀತಿಯಿಂದ ಕಾರಣವಾಯಿತು. ಸ್ವಯಂಸೇವಿಕೆಯಾಗಿದ್ದುಕೊಂಡೇ ಎಷ್ಟೋ ಕೆಲಸಗಳನ್ನು ಮಾಡುವುದು ಸಾಧ್ಯವಿದೆ ಎಂಬ ವಿಶ್ವಾಸ ಅವರಲ್ಲಿ ಅಗಾಧವಾಗಿತ್ತು. ಅವರನ್ನು ಕಾಂಗ್ರೆಸ್ ಪಕ್ಷ ಎ.ಐ.ಸಿ.ಸಿ.ಯ ಸದಸ್ಯರನ್ನಾಗಿ ಮಾಡಿತು. ಈ ವಿಧದ ಹುದ್ದೆಗೆ ಆ ದಿನಗಳಲ್ಲಿ ಯಾವ ಸ್ಪರ್ಧೆಯೂ ಇರಲಿಲ್ಲ! 'ನನಗೆ ಸದಸ್ಯಳಾಗುವುದಕ್ಕೆ ಯಾವ ಆತಂಕವೂ ಎದುರಾಗಲಿಲ್ಲ'ವೆಂದು ನಿರಹಂಕಾರಿ ಸ್ವಭಾವದ ಕಮಲಾ ಹೇಳುತ್ತಾರೆ. ಕಾಂಗ್ರೆಸಿನಲ್ಲಿಯೇ ಸಮಾಜವಾದಿಗಳ ಒಂದು ತಂಡವಿತ್ತು. ಅಸಹಕಾರ ಚಳವಳಿ ಪ್ರಾರಂಭವಾಗುವಾಗ ಕಮಲಾದೇವಿ ಈ ತಂಡದ (ಇಂಡಿಯನ್ ಸೋಶಿಯಲಿಸ್ಟ್ ಕಾಂಗ್ರೆಸ್) ಮದ್ರಾಸ್ ಶಾಖೆಯ ಕಾರ್ಯದರ್ಶಿಯಾಗಿ ಕೆಲಸ ಮಾಡುತ್ತಿದ್ದರು. ಮಹಿಳೆಯರಿಗೆ ಶಿಕ್ಷಣ ಮತ್ತು ಇತರ ಸೌಲತ್ತುಗಳನ್ನು ಒದಗಿಸುವ ಗ್ರೆಟ್ಟಾರ ಕಾರ್ಯಗಳಲ್ಲಿ ಕೂಡಾ ಅವರು ಸಹಾಯ ಮಾಡುತ್ತಿದ್ದರು.

ಈ ಎಲ್ಲಾ ಕಾರ್ಯಗಳಿಗಾಗಿ ಮತ್ತು ಆನಂತರ ರೂಪುಗೊಂಡ ಮಹಿಳಾ ಅಧಿವೇಶನದ ಜವಾಬ್ದಾರಿಯಿಂದಾಗಿ ಆಗಾಗ ದೆಹಲಿಗೆ ಹೋಗುವ ಸಂದರ್ಭ ಅವರಿಗೆ

ಬರುತ್ತಿತ್ತು. ಅವರು ದೆಹಲಿಯಲ್ಲಿ ಉಳಿದುಕೊಳ್ಳಲು ಪಾರ್ಲಿಮೆಂಟ್ ಹೌಸ್(ಲೋಕಸಭಾ) ಹತ್ತಿರದ ಅಸೆಂಬ್ಲಿ ಸದಸ್ಯರ ವಸತಿಗೃಹದಲ್ಲಿ ಡಾ. ಎಂ.ಆರ್. ಜಯಕರ್ ಅವರು ವ್ಯವಸ್ಥೆ ಮಾಡಿದ್ದರು. ಆಗ ನಡೆದ ಒಂದು ಐತಿಹಾಸಿಕ ಘಟನೆಗೆ ಪ್ರತ್ಯಕ್ಷದರ್ಶಿಯಾಗುವ ಅವಕಾಶ ಕಮಲಾದೇವಿಗೆ ದೊರೆಯಿತು.

1929ನೇ ಇಸವಿ, ಎಪ್ರಿಲ್ 8ನೇ ತಾರೀಖು. ಅಂದು ಸೆಂಟ್ರಲ್ ಅಸೆಂಬ್ಲಿಯಲ್ಲಿ(ಈಗಿನ ಸಂಸತ್ತಿನ ಹಾಗೆ, ಬ್ರಿಟಿಷ್ ಕಾಲದ ಪ್ರಾತಿನಿಧಿಕ ಸಭೆ) 'ಸಾರ್ವಜನಿಕ ಸುರಕ್ಷಿತಾ ಮಸೂದೆ' (ಪಬ್ಲಿಕ್ ಸೇಫ್ಟಿ ಬಿಲ್)ಯ ಕುರಿತು ಚರ್ಚೆ ನಡೆಯುವುದಿತ್ತು. ಸಭಾ ಕಲಾಪವನ್ನು ಮುಕ್ತವಾಗಿ ವೀಕ್ಷಿಸುವ ಅವಕಾಶವಿದ್ದ ಪ್ರೇಕ್ಷಕರ ಗ್ಯಾಲರಿಗೆ ಬಂದ ಕಮಲಾದೇವಿ ಖಾಲಿಯಿದ್ದ ಕುರ್ಚಿಯೊಂದರಲ್ಲಿ ಆಸೀನರಾದರು. ಅವರ ಮುಂದೆ ಅತ್ಯಂತ ಸ್ಫುರದ್ರೂಪಿ ಆಕರ್ಷಕ ವ್ಯಕ್ತಿಯೊಬ್ಬನು ಕುಳಿತಿದ್ದ. ಆತನಿಗೆ ಅಸೆಂಬ್ಲಿಯಲ್ಲಿ ನಡೆಯುತ್ತಿದ್ದ ಚರ್ಚೆಯ ಕಡೆಗೆ ಗಮನವಿರಲಿಲ್ಲ. ಯಾವುದಕ್ಕೋ ಕಾಯುತ್ತಾ ಆತ ಚಡಪಡಿಸುತ್ತಿರುವುದು ಕಮಲಾದೇವಿಯ ಗಮನಕ್ಕೆ ಬಂತು.

ಕ್ಷಣಮಾತ್ರದಲ್ಲಿ 'ಢಂ !' ಎನ್ನುವ ದೊಡ್ಡ ಸದ್ದು ಉಂಟಾಯಿತು ! ಅಸೆಂಬ್ಲಿ ಹಾಲಿನಿಂದ ಹೊಗೆ ಬರಲಾರಂಭಿಸಿತು. ಅಲ್ಲಿದ್ದ ಆಕರ್ಷಕ ವ್ಯಕ್ತಿ ಬೇರೆ ಯಾರೂ ಅಲ್ಲ, ಸರದಾರ್ ಭಗತ್‌ಸಿಂಗ್ ಆಗಿದ್ದನು ! ಅದು ಅವನು ಎಸೆದ ಬಾಂಬ್ ಆಗಿತ್ತು !

ಬಾಂಬ್ ದಾಳಿಯಿಂದ ಆಗಿನ ಅರ್ಥಮಂತ್ರಿ, ಕಾರ್ಯದರ್ಶಿ ಮತ್ತು ಮೂರು ಸದಸ್ಯರಿಗೆ ಗಾಯಗಳಾದವು. ಅಸೆಂಬ್ಲಿ ಹಾಲಿನಲ್ಲಿದ್ದ ಪೀಠೋಪಕರಣಗಳು ನುಚ್ಚುನೂರಾದವು.

ಇದ್ದಕ್ಕಿದ್ದಂತೆ ಸುರಕ್ಷಿತಾ ಸಿಬ್ಬಂದಿಗಳು ಮತ್ತು ಪೊಲೀಸರು ಪ್ರತ್ಯಕ್ಷರಾದರು. ಅಸೆಂಬ್ಲಿಯ ಎಲ್ಲಾ ಮುಖ್ಯದ್ವಾರಗಳನ್ನು ಮುಚ್ಚಿಬಿಡಲಾಯಿತು. ಯಾರಿಗೂ ಹೊರಗೆ ಹೋಗಲು ಬಿಡಲಿಲ್ಲ. ಪ್ರವೇಶ ಪತ್ರವಿಲ್ಲದ ಕಮಲಾದೇವಿಯನ್ನು ಒಂದೆಡೆ ನಿಲ್ಲಿಸಲಾಯಿತು. ಪುಣ್ಯವಶಾತ್ ಅವರನ್ನು ಕರೆತಂದ ವಾಹನ ಚಾಲಕ ಹೊರಗೆ ಇದ್ದನು. ಅವನು ತಕ್ಷಣ ಹೋಗಿ ತನ್ನ ಮಾಲಿಕರಾದ ಡಾ. ಜಯಕರ ಅವರ (ಅಸೆಂಬ್ಲಿ ಸದಸ್ಯರ) ಪತ್ರ ತರುವ ಪ್ರಸಂಗಾವಧಾನ ತೋರಿಸಿದನು. 'ಈ ಮಹಿಳೆ ಸ್ವಯಂಸೇವಿಕೆ, ಕ್ರಾಂತಿಕಾರಿಯಲ್ಲ. ಅವರ ವರ್ತನೆಗೆ ನಾನು ಜಾಮೀನು ನಿಲ್ಲುತ್ತೇನೆ' ಎಂಬ ಆಶ್ವಾಸನೆ ಆ ಪತ್ರದಲ್ಲಿ ಇತ್ತು. ನ್ಯಾಯವಾಗಿ ನೋಡುವುದಾದರೆ, ಅಧಿಕೃತ ಪರವಾನಗಿ ಇಲ್ಲದೆ ಒಳಬಂದು, ಬಾಂಬ್ ಎಸೆದ ವಿದ್ರೋಹಿಯ ಹತ್ತಿರ ಕುಳಿತ ವ್ಯಕ್ತಿಯಲ್ಲಿ ವಿಶ್ವಾಸ ತೋರಿಸುವುದು ಹೇಗೆ? ಅವರು ಕಮಲಾದೇವಿಯನ್ನು ಕಾರಾಗೃಹಕ್ಕೆ ಕಳುಹಿಸುವರಿದ್ದರು! ಬಾಂಬ್ ಎಸೆದು ಓಡಿ ಹೋಗದ ಭಗತ್‌ಸಿಂಗ್ ಬಂಧಿತನಾದ! ಆತನ ಅಸೀಮ ಧೈರ್ಯ ಮತ್ತು ತ್ಯಾಗ, ಹಾಗೂ ತನ್ನ ಅಧೈರ್ಯವನ್ನು ಮತ್ತೆ ಮತ್ತೆ ನೆನಪಿಸಿಕೊಳ್ಳುತ್ತಿದ್ದರು ಕಮಲಾದೇವಿ.

ಭಾರತದ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸದಲ್ಲಿ ಭಗತ್‌ಸಿಂಗನ ಬಲಿದಾನ ಒಂದು ಉಜ್ವಲ ಅಧ್ಯಾಯವಾಗಿ ಉಳಿಯಿತು. ಆಗ ದೇಶದ ಪರಿಸ್ಥಿತಿಯು ತರುಣ ಜನಾಂಗಕ್ಕೆ ಅಪಾಯಕಾರಿಯಾಗಿ ಇತ್ತು. ಬೇರೆ ಬೇರೆ ಪ್ರದೇಶದ ಯುವಕರು ಮತ್ತು ಯುವತಿಯರು ಬ್ರಿಟಿಷರ ದಮನಕಾರಿ ನೀತಿಯನ್ನು ಶಸ್ತ್ರಾಸ್ತ್ರಗಳಿಂದ ಪ್ರತಿಭಟಿಸುತ್ತಿದ್ದರು. ಕೆಲವರು ಜೈಲಿನಲ್ಲಿ ಕೊಳೆಯುತ್ತಿದ್ದರು. ಅನೇಕ ಮಂದಿಗೆ ಫಾಶಿ ಶಿಕ್ಷೆಯಾಯಿತು. ಭಗತ್‌ಸಿಂಗನಿಗೆ ಕೂಡಾ ಗಲ್ಲು ಶಿಕ್ಷೆಯಾಯಿತು. ಅವನ ಶಿಕ್ಷೆಯನ್ನು ತಪ್ಪಿಸಲು ಕಾಂಗ್ರೆಸ್ ಪಕ್ಷವಾಗಲೀ, ಗಾಂಧೀಜಿಯವರಾಗಲೀ ಯಾವ ಪ್ರಯತ್ನವನ್ನೂ ಮಾಡಲಿಲ್ಲ ! ಎನ್ನುವುದು ಕಮಲಾದೇವಿಗೆ ತಿಳಿದೇ ಇತ್ತು.

ಭಗತ್‌ಸಿಂಗನ ಮೇಲೆ ಸಾಂಡರ್ಸ್ ಎಂಬ ಪೊಲೀಸ್ ಅಧಿಕಾರಿಯ ಕೊಲೆ ಆರೋಪವಿತ್ತು. ಅಸೆಂಬ್ಲಿಯಲ್ಲಿ ಬಾಂಬ್ ಎಸೆದ ಆಪಾದನೆ ಇತ್ತು. ಕಮಲಾದೇವಿಯ ದೃಷ್ಟಿಯಲ್ಲಿ ಭಗತ್‌ಸಿಂಗ್ ಒಬ್ಬ ವಿಚಾರಶೀಲ ಕ್ರಾಂತಿಕಾರಿ. ಹಾಗಾಗಿ ಅವನಿಗೆ ಮರಣಶಿಕ್ಷೆ ವಿಧಿಸಬಾರದೆಂಬ ಭಾವನೆ ಅವರದ್ದಾಗಿತ್ತು. ನಂಬಲಾಗದ ಅನೇಕ ಅಪರಾಧಗಳು ಅವನ ಹೆಸರಿನಲ್ಲಿ ದಾಖಲಾಗಿದ್ದವು. ಅಫಘಾನಿಸ್ತಾನದ ಅಮಿರಾನ ಜೊತೆ ಶಾಮೀಲಾಗಿ ಬ್ರಿಟಿಷರನ್ನು ಕೆಳಗಿಳಿಸುವ ಕಾರಸ್ಥಾನವನ್ನು ಅವನು ಮಾಡಿದ್ದಾನೆ ಎನ್ನುವ ಘೋರ ಅಪರಾಧದ ಸುದ್ದಿ ಲಂಡನ್ನಿನ ಪತ್ರಿಕೆಯಲ್ಲಿ ಕೂಡಾ ಪ್ರಕಟವಾಗಿತ್ತು. ಪತ್ರಿಕೆಯ ವಿರುದ್ಧ ಕಮಲಾದೇವಿ ಮತ್ತು ಇತರರು ನೀಡಿದ ನೊಟೀಸು ಅವರಿಗೆ ತಲುಪದಂತೆ ಸರಕಾರ ವ್ಯವಸ್ಥೆ ಮಾಡಿತ್ತು !

ಭಗತ್‌ಸಿಂಗನು ಅಸೆಂಬ್ಲಿಯಲ್ಲಿ ಎಸೆದ ಕರಪತ್ರದ ಪ್ರತಿಯನ್ನು ಕಮಲಾದೇವಿ ಎತ್ತಿಟ್ಟಿದ್ದರು. 'ಕೇಂದ್ರ ಅಸೆಂಬ್ಲಿಯ ಠರಾವು ವಂಚನೆಯಿಂದ ತುಂಬಿಕೊಂಡಿದೆ ! ಬ್ರಿಟಿಷರು ಪೊಳ್ಳು ಆಶ್ವಾಸನೆಯಿಂದ ಜನರನ್ನು ನಂಬಿಸುತ್ತಿದ್ದಾರೆ' ಎಂಬ ಸಂದೇಶ ಅದರಲ್ಲಿ ಇತ್ತು.

'ಭಗತ್‌ಸಿಂಗನ ಪ್ರಕರಣದಲ್ಲಿ ಕಾಂಗ್ರೆಸ್ ಸಕ್ರಿಯವಾಗಿ ಆಸಕ್ತಿಯನ್ನು ತೋರಿಸಿ ಮರಣದಂಡನೆಯನ್ನು ರದ್ದುಗೊಳಿಸಬೇಕು. ಈ ವಿಷಯದಲ್ಲಿ ಅಲಕ್ಷ್ಯ ಸರಿಯಲ್ಲ!' ಎಂಬ ಠರಾವನ್ನು ಮಂಡಿಸಬೇಕೆಂದು ಕಮಲಾದೇವಿ ನಿರ್ಧರಿಸಿದರು. ಆಗ ಅವರು ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಸದಸ್ಯರಾಗಿದ್ದರು. ಮರುದಿನ ಸಮಿತಿಯ ಸಭೆ ನಡೆಯುವುದಿತ್ತು. ಅದರ ಅಧ್ಯಕ್ಷರು ಜವಾಹರಲಾಲ್ ನೆಹರೂ.

ಇದೇ ವಿಚಾರವಾಗಿ ಮಾತನಾಡಲು ಆಚಾರ್ಯ ಕೃಪಲಾನಿಯವರು ಕಮಲಾದೇವಿ ಯವರಲ್ಲಿಗೆ ಬಂದರು. ಅವರಲ್ಲಿ ಪರಸ್ಪರ ನಂಬಿಕೆ ಮತ್ತು ವಿಶ್ವಾಸ ಪ್ರಬಲವಾಗಿತ್ತು. "ನಿನ್ನ ಠರಾವನ್ನು ನೀನು ಗಂಭೀರವಾಗಿ ತೆಗೆದುಕೊಂಡಿದ್ದೀಯಾ ?" ಎಂದು ಕೃಪಲಾನಿ ಕೇಳಿದರು. ಕಮಲಾದೇವಿ "ಹೌದು" ಎಂದುತ್ತರಿಸಿದರು. ಆಗ ದೀರ್ಘ ಉಸಿರೆಳೆದ ಕೃಪಲಾನಿ ಹೇಳ ತೊಡಗಿದರು, "ಈ ವಿಚಾರದಲ್ಲಿ ಗಾಂಧೀಜಿಯವರು ಎಷ್ಟು ಪ್ರಯತ್ನಗಳನ್ನು ನಡೆಸಿದ್ದಾರೆ ಎನ್ನುವುದು ನಿನಗೆ ಗೊತ್ತಿದೆಯೋ ಇಲ್ಲವೋ ! ವೈಸರಾಯಿ ಅವರನ್ನು ಭೇಟಿಯಾಗಿ ಭಗತ್‌ಸಿಂಗನನ್ನು ಉಳಿಸಲು ಅವರು ವಿಶೇಷ ಪ್ರಯತ್ನ ಮಾಡಿದ್ದಾರೆ. ಅವರು ಮಾತನಾಡಲು ಹೋದ ವಿಷಯ ತೀರಾ ಭಿನ್ನವಾಗಿದ್ದರೂ, ಅವರಿಗೆ ತಿಳಿಹೇಳುವ ಎಲ್ಲಾ ವಿಧದ ಪ್ರಯತ್ನವನ್ನು ಮಾಡಿ ಸೋತಿದ್ದಾರೆ. ಈಗ ನೀನು ಠರಾವು ಮಂಡಿಸಿದರೆ ಬಾಪೂಜಿ ಮನಸ್ಸಿಗೆ ಬಹಳ ದುಃಖವಾದೀತು".

ಈ ವಿಚಾರ ಕಮಲಾದೇವಿಗೆ ತಿಳಿದಿರಲಿಲ್ಲ ! ಗಾಂಧೀಜಿಯಂತಹ ಅಹಿಂಸಾವಾದಿ ಹಿಂಸೆಯ ಯಾವುದೇ ರೂಪವನ್ನು ಖಂಡಿಸುವವರಲ್ಲದೆ, ಸಮರ್ಥಿಸುವವರಲ್ಲ. ಕೊಲೆ ಅಪರಾಧವಿದ್ದ ಭಗತ್‌ಸಿಂಗ್‌ನ ಫಾಶಿ ಶಿಕ್ಷೆಯನ್ನು ತಪ್ಪಿಸಲು ಎಲ್ಲಾ ಪ್ರಯತ್ನಗಳನ್ನು ನಡೆಸಿಯೂ ಸೋತಿದ್ದಾರೆ. ಹೀಗಿರುವಾಗ ತನ್ನ ಪ್ರಯತ್ನ ಬಾಲಿಶವೆಂದು ಕಂಡಿತು ಕಮಲಾದೇವಿಗೆ. ವೇದಿಕೆಯನ್ನೇರುವ ಮೊದಲು ಪಂಡಿತ್ ನೆಹರೂ ಅವರು "ಠರಾವನ್ನು ಮಂಡಿಸುವೆಯಾ?" ಎಂದು ವಿಚಾರಿಸಿದಾಗ, "ಇಲ್ಲ"ವೆಂಬ ಅರ್ಥದಲ್ಲಿ ಕಮಲಾದೇವಿ ತಲೆಯಾಡಿಸಿದರು.

ಕಮಲಾದೇವಿ ಕಾಂಗ್ರೆಸ್ ಪಕ್ಷದಲ್ಲಿ ಸ್ವಯಂಸೇವಕಿಯೆಂದೇ ಕೆಲಸ ಮಾಡುತ್ತಾ ಇದ್ದು ಬಿಟ್ಟರು. ಅವರಿಗೆ ಮಹಿಳೆಯರ ಸಾಮಾಜಿಕ ಸ್ಥಿತಿ ಸುಧಾರಣೆಗೊಳ್ಳಲು ಕಾರ್ಯ ನಡೆಸುತ್ತಿದ್ದ ಬೇರೆ ಬೇರೆ ಸಂಸ್ಥೆಗಳ ಜೊತೆ ನಿಕಟ ಸಂಪರ್ಕವಿತ್ತು. ಈ ರೀತಿ ವಿಚಾರಗಳ ಕುರಿತು ಪುಣೆಯಲ್ಲಿ ಜನಜಾಗೃತಿ ಅಧಿಕವಿತ್ತು. ಪಂಡಿತಾ ರಮಾಬಾಯಿ ಸರಸ್ವತಿ (1858–1922)

ಎಂಬ ಓರ್ವ ಅಪ್ರತಿಮ ವಿದುಷಿ 1890ನೇ ಇಸವಿಯಲ್ಲಿಯೇ 'ಶಾರದಾ ಸದನ'ವೆಂಬ ಸಂಸ್ಥೆಯನ್ನು ಸ್ಥಾಪಿಸಿದ್ದರು. ತರುಣ ವಿಧವೆಯರಿಗೆ ಮತ್ತು ಬೇರೆ ಅನಾಥ ಮಹಿಳೆಯರಿಗೆ ಕೂಡಾ ಶಿಕ್ಷಣ ನೀಡಿ ಸ್ವಾವಲಂಬಿಗಳನ್ನಾಗಿಸುವ ಉದ್ದೇಶ ಈ ಸಂಸ್ಥೆಯದ್ದಾಗಿತ್ತು. ರಮಾಬಾಯಿ ರಾನಡೆ (1862–1924) ಅವರು ಕೂಡಾ, ತನ್ನ ಪತಿ ನ್ಯಾಯಮೂರ್ತಿ ರಾನಡೆಯವರ ಸಕ್ರಿಯ ಪ್ರೋತ್ಸಾಹದಿಂದ 'ಸೇವಾಸದನ'ವೆಂಬ ಸಂಸ್ಥೆ ಸ್ಥಾಪನೆ ಮಾಡಿದ್ದರು. ವಿಧವೆಯರು, ತಿರಸ್ಕೃತರು ಮತ್ತು ಅನಾಥ ಮಹಿಳೆಯರಿಗೆ ಅಲ್ಲಿ ಆಶ್ರಯ ದೊರೆಯುತ್ತಿತ್ತು. ಈ ಇಬ್ಬರೂ ರಮಾಬಾಯಿಯವರ ಆತ್ಮೀಯ ಪರಿಚಯ, ಗಿರಿಜಾಬಾಯಿ ಮತ್ತು ಕಮಲಾದೇವಿಗೆ ಇತ್ತು.

ಮಹಿಳೆಯರಿಗೆ ಆಶ್ರಯ ಮತ್ತು ಶಿಕ್ಷಣ ನೀಡುವ 'ಶಾರದಾ ಸದನ'ವೆಂಬ ಸಂಸ್ಥೆಯನ್ನು ಗ್ರೆಪ್ಪಾ ಅವರು ಕೂಡಾ ಸ್ಥಾಪಿಸಿದ್ದರು. ಅವರ ಈ ಕಾರ್ಯದಲ್ಲಿ ಕಮಲಾದೇವಿ ಪಾಲುಗೊಳ್ಳುತ್ತಿದ್ದರು. ಸಾರ್ವಜನಿಕ ಜೀವನದ ಅತ್ಯವಶ್ಯ ಭಾಗವಾಗಿದ್ದ ಭಾಷಣಕಲೆಯನ್ನು ಕಮಲಾದೇವಿ ರೂಢಿಸಿಕೊಂಡಿದ್ದರು. ಈ ವಿಚಾರದಲ್ಲಿ ಅವರಿಗೆ ಆದರ್ಶವಾಗಿದ್ದವರು ಡಾ. ಆನಿಬೆಸೆಂಟ್. ನಂತರ ಗೌರವಾನ್ವಿತ ಶ್ರೀನಿವಾಸ ಶಾಸ್ತ್ರಿ (1869–1946) ಅವರು. ಶ್ರೀನಿವಾಸ ಶಾಸ್ತ್ರಿ ಆ ಕಾಲದ ಲೋಕಪ್ರಸಿದ್ಧ ವಾಗ್ಮಿಯಾಗಿದ್ದರು. ಅವರಿಗೆ ಇಂಗ್ಲಿಷಿನ ಮೇಲೆ ಬ್ರಿಟಿಷರೇ ಚಕಿತಗೊಳ್ಳುವಷ್ಟು ಪ್ರಭುತ್ವವಿತ್ತು. ಗೋಖಲೆ ಸಾರ್ವಜನಿಕ ಸಂಸ್ಥೆಯ ವತಿಯಿಂದ ದೇಶಸೇವೆ, ಸ್ವರಾಜ್ಯ, ಸ್ವಾವಲಂಬನೆ, ಇತ್ಯಾದಿ ವಿಷಯದ ಕುರಿತು ಅವರು ಸಾರ್ವಜನಿಕ ಭಾಷಣ ನೀಡುತ್ತಾ ದೇಶ, ವಿದೇಶಗಳ ಯಾತ್ರೆ ಮಾಡುತ್ತಿದ್ದರು.

ಒಮ್ಮೆ ಶ್ರೀನಿವಾಸ ಶಾಸ್ತ್ರೀಯವರು ತಾವು ಭಾಷಣ ನೀಡುತ್ತಿದ್ದ ಸಂದರ್ಭದಲ್ಲಿ ಕಮಲಾದೇವಿಗೆ ಕೂಡಾ ಮಾತನಾಡುವಂತೆ ತಿಳಿಸಿದರು, ಅದೂ ಪೂರ್ಣ ತಯಾರಿ ಇಲ್ಲದಿರುವಾಗ! ಆಗ ಇಪ್ಪತ್ತೊಂದು ವರ್ಷ ವಯಸ್ಸಿನವರಾಗಿದ್ದ ಕಮಲಾದೇವಿಗೆ ನಡುಕ ಹುಟ್ಟಿತು. ಆದರೂ ತನಗೆ ಗೊತ್ತಿದ್ದ 'ಮಹಿಳೆಯರ ಪ್ರಗತಿ' ವಿಚಾರವಾಗಿ ಅವರು ಮಾತನಾಡಿದರು. ಸೇರಿದ ಜನ ಜೋರಾಗಿ ಚಪ್ಪಾಳೆ ತಟ್ಟಿದರು. ಮರುದಿನ ಪತ್ರಿಕೆಗಳಲ್ಲಿ ಅವರ ಪ್ರಶಂಸೆ ಬಂತು. '*ಶಿ ಕೇಮ್, ಶಿ ಸಾ, ಶಿ ಕಾಂಕರ್ಡ್*' ಎನ್ನುವ ಶೀರ್ಷಿಕೆಯಲ್ಲಿ ಅವರ ಭಾಷಣ ಕೌಶಲ್ಯದ ವರದಿ ಬಂದಿತ್ತು. ತರುಣ ವಯಸ್ಸಿನಲ್ಲಿಯೇ ವಿಚಾರದ ಸ್ಪಷ್ಟನೆ ಮತ್ತು ಇಂಗ್ಲಿಷ್ ಭಾಷೆಯ ಸಮರ್ಪಕ ಬಳಕೆ ಅವರಿಗೆ ಸಾಧಿಸಿತ್ತು. ಅದಕ್ಕೆ ಇನ್ನಷ್ಟು ರಂಗು ಬೀರಿದ್ದು ಅವರ ಸುಂದರ ಮತ್ತು ತರುಣ ವ್ಯಕ್ತಿತ್ವ. ನಂತರದ ವರ್ಷಗಳಲ್ಲಿ ತಮ್ಮ ಭಾಷಣ ಕಲೆಯಿಂದ ಸಾರ್ವಜನಿಕ ಬದುಕಿನಲ್ಲಿ ಅವರು ಹೆಚ್ಚು ಪ್ರಸಿದ್ಧರಾದರು. ಈ ಸಾಧನೆ ಜನಸಂಘಟನೆ ಕಾರ್ಯದಲ್ಲಿ ಅದ್ಭುತ ರೀತಿಯಿಂದ ಒದಗಿಬಂತು.

## ಅಧ್ಯಾಯ ೪

# ಸಕ್ರಿಯ ರಾಜಕಾರಣ: ಅಸಹಕಾರ ಚಳವಳಿ

ಮದ್ರಾಸ್ ವಿಧಾನಸಭಾ ಚುನಾವಣೆ 1926ರಲ್ಲಿ ನಡೆಯಿತು. ಈ ಚುನಾವಣೆಯಲ್ಲಿ ಬರೀ 51 ಮತಗಳಿಂದ ಸೋತ ಕಮಲಾದೇವಿ ಇಡೀ ಭಾರತದಲ್ಲಿ ಚುನಾವಣೆಯಲ್ಲಿ ಸ್ಪರ್ಧಿಸಿದ ಪ್ರಪ್ರಥಮ ಮಹಿಳೆ ಎನಿಸಿಕೊಂಡರು ! ಆನಂತರ ರಾಜಕೀಯ ರಂಗದಲ್ಲಿ ಅವರ ಸ್ಥಾನ ಮೇಲೇರುತ್ತಾ ಹೋಯಿತು. ರಾಜಕಾರಣ ಅವರಿಗೆ ಇಷ್ಟದ ಕ್ಷೇತ್ರವಾಗಿರಲಿಲ್ಲ. ಜನ್ಮತಃ ಅವರು ಸೌಂದರ್ಯದ ಆರಾಧಕಿ. ಅವರಿಗೆ ಇಡೀ ಕಲಾಕ್ಷೇತ್ರದ ಪರಿಚಯವಿತ್ತು. ಸಣ್ಣಂದಿನಿಂದಲೇ ಸಂಗೀತ, ನಾಟಕ, ಹಸ್ತಕೌಶಲ್ಯ, ಚಿತ್ರಕಲೆ, ಸಾಹಿತ್ಯ ಇತ್ಯಾದಿಗಳಲ್ಲಿ ಅವರ ಒಲವು ಎದ್ದುಕಾಣುತ್ತಿತ್ತು. ಆದರೆ ದೇಶದ ಸ್ಥಿತಿಯು ಬಹಳ ಕಠಿಣವಾಗಿತ್ತು. ದೇಶಕ್ಕೆ ಸ್ವಾತಂತ್ರ್ಯ ದೊರಕಿಸುವ ಕಡೆಗೆ ಅವರ ದೃಷ್ಟಿ ಇತ್ತು. ಯುವಜನರಿಗೆ, ಸುಶಿಕ್ಷಿತರಿಗೆ ಮಾತ್ರವಲ್ಲ ವಯಸ್ಸಾದವರಿಗೆ ಮತ್ತು ಅವಿದ್ಯಾವಂತರಿಗೆ ಕೂಡಾ ದೇಶದ ಪರತಂತ್ರ ಪರಿಸ್ಥಿತಿಯ ಕುರಿತು ಕಳವಳವಿತ್ತು. 'ಸ್ವಾತಂತ್ರ್ಯ ಪ್ರಾಪ್ತಿಗಾಗಿ ನಾನು ಯಾವ ರೀತಿಯಲ್ಲಿ ಸಹಾಯ ನೀಡುವುದು ಸಾಧ್ಯವಿದೆ?' ಎಂಬುದು ಪ್ರತಿಯೊಬ್ಬ ಸಂವೇದನಾಶೀಲ ವ್ಯಕ್ತಿಯ ಭಾವನೆಯಾಗಿತ್ತು. ಈ ಭಾವನೆಯೇ ಇಡೀ ದೇಶದ ಜನರನ್ನು ಒಟ್ಟುಗೂಡಿಸಿತ್ತು. ಇದೇ ಸಮಯದಲ್ಲಿ ಬಾಪೂಜಿ ಮತ್ತು ಅವರೊಂದಿಗೆ ಕೆಲಸ ಮಾಡುತ್ತಿದ್ದ ಅಪೂರ್ವ ರಾಜಕೀಯ ವ್ಯಕ್ತಿಗಳು ದೇಶದಾದ್ಯಂತ ಕಂಡುಬರತೊಡಗಿದರು. ಅವರು ದುಡಿಯಲು ಸಿದ್ಧರಿದ್ದ, ದೇಶಕ್ಕಾಗಿ ಸರ್ವತ್ಯಾಗ ಮಾಡಲು ತಯಾರಿದ್ದ ಯುವಜನರಿಗೆ ಮಾರ್ಗದರ್ಶನ ನೀಡಿದರು. ಈ ಯುವಜನರು ಸ್ವಯಂಪ್ರೇರಣೆಯಿಂದ ದೊಡ್ಡ ಪ್ರಮಾಣದಲ್ಲಿ ಬಲಿಷ್ಠವೂ, ಆಕರ್ಷಕವೂ ಆಗಿದ್ದ ಅಖಿಲ ಭಾರತ ಕಾಂಗ್ರೆಸ್ ಸಂಸ್ಥೆಗೆ ಸದಸ್ಯರಾಗತೊಡಗಿದರು.

ಕಮಲಾದೇವಿಯೂ ಈ ಆಕರ್ಷಣೆಯಿಂದ ದೂರ ಉಳಿಯಲಿಲ್ಲ! ಅವರೇ ಹೇಳಿದ ಪ್ರಕಾರ, ಆಗಿನ ಎ.ಐ.ಸಿ.ಸಿ.ಯ (ಆಲ್ ಇಂಡಿಯಾ ಕಾಂಗ್ರೆಸ್ ಕಮಿಟಿ) ಸದಸ್ಯತ್ವಕ್ಕಾಗಲೀ ಅಥವಾ ಕುರ್ಚಿಗಾಗಲೀ ಸ್ಪರ್ಧೆ ಇರಲಿಲ್ಲ. ಕೆಲಸ ಮಾಡಲು ತಯಾರಿದ್ದವರಿಗೆ ಮತ್ತು ಉತ್ಸಾಹಿ ಜನರಿಗೆ ಅನುಭವಶಾಲೀ ಹಿರಿಯ ಸದಸ್ಯರು ಮತ್ತು ಮುಖಂಡರು ಕೆಲಸ ವಹಿಸಿಕೊಡುತ್ತಿದ್ದರು. ತಾವಾಗಿ ಮುಖ್ಯ ಹುದ್ದೆಗಳಿಗೆ ಹೆಸರು ಸೂಚಿಸುತ್ತಿದ್ದರು, ಅಥವಾ ಶಿಫಾರಸು ಮಾಡುತ್ತಿದ್ದರು. ಕಮಲಾದೇವಿ ಸ್ವಯಂಸೇವಿಕೆಯ ರೂಪದಲ್ಲಿಯೇ ತನ್ನನ್ನು ಗುರುತಿಸಿಕೊಳ್ಳಲು ಇಷ್ಟಪಡುತ್ತಿದ್ದರು. ಅವರಿಗೆ ಕಾಂಗ್ರೆಸ್ ಸಂಸ್ಥೆಯದೇ ಶಾಖೆಯಾಗಿದ್ದ ಇಂಡಿಯನ್ ಸೋಶಿಯಲಿಸ್ಟ್ ಕಾನ್‌ಫರೆನ್ಸಿನ ಕಡೆ ಅವರ ಒಲವು ಇತ್ತು. ಕೆಲವೇ ದಿನಗಳಲ್ಲಿ ಅವರು ಈ ಕಾನ್‌ಫರೆನ್ಸಿನ ಕಾರ್ಯದರ್ಶಿಯಾಗಿ ಚುನಾಯಿತರಾದರು. ಬ್ರಿಟಿಷ್ ಸರಕಾರವು ಅದುವರೆಗೆ ನೀಡುವೆನೆಂದು ಹೇಳಿಕೊಂಡು ಬಂದಿದ್ದ ಸ್ವರಾಜ್ಯದ ಷರತ್ತುಗಳ ಆಶ್ವಾಸನೆಗಳಲ್ಲಿ ಒಂದನ್ನು ಕೂಡಾ ಪಾಲಿಸಿಲ್ಲ! ಕಾಂಗ್ರೆಸ್ ನೇತಾರರು ಚರ್ಚಿಸಿದ ಯಾವುದೇ ಸ್ವಾಯತ್ತದ ಸೂಚನೆಗಳಿಗೆ ಅನುಮತಿ ದೊರೆತಿಲ್ಲ ಎಂದು ಸಮಾಜವಾದದ ಕಡೆಗೆ ವಾಲಿದ ಯುವಜನರಲ್ಲಿ ಅಸಮಾಧಾನ ಹೆಚ್ಚುತ್ತಲಿತ್ತು.

ಇದೇ ವೇಳೆ, ಯುಸುಫ್ ಮೆಹರಲ್ಲಿ (1903–1950) ಹೆಸರಿನ ಯುವ

ಕ್ರಾಂತಿಕಾರಿಯೊಬ್ಬರು ಮುಂಬೈಯಲ್ಲಿ ಯೂತ್‌ಲೀಗ್ ಹೆಸರಿನ ಯುವಜನರ ಸಂಘಟನೆಯನ್ನು ಕಟ್ಟಿದ್ದರು. ಅವರು ಈ ಸಂಸ್ಥೆಗೆ ಸದಸ್ಯರಾಗುವಂತೆ ಕಮಲಾದೇವಿಯಲ್ಲಿ ವಿನಂತಿಸಿಕೊಂಡರು. ಕಮಲಾದೇವಿ ತಕ್ಷಣ ಒಪ್ಪಿಕೊಂಡರು. ಬೆಳೆಯುತ್ತಿರುವ ಬ್ರಿಟಿಷ್ ನಿರಂಕುಶ ಪ್ರಭುತ್ವದ ವಿಚಾರವಾಗಿ ಕಾಂಗ್ರೆಸಿನ ಹಿರಿಯರು ಮತ್ತು ಪುಡಾರಿಗಳು ನಿಷ್ಕ್ರಿಯವಾಗಿದ್ದಾರೆ ಎಂಬುದಾಗಿ ಅವರಿಗೆ ಕೂಡಾ ಅನ್ನಿಸಲಾರಂಭಿಸಿತ್ತು. ಇದೇ ಸಂದರ್ಭದಲ್ಲಿ ಅವರು ಯುರೋಪಿನ ವಿವಿಧ ದೇಶಗಳಲ್ಲಿ ಸುತ್ತಾಡಿ ಬಂದಿದ್ದರಿಂದ, ಮೊದಲ ಮಹಾಯುದ್ಧದ ನಂತರ ಜಾಗತಿಕ ಹತ್ಯಾಕಾಂಡ ಮತ್ತು ಅದರ ಕುರಿತು ಆಯಾ ದೇಶಗಳ ವಯಸ್ಕರು ತೋರಿದ ಅಲಕ್ಷ್ಯದ ಕುರಿತು ಅಲ್ಲಿನ ಯುವಶಕ್ತಿಯು ತೋರಿದ ಆಕ್ರೋಶವನ್ನು ಅವರು ನೋಡಿದ್ದರು. ಮಹಾಯುದ್ಧದಲ್ಲಿ ವಿಜಯಪ್ರಾಪ್ತಿಯಾಗಿ ದೊಡ್ಡ ಸಾಮ್ರಾಜ್ಯವೆನಿಸಿದ್ದರಿಂದ, ಬ್ರಿಟಿಷರು ಯುದ್ಧದ ನಂತರ ಭಾರತದ ಕುರಿತು ಇನ್ನಷ್ಟು ಕಠಿಣರಾಗಿದ್ದಾರೆ ಎಂದು ಯುವಜನರಿಗೆ ಭಾಸವಾಗುತ್ತಿತ್ತು.

ಯೂತ್‌ಲೀಗಿನ ಸರ್ವಸದಸ್ಯರ ಸಭೆ ನಡೆಯಿತು. ಸ್ವರಾಜ್ಯ ಚಳವಳಿಯನ್ನು ಮುಂದುವರಿಸಬೇಕು, ಬ್ರಿಟಿಷರು ಒಪ್ಪಿಕೊಂಡಿರುವ ಸ್ವಾಯತ್ತತೆಯ ಬೇರೆ ಬೇರೆ ಷರತ್ತುಗಳನ್ನು ಒಂದೊಂದಾಗಿ ಆಚರಣೆಗೆ ತರುವಂತೆ ಕಾಂಗ್ರೆಸ್ ಸಂಸ್ಥೆಯು ಸರಕಾರಕ್ಕೆ ಆಗ್ರಹಪಡಿಸಬೇಕು, ಮತ್ತು ಈ ನಿಟ್ಟಿನಲ್ಲಿ ಕಾಂಗ್ರೆಸಿನ ನಾಯಕರಾಗಿರುವ ಪುಢಾರಿಗಳು ಒತ್ತಡವನ್ನು ತರಬೇಕು, ಎಂದು ಎಲ್ಲರೂ ಸೇರಿ ಠರಾವು ಮಂಡಿಸಿದರು.

ಕೆಲವೇ ದಿನಗಳಲ್ಲಿ ಅಖಿಲಭಾರತ ಕಾಂಗ್ರೆಸ್ ಅಧಿವೇಶನವು ಲಾಹೋರಿನಲ್ಲಿ ನಡೆಯುವುದಿತ್ತು. ಅದಕ್ಕಿಂತ ಮೊದಲೇ ಅಖಿಲ ಭಾರತ ಯುವ ಸಮ್ಮೇಳನವೊಂದನ್ನು ಸಂಘಟಿಸಿ, 'ಸ್ವರಾಜ್ಯ ನಮಗೆ ಬೇಕು' ಎನ್ನುವ ದೇಶದ ಯುವಶಕ್ತಿಯ ಅಭಿಪ್ರಾಯವನ್ನು ಮೊದಲು ಜನರ ಮುಂದೆ ಇಡುವುದು, ನಂತರ ಕಾಂಗ್ರೆಸ್ ಅಧಿವೇಶನದಲ್ಲಿ ಪ್ರಸ್ತುತ ಪಡಿಸುವುದು ಎಂಬ ವಿಚಾರ ಹೊರಬಿತ್ತು. ಯೂತ್ ಲೀಗಿನ ಸಮಾವೇಶವನ್ನು 1929, ಡಿಸೆಂಬರ್ ತಿಂಗಳಲ್ಲಿ ಅಹಮದಾಬಾದಿನಲ್ಲಿ ನಡೆಸುವುದೆಂದು ಸರ್ವಾನುಮತದಿಂದ ನಿರ್ಧರಿಸಲಾಯಿತು. ಇದರ ಅಧ್ಯಕ್ಷರಾಗಿ ಕಮಲಾದೇವಿಯವರು ಸರ್ವಾನುಮತದಿಂದ ಆಯ್ಕೆಯಾದರು! ಅವರ ಅಸೀಮ ಧೈರ್ಯ, ಭಾಷಣದ ಮೇಲಿನ ಪ್ರಭುತ್ವ, ಬೆರೆತು ಕೆಲಸ ಮಾಡುವ ಸಾಮರ್ಥ್ಯ, ಮತ್ತು ಸ್ವಯಂ ಸೇವಿಕೆಯಾಗಿದ್ದುಕೊಂಡೇ ನಡೆಸಿದ ಬೇರೆ ಬೇರೆ ಸಂಘ ಸಂಸ್ಥೆಗಳ ಸಂಘಟನೆ, ಎಲ್ಲರಿಗೂ ತಿಳಿದೇ ಇತ್ತು. ಆಗ ಅವರಿಗೆ ಪ್ರಾಯ 26 ವರ್ಷ!

ವಯಸ್ಸಿನಲ್ಲಿ ಚಿಕ್ಕವರಾಗಿದ್ದರೂ, ಕಮಲಾದೇವಿಗೆ ತನ್ನ ಆದರ್ಶ, ದೇಶದ ಅಗತ್ಯ, ಮತ್ತು ಯುವಜನರು ಮಾಡಬೇಕಾದ ಕೆಲಸದ ಕುರಿತು ಸ್ಪಷ್ಟ ಕಲ್ಪನೆ ಇತ್ತು. ಅವರು ವಹಿಸಿ ಕೊಳ್ಳಬೇಕಾದ ಜವಾಬ್ದಾರಿಯ ತಿಳಿವಳಿಕೆ ಕೂಡಾ ಇತ್ತು. ಜನರು ಎಲ್ಲಾ ವಿಧದ ತ್ಯಾಗಕ್ಕೆ ಸಿದ್ಧರಾಗಬೇಕು. ದೇಶಕ್ಕೆ ಸಂಪೂರ್ಣ ಸ್ವರಾಜ್ಯ ಬೇಕು. ಯುವಶಕ್ತಿಯು ಸಂಘಟಿತ ರೂಪದಲ್ಲಿ ತಮ್ಮ ಅತೀ ಮುಖ್ಯ ಬೇಡಿಕೆಯಾಗಿರುವ 'ಪೂರ್ಣ ಸ್ವರಾಜ್ಯ'ಕ್ಕಾಗಿ ಹೋರಾಡಬೇಕು. ಇದನ್ನು ಖಚಿತರೂಪದಲ್ಲಿ ಮಂಡಿಸಿದಾಗ ಸರಕಾರ ಅವರ ಧ್ವನಿಯನ್ನು ಅಡಗಿಸಲು ಎಲ್ಲಾ ರೀತಿಯಿಂದ ಪ್ರಯತ್ನ ನಡೆಸುವುದು. ಆದರೂ ಅದಕ್ಕೆ ಕೂಡಾ ತಯಾರಿರಬೇಕು. ಪ್ರತಿಯೊಂದು ದಮನದ ರೀತಿಗೆ ಪ್ರತಿಯಾಗಿ ಹೊಸಹೊಸ ಪ್ರತಿಭಟನೆಯ ರೂಪ ಕೂಡಾ ಪ್ರಾರಂಭಗೊಳ್ಳುವುದು! ಇದು ಕಮಲಾದೇವಿಯ ವಿಚಾರವಾಗಿತ್ತು. ಅವರು ಇದೇ ವಿಚಾರವನ್ನು ತನ್ನ ಅಧ್ಯಕ್ಷ ಭಾಷಣದಲ್ಲಿ ಹೇಳಲು ನಿರ್ಧರಿಸಿದರು.

ಅಹಮದಾಬಾದ್ ನಗರ ಉತ್ಸಾಹದಿಂದ ತುಂಬಿಕೊಂಡಿರುವುದು ಕಾಣಿಸುತ್ತಿತ್ತು. ಲಾಂಗ್‌ಲಿವ್ ರೆವಲ್ಯೂಶನ್ !, ಅಸಹಕಾರ ಚಳವಳಿ ಅಮರವಾಗಲಿಥ! ಭಾರತೀಯರೇ ಎಚ್ಚೆತ್ತುಕೊಳ್ಳಿರಿ ! ಎಂಬ ಘೋಷಣೆ, ಬಾವುಟಗಳು, ಮತ್ತು ಪತಾಕೆಗಳು ರಾಜಮಾರ್ಗದ ಎರಡೂ ಕಡೆಗಳಲ್ಲಿ ಶೋಭಿಸುತ್ತಿದ್ದವು. ಕಮಲಾದೇವಿಯನ್ನು ಮೆರವಣಿಗೆಯಲ್ಲಿ ಚಪ್ಪರಕ್ಕೆ ಕರೆತರಲಾಯಿತು. ಐದು ಸಾವಿರ ಮಂದಿ ಚಪ್ಪರದಲ್ಲಿ ನೆರೆದಿದ್ದರು. ಕಮಲಾದೇವಿಯವರು ತಮ್ಮ ಧೀರ ಹಾಗೂ ಸ್ಪಷ್ಟ ಧ್ವನಿಯಲ್ಲಿ ಲಕ್ಷಗಟ್ಟಳೆ ದೇಶಪ್ರೇಮಿಗಳನ್ನು ಕಾಡುತ್ತಿರುವ ವಿಚಾರಗಳನ್ನು ಹಂಚಿಕೊಂಡರು.

"...ಕೆನಡಾ, ಆಸ್ಟ್ರೇಲಿಯಾ ರೀತಿಯಲ್ಲಿ ಭಾರತಕ್ಕೆ ವಸಾಹತಿನ ಸೀಮಿತ ಸ್ವಾತಂತ್ರ್ಯವನ್ನು (ಡೊಮಿನಿಯನ್ ಸ್ಟೇಟ್ಸ್) ನೀಡುವ ವಿಚಾರ ನಮಗೆ ಇದೆ ಎಂದು ಬ್ರಿಟಿಷ್ ಸರಕಾರ ಹೇಳುತ್ತಾ, ಆಶ್ವಾಸನೆ ನೀಡುತ್ತಾ ಬಂದಿದೆ ! ಆಶ್ವಾಸನೆಯಲ್ಲಿ–ಡೊಮಿನಿಯನ್ ಸ್ಟೇಟ್ಸ್ ಅಥವಾ ಸ್ವಾತಂತ್ರ್ಯವೇ ? ಎಂದು ಒಣ ಹರಟೆ ಮುಂದುವರಿಸುವುದರಲ್ಲಿ ಅರ್ಥವಿಲ್ಲ. ನಮಗೆ ಸ್ವರಾಜ್ಯ ಬೇಕು ! ಸ್ವರಾಜ್ಯದ ಅರ್ಥ ಏನೆಂದರೆ ಈ ದೇಶದ ಪ್ರತಿಯೊಬ್ಬ ನಾಗರಿಕನಿಗೆ ಶಾರೀರಿಕ, ಸಾಂಸ್ಕೃತಿಕ, ನೈತಿಕ ರೂಪದಲ್ಲಿ ಬೆಳೆಯುವ ಅವಕಾಶ! ಇವತ್ತಿನವರೆಗೆ ಭಾರತದ ನಾಗರಿಕರು ಈ ಅವಕಾಶದಿಂದ ವಂಚಿತರಾಗಿ ಉಳಿದಿದ್ದಾರೆ. ಅವರಿಗೆ ಒಟ್ಟಾಗಿ ತಮ್ಮ ರಾಜಕೀಯ ಧೋರಣೆ ಯಾವುದು ? ಎಂಬುದನ್ನು ಬ್ರಿಟಿಷರು ಸ್ಪಷ್ಟ ರೂಪದಲ್ಲಿ ತಿಳಿಯಬೇಕು. ಯುವಜನರು ಈ ದೇಶದ ನಾಗರಿಕ ಅವಕಾಶಗಳ ಕುರಿತಾದ ಹಕ್ಕಿಗಾಗಿ ಹೋರಾಡಲು ತಯಾರಾಗಬೇಕು. ಆ ಹೋರಾಟದ ಪ್ರಥಮ ರೂಪವೆಂದರೆ ಸಂಘಟಿತ ಪ್ರತಿಭಟನೆ !" ಎಂದು ಅವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ಹೇಳಿದರು.

ಬರೀ ರಾಜಕೀಯ ಸುಧಾರಣೆಯ ಕುರಿತಷ್ಟೇ ಅವರು ಮಾತನಾಡಲಿಲ್ಲ. ಸಾಮಾಜಿಕ, ಆರ್ಥಿಕ ಸುಧಾರಣೆಯನ್ನು ತರಲು ಸಕ್ರಿಯ ಕೆಲಸ ನಡೆಯಬೇಕು ಎಂದು ಕೂಡಾ ಹೇಳಿದರು. ಆ ಕಾಲದಲ್ಲಿ ದೇವಾಲಯಗಳಲ್ಲಿ ಆಯಾ ಧರ್ಮದ ಅಥವಾ ಪಂಗಡದ ಜನರಿಗೆ ಮಾತ್ರ ಪ್ರವೇಶವಿರುತ್ತಿತ್ತು. ದೇವಾಲಯವೆಂದರೆ ರಾಷ್ಟ್ರೀಯ ಸ್ಮಾರಕವೆಂಬುದಾಗಿ ಘೋಷಿತವಾಗಬೇಕು ಮತ್ತು ಎಲ್ಲರಿಗೂ ಪ್ರವೇಶವಿರಬೇಕು ಎಂದು ಕಮಲಾದೇವಿಯವರು ಘೋಷಣೆ ಮಾಡಿದರು. ಹೇಳುವ ವಿಷಯವನ್ನು ಸರಳವಾದ ಭಾಷೆಯಲ್ಲಿ ಹೇಳಿ, ಮುಖ್ಯ ವಿಚಾರಗಳಿಗೆ ಒತ್ತು ನೀಡಿ ಮಾತನಾಡುವ ಕಲೆ ಕಮಲಾದೇವಿಗೆ ಸಿದ್ಧಿಸಿತ್ತು. ಅವರ ಪ್ರಭಾವೀ ವ್ಯಕ್ತಿತ್ವ ಮತ್ತು ಸೌಮ್ಯ ಆದರೆ ಖಚಿತ ಮಾತಿನಿಂದ ಜನರು ಪ್ರಭಾವಿತರಾಗುತ್ತಿದ್ದರು.

ಕಮಲಾದೇವಿಯ ಸ್ವತಂತ್ರ ವಿಚಾರಗಳಿಗೆ ಸಹಮತ ವ್ಯಕ್ತಪಡಿಸುತ್ತಾ ಬಂದ ಯುಸೂಫ್ ಮೆಹರಲ್ಲಿ, ನಂತರದ ವರ್ಷಗಳಲ್ಲಿ ಸೋಶಿಯಲಿಸ್ಟ್ ಪುಢಾರಿಯಾಗಿ ಅನೇಕ ಕ್ಷೇತ್ರಗಳಲ್ಲಿ ರಚನಾತ್ಮಕ ಕೆಲಸಗಳನ್ನು ಮಾಡಿದ್ದಾರೆ ಎನ್ನುವುದನ್ನು ಕಮಲಾದೇವಿಯವರು ತಮ್ಮ ಆತ್ಮಕತೆಯಲ್ಲಿ ತಿಳಿಸುತ್ತಾರೆ. ದುರ್ದೈವದಿಂದ ಯುಸೂಫ್ ಮೆಹರಲ್ಲಿ ತನ್ನ 47ನೇ ನಡುವಯಸ್ಸಿನಲ್ಲಿಯೇ ಮರಣ ಹೊಂದಿದರು.

ಬ್ರಿಟಿಷರನ್ನು ಹೊರತುಪಡಿಸಿ, ಸ್ವತಃ ದೇಶದಲ್ಲಿಯೇ ಸಾಮಾಜಿಕ ಪ್ರಗತಿಗೆ ಕಂಟಕವಾಗಿದ್ದ ಆರ್ಥಿಕ, ಸಾಮಾಜಿಕ ಅಸಮಾನತೆಯ ಕುರಿತು ಮಾತನಾಡಲು ಕಮಲಾದೇವಿ ಮರೆಯಲಿಲ್ಲ. ಮಹಿಳೆಯರ ಸಾಮಾಜಿಕ, ಅದರಲ್ಲಿಯೂ ಮುಖ್ಯವಾಗಿ ದೈಹಿಕ ಮತ್ತು ವೈಚಾರಿಕ ಬೆಳವಣಿಗೆಯ ಕಡೆಗೆ ಗಮನ ನೀಡದಿದ್ದರೆ ಸ್ವಾತಂತ್ರ್ಯ ಚಳವಳಿಗೆ ಅರ್ಥವಿಲ್ಲ ! ಎಂದು ಅವರು ಹೇಳಿದ್ದಾರೆ. ಈಗ ಎಲ್ಲಾ ಕ್ಷೇತ್ರಗಳಲ್ಲಿ ಪ್ರಚಲಿತವಿರುವ ಲಿಂಗಭೇದವು ಇದೇ ರೀತಿ ಮುಂದುವರಿದರೆ

ದೇಶದ ಬೆಳವಣಿಗೆ ಸಾಧ್ಯವಿಲ್ಲ! ಎಂಬುದು ಅವರ ಮಾತಿನ ತಾತ್ಪರ್ಯವಾಗಿತ್ತು.

ಪೂರ್ಣ ಸ್ವರಾಜ್ಯ ಪಡೆಯಲು ಎಲ್ಲಾ ರೀತಿಯಲ್ಲಿ ಅಹಿಂಸಾತ್ಮಕ ಹೋರಾಟ ಮಾಡುವುದೇ ಸರಿಯೆಂದು ಯುವ ಸಂಘ ಅಥವಾ ಯೂತ್‌ಲೀಗ್ ಒಂದು ಪ್ರಮಾಣ ವಚನವನ್ನು ಸಿದ್ಧಪಡಿಸಿತು. ಲಾಹೋರ್ ನಗರದಲ್ಲಿ ಸೇರಲಿದ್ದ ಕಾಂಗ್ರೆಸ್ ಅಧಿವೇಶನದಲ್ಲಿ ಈ ಪ್ರಮಾಣ ವಚನವನ್ನು ಸ್ವೀಕರಿಸುವ ಒತ್ತಾಯವನ್ನು ತರುವುದೆಂದು ನಿರ್ಧಾರವಾಯಿತು. ಆ ಪ್ರಮಾಣ ವಚನ ಹೀಗಿತ್ತು:

*ಸ್ವಾತಂತ್ರ್ಯವೆಂದರೆ ಭಾರತೀಯರ ಜನ್ಮಸಿದ್ಧ ಹಕ್ಕು. ನಮ್ಮ ನೆಲದಲ್ಲಿ ನಾವು ಶ್ರಮಪಟ್ಟು ಬೆಳೆಸಿದ ಉತ್ಪನ್ನ ಸ್ವತಃ ನಮಗೆ ಸಿಗುವಂತಿರಬೇಕು! ಈ ಹಕ್ಕು ನಮಗೆ ಸಿಗದೇ ಹೋದರೆ, ಸಿಗದಂತೆ ಸರಕಾರ ಒತ್ತಡ ತಂದರೆ, ಅದನ್ನು ವಿರೋಧಿಸುವ ಅಥವಾ ಅದರಲ್ಲಿ ಬದಲಾವಣೆಯನ್ನು ತರುವ ಸ್ವಾತಂತ್ರ್ಯ ಭಾರತೀಯರಿಗೆ ಸಿಗಬೇಕು! ಬ್ರಿಟಿಷರು ಭಾರತೀಯರಿಗೆ ಮೂಲಭೂತ ಹಕ್ಕುಗಳಿಂದ ವಂಚಿತಗೊಳಿಸಿದ್ದಾರೆ. ಆರ್ಥಿಕ ಮತ್ತು ರಾಜಕೀಯ ರೂಪದಲ್ಲಿ ಶೋಷಣೆ ಮಾಡಿದ್ದಾರೆ. ಆಧ್ಯಾತ್ಮಿಕ ರೂಪದಿಂದಲೂ ದುರ್ಬಲರಾಗುವಂತೆ ಮಾಡಿದ್ದಾರೆ... ಬ್ರಿಟಿಷರ ಈ ಬಂಧನ ಕಳಚಲೇಬೇಕು! ಪೂರ್ಣ ಸ್ವರಾಜ್ಯದಿಂದ ಮಾತ್ರ ಇದು ಸಾಧ್ಯ!*

*ಈ ಪೂರ್ಣ ಸ್ವರಾಜ್ಯವನ್ನು ನಾವು ಅಹಿಂಸಾತ್ಮಕ ರೂಪದಿಂದ ಪಡೆಯಬೇಕು! ಇದಕ್ಕೆ ಅಸಹಕಾರ ಚಳವಳಿಯು ಮುಖ್ಯ ಸಾಧನವಾಗಿದೆ. ಬ್ರಿಟಿಷರ ಸಂಪರ್ಕ ಮುರಿದು ಬೀಳಬೇಕು. ಇದಕ್ಕೆ ಕರನಿರಾಕರಣವು ಒಂದು ಸರಳ ಮಾರ್ಗವಾಗಿದೆ. ಯಾವುದೇ ರೀತಿಯ ಸಹಕಾರವನ್ನು ಸರಕಾರಕ್ಕೆ ನೀಡಲಾಗುವುದಿಲ್ಲ.*

– ಇದು ಮುಂಬೈ ಯೂತ್ ಲೀಗಿನ ಸದಸ್ಯರು ಕಮಲಾದೇವಿಯ ಮುಖಂಡತ್ವದಲ್ಲಿ ತೆಗೆದುಕೊಂಡ ಪ್ರಮಾಣ ವಚನವಾಗಿದೆ.

ಇಲ್ಲಿ 'ಪೂರ್ಣ ಸ್ವರಾಜ್ಯವೆಂದರೆ ಪೂರ್ಣ ಸ್ವಾತಂತ್ರ್ಯವೆಂದು ತಿಳಿಯಬೇಕು!' ಎಂದು ಬಹಳ ಜನರ ಒತ್ತಾಯ ಬಂತು. ಕಾಂಗ್ರೆಸ್ ಸಂವಿಧಾನದಲ್ಲಿ ಸ್ವರಾಜ್ಯವೆಂದರೆ ಸ್ವಾತಂತ್ರ್ಯವೆಂದೇ ನಿರ್ಧರಿಸಲಾಗಿತ್ತು. ಆದ್ದರಿಂದ ಯೂತ್‌ಲೀಗಿನ ಪ್ರಮಾಣ ವಚನದಲ್ಲಿ ಅದೇ ಅರ್ಥದಲ್ಲಿ ಅವರು ಆ ಶಬ್ದವನ್ನು ಸೇರಿಸಿದ್ದರು.

ಸ್ವರಾಜ್ಯದ ವಿಚಾರವಾಗಿ ಅಖಿಲಭಾರತ ಕಾಂಗ್ರೆಸ್ ಸಂಸ್ಥೆ ಕೂಡಾ ಇದೇ ದಿಕ್ಕಿನಲ್ಲಿ ಪ್ರಯತ್ನ ನಡೆಸುತ್ತಾ ಇತ್ತು. ಹಾಗಾಗಿ ಲಾಹೋರ್ ಅಧಿವೇಶನದಲ್ಲಿ ಯೂತ್ ಲೀಗಿನ ಬೇಡಿಕೆ ಸ್ವೀಕಾರವಾಗಲು ಯಾವುದೇ ತೊಂದರೆಯಾಗಲಿಲ್ಲ. ಜವಾಹರಲಾಲ್ ನೆಹರೂ ಅವರು 1930, ಜೂನ್ 26 ರಂದು 'ಸಂಪೂರ್ಣ ಸ್ವರಾಜ್ಯದ ಸ್ವಾತಂತ್ರ್ಯ ಯೋಧರ ಜೈ' ಎಂದು ಘೋಷಣೆ ಮಾಡಿದರು. ಯೂತ್ ಲೀಗಿನ ಪ್ರಯತ್ನ ಸಫಲವಾಯಿತು. ಆದರೆ ಈ ಚರ್ಚೆಯಲ್ಲಿ ಭಾಗವಹಿಸಲು ವೈಯಕ್ತಿಕ ಕಾರಣಗಳಿಂದಾಗಿ ಕಮಲಾದೇವಿಗೆ ಸಾಧ್ಯವಾಗಲಿಲ್ಲ.

ಯೂತ್‌ಲೀಗಿನ ಘೋಷಣೆ ಗಾಂಧೀಜಿಯವರನ್ನು ಕೂಡಾ ಒಂದು ಕ್ಷಣ ವಿಚಲಿತ ಗೊಳಿಸಿತ್ತು ಎಂದು ಕಮಲಾದೇವಿ ಹೇಳಿದ್ದಾರೆ. ಆದರೆ ಜನರ ಮನಸ್ಥಿತಿಯನ್ನು ತಿಳಿಯಲು ಅವರಿಗೆ ಹೆಚ್ಚು ಹೊತ್ತು ಹಿಡಿಯುತ್ತಿರಲಿಲ್ಲ. ಜನವರಿ ಇಪ್ಪತ್ತಾರನೇ ತಾರೀಖನ್ನು ಪೂರ್ಣ ಸ್ವರಾಜ್ಯ ದಿನವೆಂದು ತಿಳಿಯಬೇಕು ಮತ್ತು ಎಲ್ಲರೂ ಪ್ರಮಾಣ ವಚನವನ್ನು ಸ್ವೀಕರಿಸಬೇಕು ಎಂದು ಅವರು ಘೋಷಣೆ ಮಾಡಿದರು. ಆಗಿನ ಘಟನೆ ಕಮಲಾದೇವಿಯ ಬದುಕಿನಲ್ಲಿ ಒಂದು ಅವಿಸ್ಮರಣೀಯ ಪ್ರಸಂಗವಾಗಿ ಉಳಿಯಿತು. ದೇಶದಾದ್ಯಂತ ಅವರ ಪ್ರಸಂಗಾವಧಾನ

ಮತ್ತು ಧೈರ್ಯದ ಹೊಗಳಿಕೆ ಕೇಳಿಬರತೊಡಗಿತು.

ಮುಂಬೈಯಲ್ಲಿ ಪ್ರಮಾಣ ವಚನ ಸ್ವೀಕಾರದ ದಿನದ ತಯಾರಿಗೆ ಕಮಲಾದೇವಿ ಪೂರ್ಣ ಪ್ರಮಾಣದಲ್ಲಿ ಕೆಲಸ ಮಾಡತೊಡಗಿದರು. ಒಂದು ವಾರ ಪ್ರತಿದಿನ ಸಭೆ ನಡೆಸಿದರು. ಅವರು ನಾಲ್ಕು ಅಂಶಗಳಿಗೆ ಒತ್ತು ನೀಡಿದರು: 1. ಸ್ವರಾಜ್ಯವೆಂಬ ಪೂರ್ಣ ಸ್ವಾತಂತ್ರ್ಯ ಶೀಘ್ರ ಸಿಗಬೇಕು. 2. ಈ ಸ್ವಾತಂತ್ರ್ಯದ ಪ್ರಾಪ್ತಿಗಾಗಿ ಅಸಹಕಾರ ಚಳವಳಿ ಮುಂದುವರಿಯಬೇಕು. 3. ಕಾಂಗ್ರೆಸ್ ಕಾರ್ಯಕರ್ತರೆಲ್ಲರೂ ಸೇರಿ ಇದಕ್ಕೆ ಬೆಂಬಲ ನೀಡಬೇಕು. 4. ಭಾಷಣ ಮಾಡುವ ಬದಲು ಪ್ರಮಾಣ ವಚನಕ್ಕೆ ಒತ್ತು ನೀಡಬೇಕು !

ಜನವರಿ ಇಪ್ಪತ್ತಾರು, ಮಧ್ಯಾಹ್ನದ ಹೊತ್ತು. ಮುಂಬೈಯ ಆಜಾದ್ ಮೈದಾನಿನಲ್ಲಿ ಜನಸಾಗರ ತುಂಬಿಕೊಳ್ಳುತ್ತಿದೆ. ಪ್ರತಿಯೊಬ್ಬರ ದೃಷ್ಟಿ ತ್ರಿವರ್ಣ ಧ್ವಜವನ್ನು ಸ್ಥಾಪಿಸಿದ ವೇದಿಕೆಯ ಕಡೆಗೆ. ಪ್ರತಿಜ್ಞಾವಿಧಿ ಮುಗಿಯಿತು. ಕಮಲಾದೇವಿ ಧ್ವಜಸ್ತಂಭದ ಹತ್ತಿರ ಹೋಗುತ್ತಿದ್ದಾರೆ, ಅಷ್ಟರಲ್ಲಿ ಒಂದು ಗುಂಪು ವೇದಿಕೆಯತ್ತ ನುಗ್ಗಿಬಂದು, ತಮ್ಮ ಕೈಯಲ್ಲಿದ್ದ ಕೆಂಪು ಬಾವುಟವನ್ನು ಧ್ವಜಸ್ತಂಭಕ್ಕೇರಿಸುವ ಪ್ರಯತ್ನ ನಡೆಸಿತು. ಇದರರ್ಥ ತ್ರಿವರ್ಣದ ರಾಷ್ಟ್ರಧ್ವಜಕ್ಕೆ ಅಪಾಯ ! ಎಂಬುದು ಸ್ಪಷ್ಟವಿತ್ತು. ತಕ್ಷಣ ಅಲ್ಲಿ ಗಲಭೆ ಉಂಟಾಯಿತು. ಸಂಜೆ ಕಳೆದು ಕತ್ತಲೆ ಕವಿದಿದ್ದರಿಂದ ಏನಾಯಿತೆಂಬುದು ಯಾರಿಗೂ ಸ್ಪಷ್ಟವಾಗಿ ಗೋಚರವಾಗಲಿಲ್ಲ. ಆದರೆ ಯಾರಾದರೂ ಕೆಂಪು ಬಾವುಟವನ್ನು ಹಾಳುಗೆಡವಿದ್ದರೆ, ತ್ರಿವರ್ಣ ಬಾವುಟಕ್ಕೆ ಕೂಡಾ ಅನ್ಯಾಯವಾಗುವುದು ಸಹಜವಿತ್ತು. ಎಲ್ಲೆಲ್ಲಿಯೂ ಜನರ ಕಿರಿಚಾಟ, ಒದರಾಟ..'ಬಾವುಟಕ್ಕೆ ಹಾನಿ ಮಾಡಿದವರು ಯಾರು ? ಹಿಡಿಯಿರಿ ಅವರನ್ನು! ಹೊಡೆಯಿರಿ ?' ಗಲಾಟೆ ಜೋರಾಗಿ ಕೇಳಿಬರುತ್ತಿತ್ತು. ಕೆಂಪು ಬಾವುಟದ ಗುಂಪು, ತ್ರಿವರ್ಣ ಬಾವುಟದ ಕಡೆಗೆ ಮುನ್ನುಗ್ಗಿತು. ಕ್ಷಣ ಮಾತ್ರದಲ್ಲಿ ಕಮಲಾದೇವಿ ಧ್ವಜಸ್ತಂಭವನ್ನು ಅವುಚಿ ಹಿಡಿದರು. ಕಂಬಕ್ಕೆ ಸುತ್ತಿ ಹಿಡಿದ ಅವರ ಕೈಗಳಿಂದ ರಕ್ತ ಸುರಿಯಲಾರಂಭಿಸಿತು. ಈಗ ಯೂಸುಫ್ ಮೆಹರಲ್ಲಿ ಮತ್ತು ಬೇರೆ ಕಾರ್ಯಕರ್ತರು ಮುಂದೆ ಬಂದು ಕಮಲಾದೇವಿಯನ್ನು ಸುತ್ತುವರಿದು ನಿಂತರು. ಎತ್ತರದ ತರುಣನೊಬ್ಬ ಬಂದು ಕಮಲಾದೇವಿಯವರ ರಕ್ತಸಿಕ್ತ ಕೈಗಳನ್ನು ಬಿಡಿಸಿ, ತಾನು ಅವರ ಜಾಗದಲ್ಲಿ ನಿಂತುಕೊಂಡನು. 'ಈಕೆ ರಾಷ್ಟ್ರಧ್ವಜದ ಗೌರವ ಕಾಪಾಡಿದರು ! ಈ ಮಹಿಳೆ ನಮ್ಮ ಮಾನ ಕಾಪಾಡಿದರು !' ಎಂದು ಆತ ಎತ್ತರದ ಧ್ವನಿಯಿಂದ ಸಭೆಗೆ ಹೇಳುತ್ತಲೇ ಇದ್ದರು. ಕಮಲಾದೇವಿಯನ್ನು ಸುರಕ್ಷಿತ ಸ್ಥಳಕ್ಕೆ ಕರೆದೊಯ್ದು ಯೂಸುಫ್ ಮೆಹರಲ್ಲಿ ಅವರಿಗೆ ಅಗತ್ಯವಿದ್ದ ಚಿಕಿತ್ಸೆಯನ್ನು ಕೊಡಿಸಿದರು.

ಆ ಎತ್ತರದ, ಬಲಶಾಲಿ ಯುವಕ ಬೇರಾರೂ ಅಲ್ಲ, ಚಂದ್ರಬಾನ್ ಜೊಹರಿ ಆಗಿದ್ದರು. ಜೊಹರಿ ವಾನರಸೇನೆ ಎಂಬ ಮಕ್ಕಳ ಪಡೆಯನ್ನು ಸಿದ್ಧಪಡಿಸಿ, ಕಾಂಗ್ರೆಸ್ ಸಂದೇಶವಾಹಕರಾಗಿ ಕೆಲಸ ಮಾಡಲು ಈ ವಾನರಸೇನೆಗೆ ತರಬೇತಿ ನೀಡುತ್ತಿದ್ದರು. ಇಂದಿರಾಗಾಂಧಿಯವರು ಹನ್ನೆರಡು ವರ್ಷ ಪ್ರಾಯದಲ್ಲಿ ಅಲಹಾಬಾದಿನಲ್ಲಿ ಸಾವಿರ ಮಕ್ಕಳ ವಾನರಸೇನೆಯನ್ನು ಸಂಘಟಿಸಿದ್ದರೆಂಬ ಮಾತು ಕೂಡಾ ಇತಿಹಾಸ ಪ್ರಸಿದ್ಧವಾಗಿದೆ ! ಇಂದಿರಾಗಾಂಧಿಗೆ ಪ್ರೇರಣೆಯಾದದ್ದು ಚಂದ್ರಬಾನ್ ಜೊಹರಿಯ ಮೂಲ ಸಂಘಟನೆಯೇ. ಜೊಹರೀ ಪ್ರಚಾರ ಮತ್ತು ಪ್ರತಿಷ್ಠೆಯ ವಿರುದ್ಧ ಇದ್ದವರು. ಆದ್ದರಿಂದ ಅವರ ಕಾರ್ಯವನ್ನು ಯಾರೂ ಗಮನಿಸಿಲ್ಲ !

ಮರುದಿನ ಎಲ್ಲಾ ಪತ್ರಿಕೆಗಳಲ್ಲಿ ಕಮಲಾದೇವಿಯ ಸಾಹಸ ಪ್ರಕಟವಾಯಿತು. ರಾಷ್ಟ್ರಧ್ವಜದ ಗೌರವವನ್ನು ರಕ್ತರೂಪದಿಂದ ಅವರು ಕಾಪಾಡಿದ್ದರು !

ಅಧ್ಯಾಯ : ೫

# ಉಪ್ಪಿನ ಸತ್ಯಾಗ್ರಹ : ಸೇವೆಯಿಂದ ಮುಖಂಡತ್ವಕ್ಕೆ

(ಮಾರ್ಚ್ 10, 1930)

ಪೂರ್ಣ ಸ್ವರಾಜ್ಯ ಚಳವಳಿಯು ಉಪ್ಪಿನಂತಹ ಬಹಳ ಸಣ್ಣ ವಸ್ತುವಿನಿಂದ ಪ್ರಾರಂಭವಾಗ ಬಹುದು! ಎಂಬ ಕಲ್ಪನೆ ಆಗಿನ ಮುಖಂಡರಿಗೆ ಕನಸಿನಲ್ಲಿ ಕೂಡ ಬರುವುದು ಸಾಧ್ಯವಿರಲಿಲ್ಲ. ಆದರೆ ಮಹಾತ್ಮಾಗಾಂಧಿ ಅವರಿಗೆ ದೇಶದ ನಾಡಿಧ್ವನಿ ಸರಿಯಾಗಿ ಕೇಳಿಸುತ್ತಿತ್ತು. ಅವರು ಭಾರತದ ಅತ್ಯಂತ ಬಡ ನಿವಾಸಿಗಳನ್ನು ಗಮನದಲ್ಲಿ ಇಟ್ಟುಕೊಂಡೇ ಉಪ್ಪಿನ ಆಂದೋಲನವನ್ನು ಪ್ರಾರಂಭಿಸಿದರು ಮತ್ತು ಬ್ರಿಟಿಷ್ ಸರಕಾರಕ್ಕೆ ನಡುಕ ತಂದರು!

ಕೆಲವು ದಿನಗಳ ಹಿಂದೆ ಬ್ರಿಟನ್ನಿನ ಉಪ್ಪು ಆಯೋಗವು ಭಾರತದಲ್ಲಿ ತಯಾರಾಗುತ್ತಿರುವ ಉಪ್ಪಿನ ಮೇಲೆ ತೆರಿಗೆ ವಿಧಿಸಬೇಕು ಎಂದು ಭಾರತ ಸರ್ಕಾರಕ್ಕೆ ಶಿಫಾರಸು ಮಾಡಿತು. ಆ ಕಾರಣದಿಂದ ಈ ಸ್ವದೇಶಿ ಉಪ್ಪು ದುಬಾರಿಯಾಗುವುದು ಮತ್ತು ಇಂಗ್ಲೆಂಡಿನ ಜೆಶಯಾರ್ ಎಂಬಲ್ಲಿ ತಯಾರಾಗುತ್ತಿದ್ದ ಉಪ್ಪಿಗೆ ಭಾರೀ ದೊಡ್ಡ ಬೇಡಿಕೆ ಬರಬಹುದು ಮತ್ತು ಬ್ರಿಟಿಷರ ಸಮುದ್ರ ವ್ಯಾಪಾರಕ್ಕೆ ಕೂಡಾ ಅದರಿಂದ ಬಹಳ ಆಧಾರ ಮತ್ತು ಶಕ್ತಿ ಸಿಗಬಹುದು ಎಂಬ ಉದ್ದೇಶವಿತ್ತು. ವೈಸರಾಯರ ಸಮಾಲೋಚಕರು ಅದಕ್ಕೆ ಬೆಂಬಲ ನೀಡಿದ್ದರು. ಆದರೆ ಕೆಲವು ಭಾರತಪ್ರೇಮಿ ಬ್ರಿಟಿಷ್ ಮುಖಂಡರು ಇದಕ್ಕೆ ಅನುಮತಿ ನೀಡಿರಲಿಲ್ಲ. ಆದ್ದರಿಂದ ಕಾಯಿದೆ ಜಾರಿಗೊಳ್ಳಲು ತಡವಾಗಿ, ಕೊನೆಗೆ ಅದಕ್ಕೆ ಅನುಮೋದನೆ ದೊರೆಯಿತು. ಈ ಸಂದರ್ಭದಲ್ಲಿ ಬಡವರ ಗಂಜಿಗೆ ಸೂಕ್ತ ಸಂಗಾತಿ ಯಾಗಿದ್ದ ಚಿಟಿಕಿ ಉಪ್ಪು ದೇಶವನ್ನು ನಡುಗಿಸಿದ್ದು ಗಾಂಧೀಜಿಯವರು ಪ್ರಾರಂಭಿಸಿದ ದಂಡಿಯಾತ್ರೆಯೆಂಬ ಐತಿಹಾಸಿಕ ಘಟನೆಯಿಂದ! ಸ್ವದೇಶದಲ್ಲಿ ತಯಾರಾದ ಉಪ್ಪಿನ ಮೇಲೆ ಪ್ರತಿಬಂಧವನ್ನು ಹಾಕಲಾಗಿತ್ತು. ಉಪ್ಪು ತಯಾರಿಸುವುದು ಅಪರಾಧವಾಯಿತು! ಪ್ರತಿಬಂಧವನ್ನು ತೆಗೆದುಹಾಕಬೇಕು ಎನ್ನುವ ಏಕಮಾತ್ರ ಉದ್ದೇಶ ಈ ಸತ್ಯಾಗ್ರಹಕ್ಕೆ ಇತ್ತು.

ಉಪ್ಪಿನ ಸತ್ಯಾಗ್ರಹದ ಶಕ್ತಿ ಇಡೀ ದೇಶವನ್ನು ಎಚ್ಚರಗೊಳಿಸಿತು. ಗಾಂಧೀಜಿಯವರು ಉಪ್ಪಿನ ಕಾಯಿದೆ ಭಂಗ ಮಾಡುವ ನಿರ್ಣಯವನ್ನು ತೆಗೆದುಕೊಂಡದ್ದು ಜವಾಹರಲಾಲ್ ನೆಹರೂ ಅವರಂತಹ ಮುಖಂಡರಿಗೆ ತಕ್ಷಣಕ್ಕೆ ಅರ್ಥವಾಗಿರಲಿಲ್ಲ. ಆದರೆ ಈಗ ವಾದ ಮಾಡುತ್ತಾ ನಿಲ್ಲಲು ಸಮಯವಿರಲಿಲ್ಲ! ಗಾಂಧೀಜಿಯವರು ಮಾರ್ಚ್ 12ನೇ ತಾರೀಖಿನಂದು ಸಬರಮತಿ ಆಶ್ರಮದಿಂದ 248 ಮೈಲಿ ದೂರದಲ್ಲಿರುವ ಸಮುದ್ರ ಕಿನಾರೆಯ ದಂಡಿಗೆ ಹೊರಟರು. ಅಲ್ಲಿ ಸಾಂಕೇತಿಕವಾಗಿ ಸಮುದ್ರದ ನೀರಿನಿಂದ ಉಪ್ಪು ತಯಾರಿಸಿ ಕಾಯಿದೆಯ ಭಂಗ ಮಾಡುವುದು ಅವರ ಉದ್ದೇಶವಾಗಿತ್ತು. ಮೊದಲು ಅವರ ಜೊತೆ ಇದ್ದವರು 78 ಮಂದಿ. ಇವರಲ್ಲಿ ಕೆಲವರು ಅನಾರೋಗ್ಯಪೀಡಿತರಾದರು. ಇನ್ನು ಕೆಲವರು ದಣಿದರು. ಆದರೆ ಗಾಂಧೀಜಿ ಮಾತ್ರ ಮುಂದುವರಿದರು. "ನನ್ನ ಕೆಲಸವನ್ನು ಮುಗಿಸಿಯೇ ನಾನು ಹಿಂದಿರುಗುತ್ತೇನೆ! ಇಲ್ಲದಿದ್ದರೆ ನನ್ನ ದೇಹ ನದಿಯಲ್ಲಿ ತೇಲುವುದು!" ಎಂಬ ಉದ್ಗಾರ ತೆಗೆದರು.

ಬಾಪೂಜಿಯವರು ಮೇ 6ರಂದು ಬೆಳಿಗ್ಗೆ ಎಂಟೂವರೆ ಗಂಟೆಗೆ ಸಾವಿರಾರು ಜನರ

ಸಮ್ಮುಖದಲ್ಲಿ ದಂಡಿಯ ಉಪ್ಪು ನೀರಿನ ಸಂಗ್ರಹದಿಂದ ಉಪ್ಪು ತಯಾರಿಸಿ ಕಾಯಿದೆಯನ್ನು ಭಂಗಗೊಳಿಸಿದರು. "ಉಪ್ಪು ತಯಾರಿಸುವುದು ಅಪರಾಧವೆನ್ನುವುದನ್ನು ಮರೆತುಬಿಡಿ! ಅನುಕೂಲವಿರುವೆಡೆಗಳಲ್ಲಿ ನೈಸರ್ಗಿಕ ರೂಪದಲ್ಲಿ ಉಪ್ಪು ತಯಾರಿಸುವುದಕ್ಕೆ ಯಾವುದೇ ತೊಂದರೆಯಿಲ್ಲ!" ಎಂದು ಗಾಂಧೀಜಿ ಘೋಷಿಸಿದರು. ಕಾದುಕೊಂಡಿದ್ದ ದೇಶವಾಸಿ ಜನರಿಗೆ ಸ್ಪಷ್ಟ ಸಂದೇಶ ಸಿಕ್ಕಿತು! ಸಮುದ್ರ ದಂಡೆಯಲ್ಲಿದ್ದ ಸಣ್ಣ–ದೊಡ್ಡ ಊರುಗಳ ಜನರು ಚಳವಳಿಯಲ್ಲಿ ಧುಮುಕಿದರು. ಉಪ್ಪು ತಯಾರಿಕೆ ಪ್ರಾರಂಭವಾಯಿತು.

ಕಮಲಾದೇವಿಗೆ ಮೊದಲು ಅಸಮಾಧಾನವಿತ್ತು, ಯಾಕೆಂದರೆ ಗಾಂಧೀಜಿಯವರು ದಂಡಿಯಾತ್ರೆಯಲ್ಲಿ ಮಹಿಳೆಯರನ್ನು ಸೇರಿಸಿರಲಿಲ್ಲ! ಈ ಚಳವಳಿಗಾಗಿ ಅವರು ಅನೇಕ ಮಹಿಳೆಯರನ್ನು ಕಾರ್ಯಕರ್ತರಾಗಿ ತಯಾರು ಮಾಡಿದ್ದರು. ಗಾಂಧೀಜಿಯ ನಿರ್ಧಾರದಿಂದ ಅವರು ನಿರಾಶೆ ಹೊಂದಿದರು. ನಂತರ ಅವರಿಗೆ ಹೊಳೆದ ಉಪಾಯವೇನೆಂದರೆ ಸ್ವತಃ ತಾನೇ ಹೋಗಿ ಗಾಂಧೀಜಿಯವರನ್ನು ಭೇಟಿಯಾಗಿ, ಚಳವಳಿಯಲ್ಲಿ ಮಹಿಳೆಯರನ್ನು ಸೇರಿಸಲು ಅನುಮತಿ ಪಡೆಯುವುದು ಎಂದು.

ಕಮಲಾದೇವಿ ಸೂರತ್ ತಲುಪಿದರು. ಗಾಂಧಿಯವರ ಪಾದಯಾತ್ರೆ ಜಂಬುಸರಚಾ ಹಳ್ಳಿಯನ್ನು ತಲುಪುವುದರಲ್ಲಿತ್ತು. ಅಲ್ಲಿಗೆ ನಡೆದು ಹೋಗುವಾಗ ಧಗೆಯಿಂದ ಅವರಿಗೆ ಬಹಳ ತೊಂದರೆಯಾಯಿತು. ಬವಳಿಬಂದ ಹಾಗಾಯಿತು. ಜೊತೆಗಿದ್ದ ಪತ್ರಕರ್ತನೊಬ್ಬನು ಅವರಿಗೆ ಕಲ್ಲಂಗಡಿ ಹಣ್ಣು ತಿನ್ನಿಸಿದ. ಇದರಿಂದ ಅವರು ಸುಧಾರಿಸಿಕೊಂಡರು. ಪ್ರಾಯ ಸಂದ ಬಾಪೂಜಿ ದಿನಕ್ಕೆ 10 ಮೈಲಿ ಸಹಜವಾಗಿ ನಡೆಯುತ್ತಾರೆ. ನನ್ನಂತಹ ಯುವಜನರಿಗೆ ಇಷ್ಟು ಕಷ್ಟವನ್ನು ಕೂಡಾ ಅನುಭವಿಸುವುದು ಸಾಧ್ಯವಿಲ್ಲದಿದ್ದರೆ, ಲಕ್ಷಗಟ್ಟಳೆ ಮಹಿಳೆಯರಿಗಾಗಿ ನಾನು ಏನು ಮಾಡಲು ಶಕ್ತಳಿದ್ದೇನೆ ? ಎನ್ನುವ ವಿಚಾರದಿಂದ ದೃಢನಿಶ್ಚಯವನ್ನು ತಾಳಿ ಅವರು ಬಾಪೂಜಿಯವರು ಉಳಕೊಳ್ಳಲು ವ್ಯವಸ್ಥೆ ಮಾಡಿರುವ ಊರು ತಲುಪಿದರು.

"ಸ್ವಾತಂತ್ರ್ಯದ ರಹಸ್ಯವೆಂದರೆ ಅದು ನಿರ್ಭೀತಿಯೇ! ಭಯಪಡಬೇಡಿ! ನಿಮ್ಮಲ್ಲಿ ಧೈರ್ಯವಿದ್ದರೆ, ಆತ್ಮವಿಶ್ವಾಸವಿದ್ದರೆ, ಹಿಂಸೆಯ ಕಡೆಗೆ ಗಮನ ಹೋಗುವುದಿಲ್ಲ! ಸತ್ಯಾಗ್ರಹ ಮಾಡಿರಿ. ಆದರೆ ಯಾವುದೇ ಪ್ರಚೋದನಕಾರಿ ಪ್ರಸಂಗದಲ್ಲಿ ತೊಡಗಿಸಿಕೊಳ್ಳುವ ಕಲ್ಪನೆ ಮಾಡಬೇಡಿ. ಸಹನೆಯಿಂದಿರಿ!" ಎಂದು ಬಾಪೂಜಿ ಹೋದಹೋದ ಕಡೆಗೆಲ್ಲಾ ಜನರಿಗೆ ಗುಜರಾತಿ ಭಾಷೆಯಲ್ಲಿ ಧೈರ್ಯ ನೀಡುತ್ತಾ ಹೋದರು.

ಕಮಲಾದೇವಿ ಬಾಪೂಜಿಯವರನ್ನು ಭೇಟಿಯಾದರು. ಮಹಿಳೆಯರಿಗೆ ಅವಕಾಶ ನೀಡದಿರುವ ಕುರಿತು ಅವರು ಹೇಳುವ ಮೊದಲೇ ಗಾಂಧೀಜಿ ಹೇಳಿದರು, "ಮಹಿಳೆಯರು ಮಾಡುವಂತಹ ಕೆಲಸ ತುಂಬಾ ಇರುತ್ತದೆ! ಸ್ವದೇಶಿ ಪ್ರಚಾರ, ಪಿಕೆಟಿಂಗ್, ಮದ್ಯಪಾನ ನಿಲ್ಲಿಸುವುದು ಇತ್ಯಾದಿ. ಬಿಸಿಲಿನಲ್ಲಿ ಪಾದಯಾತ್ರೆ, ಘೋಷಣೆ ಬೇಡ! ಅವರಿಗೆ ಪೊಲೀಸರ ಹಿಂಸೆ ತಗಲುವುದು ಬೇಡ!" "ನೀವು ಹೇಳಿದ ಕೆಲಸಗಳೆಲ್ಲಾ ನಡೆಯುತ್ತಲಿವೆ. ಇಂತಹ ರಾಷ್ಟ್ರೀಯ ರೂಪದ ಉಪ್ಪಿನ ಸತ್ಯಾಗ್ರಹದಲ್ಲಿ ಕೂಡಾ ಅವರಿಗೆ ಅವಕಾಶ ದೊರೆಯಲಿ" ಕಮಲಾದೇವಿ ಹೇಳಿದರು. ಗಾಂಧೀಜಿ "ಸರಿ" ಎಂದು ಸಮ್ಮತಿಸಿದರು. ಅದನ್ನು ಅವರು ಸಂದೇಶದ ರೂಪದಲ್ಲಿ (ಲಿಖಿತ) ನೀಡಬೇಕೆಂಬ ಬೇಡಿಕೆಯನ್ನು ಕಮಲಾದೇವಿ ಮುಂದಿಟ್ಟರು. ಬಾಪೂಜಿ ಜೋರಾಗಿ ನಕ್ಕುಬಿಟ್ಟರು. "ನಿನ್ನ ಸೋದರಿಯರನ್ನು ನೀನು ತಿಳಿದುಕೊಂಡಿಲ್ಲ! ಅವರಿಗೆ ಯಾರಿಗೂ ನನ್ನ ಸಂದೇಶದ ಅಗತ್ಯವಿಲ್ಲ!" ಆದರೆ ಕಮಲಾದೇವಿ ಸಂದೇಶ ಬೇಡಿದರು. ಗಾಂಧೀಜಿಯವರು ಒಂದು ಕಾಗದದ ತುಂಡಿನ ಮೇಲೆ ಬರೆದರು – ಯಾರಿಗೆ

ಸಾಧ್ಯವಿದೆಯೋ ಅವರು ಉಪ್ಪಿನ ಕಾಯಿದೆಯ ವಿರುದ್ಧ ಸಾರ್ವತ್ರಿಕ ಅಸಹಕಾರ ಚಳವಳಿಯಲ್ಲಿ ಭಾಗವಹಿಸಲು ಅಡ್ಡಿಯಿಲ್ಲವೆಂದು ಈ ಮೂಲಕ ತಿಳಿಸುತ್ತೇನೆ. ಕಮಲಾದೇವಿಗೆ ಖುಶಿಯಾಯ್ತು. ಆದರೆ ತನ್ನ ಆಗ್ರಹಕ್ಕೆ ಯಾವುದೇ ಅರ್ಥವಿರಲಿಲ್ಲ! ಎಂಬ ಸತ್ಯ ಅವರಿಗೆ ಶೀಘ್ರದಲ್ಲಿಯೇ ತಿಳಿದುಬಂತು.

ಕಮಲಾದೇವಿ ಮುಂಬೈ ತಲುಪಿದರು. ಅಲ್ಲಿ ಅವರಿಗೆ ಮತ್ತು ಅವಂತಿಬಾಯಿ ಗೋಖಲೆಗೆ ಕಾಯಿದೆ ಭಂಗ ಚಳವಳಿಯ ನೇತೃತ್ವವನ್ನು ವಹಿಸಿಕೊಡಲಾಯಿತು. ಎಪ್ರಿಲ್ 16 ಜಲಿಯನ್‌ವಾಲಾ ಬಾಗ್ ದುರಂತದ ನೆನಪಿಗೆ ಸಮರ್ಪಿತವಾಗಿತ್ತು. ಈ ದಿನಕ್ಕಾಗಿ ಕಮಲಾದೇವಿಯವರು ಸ್ವಯಂಕಾರ್ಯಕರ್ತರ ಪಂಗಡಗಳನ್ನು ತಯಾರು ಮಾಡಿದರು. ಅಸಹಕಾರ ಚಳವಳಿಯಲ್ಲಿ ಮಹಿಳೆಯರು ಪೂರ್ಣ ಪ್ರಮಾಣದಲ್ಲಿ ತೊಡಗಿಸಿಕೊಳ್ಳಬೇಕು ಎಂಬುದು ಅವರ ಉದ್ದೇಶವಾಗಿತ್ತು. ಈ ಗುಂಪನ್ನು ಕರೆದುಕೊಂಡು ಅವರು ಉಪ್ಪಿನ ಸತ್ಯಾಗ್ರಹಕ್ಕೆ ತೆರಳಿದರು. ಖಾದಿವಸ್ತ್ರಧಾರಿಯಾಗಿ, ತ್ರಿವರ್ಣ ಚಿಹ್ನೆ ಧರಿಸಿದ ಮಹಿಳೆಯರ ಗುಂಪು ಜಯಜಯಕಾರ ಹೇಳುತ್ತಾ ಚೌಪಾಟಿ ದಿಕ್ಕಿನೆಡೆಗೆ ತೆರಳಿತು. ಅವರನ್ನು ಇತರ ಮಹಿಳೆಯರು ದಾರಿಯುದ್ದಕ್ಕೂ ಆರತಿ ಮಾಡಿ, ಗುಲಾಬಿ ನೀರನ್ನು ಸಿಂಪಡಿಸಿ, ಅತ್ತರ್ ಲೇಪಿಸಿ, ನಮಸ್ಕರಿಸುತ್ತಾ ಶುಭ ಸಂದೇಶ ನೀಡಿ ಸ್ವಾಗತಿಸಿದರು.

ಕಮಲಾದೇವಿಯವರ ತಂಡ ಸಮುದ್ರ ದಂಡೆಯನ್ನು ತಲುಪಿತು. ನೋಡಿದರೆ ಅಲ್ಲಿ ಕೋಟಿ ಜನ ಸೇರಿದೆ! ಮುಂಬೈ ನಗರವಿಡೀ ಖಾಲಿಯಾಗಿ ಇಲ್ಲಿ ಏಕತ್ರವಾದ ಅನುಭವ! ಅದರಲ್ಲಿಯೂ ಮಹಿಳೆಯರೇ ಅಧಿಕ ಸಂಖ್ಯೆಯಲ್ಲಿ ಇದ್ದಾರೆ! ಸಾವಿರಾರು ಇದ್ದಿಲು ಒಲೆಗಳಲ್ಲಿ ಉಪ್ಪಿನ ನೀರು ಕುದಿಯುತ್ತಿದೆ. ಗಾಂಧೀಜಿಯವರ ಸಂದೇಶಕ್ಕಾಗಿ ತಾನು ಆಗ್ರಹ ಪಡಿಸಿದ್ದನ್ನು ನೆನಪಿಸಿಕೊಂಡು ಕಮಲಾದೇವಿಗೆ ಈಗ ಬೇಸರವಾಯಿತು. ತಾನು ಮಹಿಳೆಯರ ಆಂತರಿಕ ಶಕ್ತಿಯನ್ನು ತಿಳಿದುಕೊಂಡಿಲ್ಲ, ಆದರೆ ಬಾಪೂಜಿ ಅದನ್ನು ತಿಳಿದುಕೊಂಡಿದ್ದರು ಎಂಬುದನ್ನು ಅರಿತು ಅವರಿಗೆ ನಾಚಿಕೆಯೆನಿಸಿತು. ಈ ರೀತಿಯ ಅನೇಕ ಸಂದರ್ಭಗಳನ್ನು ಆಮೇಲೆ ತಾನು ಎದುರಿಸಿದ್ದೇನೆ ಎಂಬುದಾಗಿ ಅವರು ಹೇಳಿದ್ದಾರೆ.

ಅಲ್ಲಿಗೆ ಯೂತ್ ಲೀಗಿನ ಸದಸ್ಯರು ಬಂದರು. ಅವರು ಉಪ್ಪು ತಯಾರಾಗುತ್ತಿದ್ದ ಪ್ರದೇಶಕ್ಕೆ ಸುತ್ತುವರಿದರು. ಪೊಲೀಸರು ಬಂದರು. ಆದರೆ ಅವರು ತಮ್ಮ ಕೆಲಸವನ್ನು ನಡೆಸದ ರೀತಿಯಿಂದ ಜನರು ಉಪ್ಪು ತಯಾರಿಸುವವರನ್ನು ಸುತ್ತುವರಿದುಕೊಂಡು ಬಿಟ್ಟರು. ದೊಣ್ಣೆಯನ್ನು ತಿರುಗಿಸುತ್ತಿದ್ದ ಪೊಲೀಸ್ ಪಡೆಯಿಂದ ಏನೂ ಪ್ರಯೋಜನವಾಗಲಿಲ್ಲ! ಮತ್ತಷ್ಟು ಪೊಲೀಸರು ಬಂದರು. ಅವರು ಮನಸ್ಸಿಗೆ ಬಂದ ರೀತಿಯಲ್ಲಿ ಜನರಿಗೆ ಹೊಡೆಯಲಾರಂಭಿಸಿದರು.

ಜನವರ್ತುಲದ ಒಳಗೆ ಉಪ್ಪು ತಯಾರಿಸುತ್ತಾ ಕುಳಿತಿದ್ದ ಕಮಲಾದೇವಿಗೆ ಜನರು ಹೊಡೆತ ತಿಂದು ವಿಲವಿಲನೆ ಒದ್ದಾಡುವುದು, ಮುಲುಗುತ್ತಾ ನೆಲಕ್ಕೆ ಬೀಳುವುದು ಕೇಳಿಸುತ್ತಿತ್ತು. ಪುರುಷರು, ಮಹಿಳೆಯರು, ಮಕ್ಕಳು ಎಲ್ಲರೂ ಲಾಠಿಯೇಟು ತಿನ್ನುತ್ತಾ, ದೊಡ್ಡದಾಗಿ ಧ್ವನಿಯನ್ನು ಕೂಡಾ ಎತ್ತದೆ ಪೊಲೀಸರ ಅತ್ಯಾಚಾರವನ್ನು ಸಹಿಸಿಕೊಂಡು ಇದ್ದದ್ದು ಅವಿಸ್ಮರಣೀಯ ಮಾತ್ರವಲ್ಲ, ಒಂದು ಅಲೌಕಿಕ ಘಟನೆಯಾಗಿ ಕೂಡ ಉಳಿಯಿತು!

ಪೊಲೀಸರು ಸುತ್ತುವರಿದು ನಿಂತವರಿಗೆ ಹೊಡೆದು ಅವರ ವರ್ತುಲವನ್ನು ಭೇದಿಸಿದರು. ಜೋರಾಗಿ ಬೀಸಿದ ಲಾಠಿಯೇಟಿನಿಂದ ಕಮಲಾದೇವಿಯ ಹತ್ತಿರ ಕುಳಿತಿದ್ದ ಹುಡುಗಿಯೊಬ್ಬಳ ತಲೆ ಒಡೆದುಹೋದದ್ದನ್ನು ನೋಡಿ ಕಮಲಾದೇವಿಯ ಕಣ್ಣಿಗೆ ಕತ್ತಲೆ

ಕವಿಯಿತು. ಚೇತರಿಸಿಕೊಳ್ಳುವಷ್ಟರಲ್ಲಿ ಪೊಲೀಸರ ಬೂಟಿನ ಒದೆಗೆ ಅವರ ಬಲಕೈ ಉರಿಯುತ್ತಿದ್ದ ಒಲೆಯ ಮೇಲೆ ಬಿತ್ತು. ಅವರು ಸ್ಮೃತಿ ತಪ್ಪಿದರು.

"..ಕಣ್ಣು ತೆರೆದಾಗ, ಪೊಲೀಸ್ ಸಮವಸ್ತ್ರ ಧರಿಸಿದ ಮುಖ ದೃಷ್ಟಿಗೆ ಬಿತ್ತು. 'ನಿನ್ನನ್ನು ಆಸ್ಪತ್ರೆಗೆ ಕೊಂಡೊಯ್ಯೋಣವೇ? ನನ್ನ ಕಾರು ಸಿದ್ಧವಾಗಿದೆ.' ದಯಾಳು ಕಣ್ಣುಗಳ ಆ ಮುಖ ವಿಚಾರಿಸಿತು. ನಾನು 'ಬೇಡ' ಎನ್ನುವ ರೀತಿಯಿಂದ ತಲೆಯಾಡಿಸಿದೆ. 'ಮಹಾತ್ಮ ಗಾಂಧಿಯ ಅಭಿಪ್ರಾಯದಲ್ಲಿ ನೀವು ನನ್ನನ್ನು ಶತ್ರುವೆಂದು ತಿಳಿದುಕೊಳ್ಳುವ ಹಾಗಿಲ್ಲ, ಅಲ್ಲವೇ?' ಆತ ಹೇಳಿದ. ಆತನಿಗೆ ಗಾಂಧೀಜಿಯ ಈ ತತ್ವಜ್ಞಾನ ಮನಸ್ಸಿಗೆ ಹೊಳೆದದ್ದು ನನಗೆ ವಿಚಿತ್ರವೆನಿಸಿತು" ಎಂದು ಕಮಲಾದೇವಿ ಬರೆದಿದ್ದಾರೆ.

ಕಮಲಾದೇವಿಯವರ ಉಪ್ಪಿನ ಸತ್ಯಾಗ್ರಹದ ಕುರಿತಾದ ಬರಹವು ಒಂದು ಸುಂದರ ಸುದೀರ್ಘ ಪ್ರಬಂಧದ ಹಾಗೆ ಓದಿಸಿಕೊಂಡು ಹೋಗುತ್ತದೆ. ಎಲ್ಲಾ ವರ್ಗದ, ಎಲ್ಲಾ ವಯಸ್ಸಿನ ಜನರು ಏಕ ಉದ್ದೇಶದಿಂದ ಒಟ್ಟುಗೂಡಿ ಮೌನರೂಪದಿಂದ ಬ್ರಿಟಿಷ್ ಸಾಮ್ರಾಜ್ಯಶಾಹಿಗೆ ಕಲಿಸಿದ ಈ ಪಾಠ ಕಮಲಾದೇವಿಯ ಬರಹದಲ್ಲಿ ಉಜ್ವಲ ರೀತಿಯಲ್ಲಿ ಚಿತ್ರಿತವಾಗಿದೆ. ಈ ಸಂದರ್ಭದಲ್ಲಿ ಲಕ್ಷಗಟ್ಟಳೆ ಜನರನ್ನು ಬಂಧಿಸಿ ಜೈಲು ತುಂಬುವುದು ಅಸಂಭವವಾಯಿತು. ಇದಷ್ಟೇ ಅಲ್ಲ ಸಮುದ್ರದ ನೀರನ್ನು ಮನೆಮನೆಗೆ ಕೊಂಡೊಯ್ದು ಉಪ್ಪನ್ನು ತಯಾರಿಸಲಾಯಿತು. ನಾಲ್ಕು ಮಂದಿ ಓಡಾಡುವ ಕಡೆಗಳಲ್ಲಿ ಉಪ್ಪು ತಯಾರಿಸುತ್ತಾ ಜನರು ಕಾಯಿದೆ ಭಂಗ ಮಾಡಿದರು! ಎಷ್ಟು ಜನರನ್ನು ಬಂಧಿಸುವುದು ಸಾಧ್ಯವಿದೆ? ಮೂವತ್ತು ದಿನಗಳಲ್ಲಿ ಅವರ ಸಂಖ್ಯೆ ಲಕ್ಷಗಟ್ಟಳೆ ಬೆಳೆಯುತ್ತಿತ್ತು.

ಹೀಗೆ ತಯಾರಿಸಿದ ಉಪ್ಪನ್ನು ಚಿಕ್ಕಚಿಕ್ಕ ಪೊಟ್ಟಣಗಳಲ್ಲಿ ತುಂಬಿಸಿ ಮಾರುವ ವಿಚಾರ ಕಮಲಾದೇವಿಗೆ ಇತ್ತು. ಉಪ್ಪು ಮಾರಾಟಕ್ಕೆಂದು ಅವರು ಮುಂಬೈಯ ಬೇರೆ ಬೇರೆ ಭಾಗಗಳಿಗೆ ಹೋದರು. ಮುಂಬೈ ಷೇರು ಮಾರುಕಟ್ಟೆಯ ಬಂಧುಗಳು 'ಮಹಾತ್ಮಾಗಾಂಧಿಗೆ ಜೈ!' ಎಂದು ಹೇಳುತ್ತ ಕಮಲಾದೇವಿಯನ್ನು ಸ್ವಾಗತಿಸಿದರು. ಅಲ್ಲಿ ಸತ್ಯಾಗ್ರಹದ ಉಪ್ಪನ್ನು ಖರೀದಿಸಲು ಸ್ಪರ್ಧೆ ನಡೆಯಿತು. ಹರಾಜಿಗೆ ಹಾಕುವ ಪ್ರಸಂಗ ಬಂತು! ಮೊದಲ ಪೊಟ್ಟಣಕ್ಕೆ 501 ರೂಪಾಯಿ ದೊರೆಯಿತು. ಅರ್ಧ ತಾಸಿನೊಳಗೆ ಕಾಂಗ್ರೆಸ್ ಫಂಡಿಗೆ ನಾಲ್ಕು ಸಾವಿರ ರೂಪಾಯಿ ಪ್ರಾಪ್ತವಾಯಿತು ! ಕಮಲಾದೇವಿಯವರು ಮರುದಿನವೂ ಉಪ್ಪು ತಯಾರಿಸುವ ಮತ್ತು ಮಾರುವ ಕೆಲಸವನ್ನು ನಿಲ್ಲಿಸದೆ ಮುಂದುವರಿಸಿದರು. 'ಗಾಂಧಿ ಉಪ್ಪು !' 'ಸತ್ಯಾಗ್ರಹದ ಉಪ್ಪು!' 'ಬೆಲೆ ಆರು ತಿಂಗಳ ಜೈಲುವಾಸ !' ಎಂಬ ಪ್ರಚಾರದಿಂದ ಉಪ್ಪು ಖಾಲಿಯಾಯಿತು. 75000 ರೂಪಾಯಿ ಸಂಗ್ರಹವಾಯಿತು. ಅದರಲ್ಲಿ 50000 ರೂಪಾಯಿಯನ್ನು ಕಮಲಾದೇವಿ ಒಂದೇ ಕಡೆ ಸಂಗ್ರಹಿಸಿದ್ದರು. ಮುಂಬೈ ಉಚ್ಚನ್ಯಾಯಾಲಯದ ಎದುರೇ ಉಪ್ಪಿನ ಪೊಟ್ಟಣದ ಮಾರಾಟ ನಡೆಸಿ ಅವರು ವಿಕ್ರಮ ಸಾಧಿಸಿದರು. ಮ್ಯಾಜಿಸ್ಟ್ರೇಟರಿಗೆ ಕೂಡಾ ಉಪ್ಪು ಮಾರುವ ಪ್ರಯತ್ನವನ್ನು ಅವರು ನಡೆಸಿದ್ದರು ಎಂದು ಹೇಳುತ್ತಾರೆ !

ಸರಕಾರ ಗಾಂಧೀಜಿಯವರನ್ನು ದಸ್ತಗಿರಿ ಮಾಡಿತು. ಆದರೆ ಸತ್ಯಾಗ್ರಹ ದೇಶವಿಡೀ ಪ್ರಸಾರಗೊಳ್ಳುತ್ತಿತ್ತು. ಗಾಂಧೀಜಿಯ ಸ್ಥಾನವನ್ನು ಸರೋಜಿನಿ ನಾಯ್ಡು ತುಂಬಿದರು. ಪೊಲೀಸರು ಕಾರ್ಯಕರ್ತರಿಗೆ ಹೊಡೆಯಲು ಪ್ರಾರಂಭಿಸಿದರು. ಉಪ್ಪು ತಯಾರಾಗುತ್ತಿದ್ದ ಪ್ರದೇಶದ ಸುತ್ತಲೂ ಧರಣಿ ಕುಳಿತಿದ್ದ ಜನರು ಸುಡು ಬಿಸಿಲಿಗೆ ಬಾಯಾರಿಕೆಯಾಗಿ ಒದ್ದಾಡುತ್ತಿದ್ದರು. ಅವರಲ್ಲಿ ಸಣ್ಣವರು ದೊಡ್ಡವರು ಎಂದು ಎಲ್ಲಾ ವಯಸ್ಸಿನವರೂ ಇದ್ದರು. ಅವರಿಗೆ ತೊಟ್ಟು ನೀರು ಸಿಗದ ಹಾಗೆ ಪೊಲೀಸರು ನೋಡಿಕೊಂಡರು. ಆದರೆ ಅವರ

ಮುಖಂಡರಾದ ಸರೋಜಿನಿ ದೇವಿಯವರು ಸ್ವತಃ ಪ್ರಸನ್ನ ಭಾವದಿಂದ ನಗುತ್ತಾ, ನಗಿಸುತ್ತಾ ಕುಳಿತಿದ್ದರು. ಕೊನೆಗೆ ಎಲ್ಲರನ್ನೂ ಬಂಧಿಸಲಾಯಿತು. ಅವರ ಸ್ಥಾನದಲ್ಲಿ ಮತ್ತೊಂದು ಅವರಿಗಿಂತ ದೊಡ್ಡ ತಂಡವೊಂದು ಬಂದು ಕುಳಿತಿತು! ಉಪ್ಪು ತಯಾರಿಕೆ ಅಖಂಡವಾಗಿ ನಡೆಯುವಂತೆ ನೋಡಿಕೊಳ್ಳಲಾಯಿತು.

ಮುಂಬೈಯಲ್ಲಿ ಅಕ್ರಮ ಉಪ್ಪು ತಯಾರಿಕೆಯ ಯೋಜನೆಯನ್ನು ಕಮಲಾದೇವಿಯವರು ಮುಂದುವರಿಸಿದರು. ಮೇ 17ರಂದು ಅವರನ್ನು ಬಂಧಿಸಲಾಯಿತು. ಉಪ್ಪು ತಯಾರಿಸುವ ಮತ್ತು ಸತ್ಯಾಗ್ರಹವನ್ನು ಮುಂದುವರಿಸುವ ಸಂದೇಶವನ್ನು ಕಾರ್ಯಕರ್ತರಿಗೆ ನೀಡಿ ಅವರು ಬಂಧಿಯಾದರು. ಅವರ ಏಳುವರ್ಷದ ಮಗ ರಾಮು ಧ್ವಜ ಹಿಡಿದು ಅಮ್ಮನ ಪರವಾಗಿ ನಿಂತಿದ್ದನು. ತಾಯಿ ಮತ್ತು ಮಗನ ಭಾವಚಿತ್ರ ಎಲ್ಲಾ ಪತ್ರಿಕೆಗಳಲ್ಲಿ ಪ್ರಕಟವಾಯಿತು. ತಾಯಿಯನ್ನು ಬಂಧಿಸಿದ ಬಳಿಕ ಕಾರ್ಯಕರ್ತರು ಕೆಲಸಮಯಕ್ಕೆ ಮಗನನ್ನು ಸಾಂಕೇತಿಕವಾಗಿ ಮುಖಂಡನೆಂದು ಘೋಷಿಸಿದರು.

ಕಾಯಿದೆ ಭಂಗ ಮಾಡಿದ ಕಾರಣಕ್ಕಾಗಿ ಕಮಲಾದೇವಿಗೆ ಆರು ತಿಂಗಳ ಕಾರಾಗೃಹ ವಾಸ ಮತ್ತು 150 ರೂಪಾಯಿ ದಂಡದ ಶಿಕ್ಷೆಯನ್ನು ಘೋಷಿಸಲಾಯಿತು. ಅವರ ಮೇಲೆ ಹೆಚ್ಚು ಜನರನ್ನು ಕಾಯಿದೆ ಉಲ್ಲಂಘನಾ ಕಾರ್ಯದಲ್ಲಿ ತೊಡಗಿಸಿದ ಆಪಾದನೆಯನ್ನು ಮ್ಯಾಜಿಸ್ಟ್ರೇಟರು ಹೊರೆಸಿದ್ದರು. ಉಪ್ಪು ತಯಾರಿಸಿದ ಕಾರಣಕ್ಕಾಗಿ ಜೈಲು ಸೇರಿಸಿದ ಪ್ರಥಮ ಮಹಿಳೆ ಕಮಲಾದೇವಿಯಾಗಿದ್ದರು.

ದೇಶವಿಡೀ ವ್ಯಾಪಿಸಿದ ಉಪ್ಪು ಚಳವಳಿಯಿಂದ ಬ್ರಿಟಿಷ್ ಸರಕಾರಕ್ಕೆ ಸಂಕಟ ಪ್ರಾಪ್ತವಾಯಿತು. ಉಪ್ಪಿನ ಮೇಲೆ ವಿಧಿಸಿದ ತೆರಿಗೆಯನ್ನು ಅವರು ಹಿಂದಕ್ಕೆ ತೆಗೆದು ಕೊಂಡರು. ಆದರೆ ಇದರಿಂದ ಉಂಟಾದ ಜನಜಾಗೃತಿಯ ಪ್ರಮಾಣ ಇಷ್ಟೇ ಎಂದು ಹೇಳುವುದು ಸಾಧ್ಯವಿಲ್ಲ! ಮುಖಂಡರೆಲ್ಲಾ ಜೈಲು ಸೇರಿದರು. ಆದರೆ ಹಿಂದೆ ಉಳಿದ ಸ್ವಯಂಸೇವಕರು ಪ್ರಚಾರ ನೀಡದೆ ಚಳವಳಿಯನ್ನು ಜೀವಂತವಾಗಿ ಉಳಿಸಿದರು.

ಅಸಹಕಾರ ಚಳವಳಿ ಚಲಾವಣೆಯಲ್ಲಿದ್ದ ದೇಶದಲ್ಲಿ ಈ ಉಪ್ಪಿನ ಸತ್ಯಾಗ್ರಹಕ್ಕೆ ಉತ್ತಮ ಪ್ರೋತ್ಸಾಹ ಸಿಕ್ಕಿತು!

## ಅಧ್ಯಾಯ ೬

# ಕಾರಾಗೃಹದ ಬದುಕು : ಅಪೂರ್ವ ತ್ಯಾಗಿ

ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗಿಯಾಗಿ ದೇಶಕ್ಕಾಗಿ ಜೀವತೆತ್ತ ಹುತಾತ್ಮರು ನಮ್ಮ ಮುಂದೆ ಇದ್ದಾರೆ. ಮತ್ತೆ ಮತ್ತೆ ಕಾರಾಗೃಹಕ್ಕೆ ತೆರಳಿ ಭವಿಷ್ಯದ ಚಿಂತನೆ ನಡೆಸದೆ ಕಷ್ಟ ಅನುಭವಿಸಿದ ಸಾವಿರಾರು ಜನರು ದೇಶದ ಎಲ್ಲೆಡೆಗಳಲ್ಲಿ ಇದ್ದರು. ಆದರೆ ಸ್ವಲ್ಪ ಕಾಲ ಮಾತ್ರ ಚಳವಳಿಯಲ್ಲಿ ಇದ್ದರೂ ಅದರಲ್ಲಿಯೇ ಇದ್ದಂತೆ ತೋರಿಸಿಕೊಳ್ಳುತ್ತಾ, 'ತ್ಯಾಗಿ' 'ಸ್ವಾತಂತ್ರ್ಯಯೋಧ' ಎಂದು ಯಾವುದಾದರೂ ಪ್ರಮಾಣಪತ್ರವನ್ನು ತಂದು ನಿವೃತ್ತಿ ವೇತನ, ನಿವೇಶನ, ಮಕ್ಕಳಿಗೆ, ಮೊಮ್ಮಕ್ಕಳಿಗೆ ಇಂಜಿನಿಯರಿಂಗ್, ಮೆಡಿಕಲ್ ಕಾಲೇಜಿನಲ್ಲಿ ಸೀಟು, ಉದ್ಯೋಗ ಗಿಟ್ಟಿಸಿದವರು ದೇಶದಾದ್ಯಂತ ನೂರು, ಸಾವಿರ ಸಂಖ್ಯೆಯಲ್ಲಿ ಕಾಣಸಿಗುತ್ತಾರೆ! ಅರವತ್ತರ ನಂತರದ ಎರಡು ದಶಕಗಳಲ್ಲಿ ಈ ರೀತಿಯ ಜನರ ಸಂಖ್ಯೆ ಹೆಚ್ಚುತ್ತಾ ಹೋಯಿತು. ಕರ್ನಾಟಕದಲ್ಲಿ ಇಂದು ಮೈಸೂರು ಸಂಸ್ಥಾನದ ತ್ಯಾಗಿ ಜನರ ಸಂಖ್ಯೆ ಮತ್ತು ಹೆಸರು ನೋಡಿದರೆ, ಈ ಸತ್ಯಾಂಶ ತಿಳಿಯುತ್ತದೆ! ಕಮಲಾದೇವಿ ಸ್ವಾತಂತ್ರ್ಯ ಚಳವಳಿಯ ಪ್ರಥಮ ಶ್ರೇಣಿಯ ಯೋಧರಾಗಿದ್ದವರು. ಇಷ್ಟು ಮಾತ್ರವಲ್ಲ, ನಾಲ್ಕು ಬಾರಿ ಜೈಲಿಗೆ ಹೋದವರು. ಅವರ ಜೈಲು ವಾಸದ ಅವಧಿ ಕೂಡಾ ದೀರ್ಘ ಮತ್ತು ಶ್ರಮದಾಯಕವಾಗಿತ್ತು. ಈ ಸಂದರ್ಭದಲ್ಲಿ ಅವರ ವೈಯಕ್ತಿಕ ಬದುಕು ಹಾಳಾಯಿತು. ಇದ್ದ ಒಬ್ಬನೇ ಮಗನನ್ನು ಬಿಟ್ಟು ಅವರು ಜೈಲಿಗೆ ಹೋಗಬೇಕಾಯಿತು. ಸ್ವಾತಂತ್ರ್ಯ ಯೋಧರಿಗೆ ತಾನಾಗಿ ಬಂದ ಅಧಿಕಾರ ಮತ್ತು ಪ್ರತಿಷ್ಠೆಯ ಹುದ್ದೆಯನ್ನು ಅವರು ಬೇಡವೆಂದು ಬಿಟ್ಟದ್ದರಿಂದ ನಮ್ಮ ಸ್ವಾತಂತ್ರ್ಯ ಚಳವಳಿಯ ಪೂರ್ವೋತ್ತರ ಸ್ವರೂಪ ನಮಗೆ ತಿಳಿಯುತ್ತದೆ.

ಕಮಲಾದೇವಿಯವರನ್ನು ನಾಲ್ಕು ಬಾರಿ ಕಾರಾಗೃಹಕ್ಕೆ ಕಳುಹಿಸಲಾಗಿದೆ. ಉಪ್ಪಿನ ಸತ್ಯಾಗ್ರಹದ (1930–31) ನಂತರ, ಅಸಹಕಾರ ಚಳವಳಿಯನ್ನು ಮುಂದುವರಿಸಿದ ಕಾರಣಕ್ಕಾಗಿ (1932–33), ಸಣ್ಣ ಅಂತರದಲ್ಲಿ ಮತ್ತೊಮ್ಮೆ ಬಂಧನ(1933–34), ಆಮೇಲೆ ಕ್ವಿಟ್ ಇಂಡಿಯಾ ಚಳವಳಿಯ ಸಂದರ್ಭದಲ್ಲಿ (1942–44). ಈ ನಾಲ್ಕು ಅವಧಿಯ ಜೈಲುವಾಸದ ಅವರ ಅನುಭವ ಬೇರೆ ಬೇರೆ ರೀತಿಯದ್ದಾಗಿತ್ತು. ಆಗಿನ ಕಾರಾಗೃಹವೆಂದರೆ ಕೊಲೆ, ದರೋಡೆ, ಹಾಗೂ ದೊಡ್ಡ ಅಪರಾಧವೆಸಗಿದ ಜನರನ್ನು ಒಟ್ಟುಗೂಡಿಸಿ ಹಾಕುತ್ತಿದ್ದ ಕೊಳಕು ಕೊಟ್ಟಿಗೆಯಾಗಿತ್ತು. ಸಂಡಾಸು, ಬಚ್ಚಲುಮನೆಯ ಸೌಕರ್ಯ ಕೂಡಾ ಸರಿಯಾಗಿ ಇರುತ್ತಿರಲಿಲ್ಲ. ಅನಾರೋಗ್ಯಕರ ವಾತಾವರಣ. ಹೇಳಿ ಮುಗಿಸುವಂತಿಲ್ಲ. ಜೈಲಿನ ಸಮವಸ್ತ್ರ, ಊಟ ತಿಂಡಿ ಈ ಕುರಿತು ಬರೆದಷ್ಟೂ ಕಡಿಮೆಯೇ!

ಮೊದಲ ಬಾರಿ ಬಂಧಿಸಿ ಜೈಲಿಗೆ ಹಾಕಿದಾಗ ಕಮಲಾದೇವಿಯವರನ್ನು ಸಿ ವರ್ಗದ ಕೈದಿ ಎಂದು ಕ್ರಿಮಿನಲ್ ಮಹಿಳಾ ಕೈದಿಗಳೊಂದಿಗೆ ಸೇರಿಸಲಾಗಿತ್ತು. ಎರಡನೇ ಬಾರಿ ಬಿ ದರ್ಜೆಯ ಗೌರವ ಸಿಕ್ಕಿತು! ಮೂರನೇ ಬಾರಿ ಏಕಾಂಗಿ ಬಂಧಿವಾಸ. ವೆಲ್ಲೂರಿನ ಮಹಿಳಾ ಜೈಲಿನಲ್ಲಿ ಒಂದು ವರ್ಷಗಳ ಕಾಲ ಇರಬೇಕಾಯಿತು. ನಾಲ್ಕನೇ ಬಾರಿ ಕೂಡಾ ಅದೇ ಜೈಲಿಗೆ ಹಾಕಿದರು. ಆದರೆ ಈ ಅವಧಿಯಲ್ಲಿ ಮಹಿಳಾ ಕೈದಿಗಳ ಸಂಖ್ಯೆ ಹೆಚ್ಚಾಗಿದ್ದರಿಂದ, ಏಕಾಂಗಿ ಬಂಧಿಯ ಖಿನ್ನತೆ ಮತ್ತು ಒಂಟಿ ಬದುಕು ತಪ್ಪಿತು.

ಉಪ್ಪಿನ ಸತ್ಯಾಗ್ರಹದಲ್ಲಿ ಬಂಧಿಯಾದ ಪ್ರಪ್ರಥಮ ಮಹಿಳೆ ಕಮಲಾದೇವಿ. 1930, ಏಪ್ರಿಲ್ 17ರಂದು ಸಂಜೆ ರಸ್ತೆಯಲ್ಲಿ ಪಿಕೆಟಿಂಗ್ ಮಾಡುವಾಗ ಅವರ ಬಂಧನವಾಯಿತು. ಇಲ್ಲಿಂದ ಅವರನ್ನು ಆರ್ಥರ್ ರಸ್ತೆಯಲ್ಲಿದ್ದ ಮಹಿಳಾ ಕಾರಾಗೃಹಕ್ಕೆ ಕೊಂಡೊಯ್ಯಲಾಯಿತು. ಸಂಜೆ ಹೊತ್ತು. ಹೊರಗೆ ಬೆಳಕಿದ್ದರೂ, ಕಿಟಕಿ ಇಲ್ಲದ್ದರಿಂದ ಜೈಲಿನೊಳಗೆ ಅಂಧಕಾರವಿತ್ತು. ದುರ್ಗಂಧ ವ್ಯಾಪಕವಾಗಿ ಹರಡಿಕೊಂಡಿತ್ತು. ದೃಷ್ಟಿ ನಿಚ್ಚಳವಾದ ನಂತರ ಅಲ್ಲಲ್ಲಿ ಹೆಂಗಸರು ಬೋರಲು ಮಲಗಿದ್ದು ಕಮಲಾದೇವಿಯ ಕಣ್ಣಿಗೆ ಕಾಣಿಸಿತು! ಅಲ್ಲಿ ಎಲ್ಲಾ ವಯಸ್ಸಿನ ಹೆಂಗಸರಿದ್ದರು. ಬೇರೆ ಬೇರೆ ಉಡುಪು ತೊಟ್ಟವರು. ಕೆಲವರದು ರಂಗುರಂಗಾದ ಹೊಳೆವ ಉಡುಪು! ಉಳಿದವರದು ಚಿಂದಿ. ಕಮಲಾದೇವಿಯ ಪ್ರವೇಶ ಅವರಲ್ಲಿ ಯಾವ ಬದಲಾವಣೆಯನ್ನು ಕೂಡಾ ತರಲಿಲ್ಲ! ದಿನವಿಡೀ ಹೆಂಗಸರನ್ನು ಕರೆತರುವುದು, ಬೀಗದ ಬಾಗಿಲನ್ನು ತೆರೆಯುವುದು, ಒಳಗೆ ಹಾಕುವುದು, ಮತ್ತೆ ದೊಡ್ಡ ದೊಡ್ಡ ಬೀಗಗಳನ್ನು ಜಡಿಯುವುದು, ನಡೆದೇ ಇತ್ತು. ಅವರಿಗೆ ಅದು ರೂಢಿಯಾಗಿಹೋಗಿತ್ತು. ಕಮಲಾದೇವಿಯವರು ಅಲ್ಲಿದ್ದ ಟ್ರಂಕಿನ ಮೇಲೆ ಕುಳಿತು ರಾತ್ರಿ ಕಳೆದರು. ಬೆರ್‍ಯಾಕಿನ ಮೇಲೆ ಖಾಯಂ ಬಿಡಾರ ಹೂಡಿದ್ದ ಬಾವಲಿಯ ಹಿಂಡು ರೆಕ್ಕೆ ಬಡಿಯುತ್ತಾ ಹಾರತೊಡಗಿದಾಗ ದುರ್ಗಂಧ ಇನ್ನೂ ಹೆಚ್ಚಾಯಿತು!

ಮುಂಜಾನೆ ಸೂರ್ಯೋದಯದ ನಂತರ ಬೀಗ ತೆಗೆದು ಕೈದಿಗಳಿಗೆ ಹೊರಗೆ ಬರುವಂತೆ ತಿಳಿಸಲಾಯಿತು. ಅವರನ್ನು ಬೆಳಿಗ್ಗೆ ಮತ್ತು ಮಧ್ಯಾಹ್ನ ನಿತ್ಯಕರ್ಮಗಳಿಗೆ ಹೊರಗೆ ಬಿಡಲಾಗುತ್ತಿತ್ತು. ಕಮಲಾದೇವಿಯವರನ್ನು ರಾಜಕೀಯ ಕೈದಿಯಾಗಿ ಇಲ್ಲಿ ಕರೆತಂದದ್ದು ಜೈಲರ್ ಮತ್ತು ಅಲ್ಲಿಯ ಪೊಲೀಸರಿಗೆ ಕೂಡಾ ಕೆಟ್ಟದೆನಿಸಿತು! ಮೂರು ದಿನವಿದ್ದು ಬಾಗಿಲಿಲ್ಲದ ಬಚ್ಚಲು, ಸಂಡಾಸಿಗೆ ಹೋಗಿ ಪ್ರಾತಃವಿಧಿ ಇತ್ಯಾದಿ ಮುಗಿಸಿದ ನಂತರ ಅವರನ್ನು ನ್ಯಾಯಾಲಯದಲ್ಲಿ ಹಾಜರುಪಡಿಸಲಾಯಿತು. ಅಲ್ಲಿ ಅವರ ಅಪರಾಧ ಸಾಬೀತಾಯಿತು! 9 ತಿಂಗಳು, 15 ದಿನಗಳ ಜೈಲು ಶಿಕ್ಷೆಯನ್ನು ಘೋಷಿಸಲಾಯಿತು. ಕಮಲಾದೇವಿಯವರನ್ನು ಬಂಧಿಸಿದ್ದು ರಸ್ತೆಯಲ್ಲಿ. ಅವರು ಸ್ಥಳೀಯ ವಿಳಾಸವನ್ನು ನೀಡಿರಲಿಲ್ಲ. ಹೀಗಾಗಿ ಜೈಲ್ ಸಿಬ್ಬಂದಿ ಅವರೊಬ್ಬ ದಿಕ್ಕುದೆಸೆಯಿಲ್ಲದ ಕ್ರಿಮಿನಲ್ ಕೈದಿ ಎಂಬ ನಿರ್ಧಾರಕ್ಕೆ ಬಂದಿದ್ದರು. ತನ್ನಿಂದಾಗಿ ತೊಂದರೆಯಾಗಬಾರದೆಂದು ಮನೆಯವರ, ಪರಿಚಯದವರ ವಿಳಾಸವನ್ನು ಕಮಲಾದೇವಿ ನೀಡಿರಲಿಲ್ಲ. ನಿಜಸಂಗತಿಯನ್ನು ತಿಳಿದವರು ಅಲ್ಲಿ ಯಾರೂ ಇರಲಿಲ್ಲ.

ಆರ್ಥರ್ ರಸ್ತೆ ಕಾರಾಗೃಹದ ಎಡದಿಕ್ಕಿನಲ್ಲಿ ಗಿರಣಿ ಕಾರ್ಮಿಕರ ಜೋಪಡಿಗಳಿದ್ದವು. ಅವರು ಬಳಸಿದ ಕೊಳಕು ನೀರನ್ನು ಹೊತ್ತುಕೊಂಡು ಹೋಗುತ್ತಿದ್ದ ಪೈಪಲೈನ್ ಹಾಳಾಗಿ ಅಲ್ಲಿ ದುರ್ಗಂಧ ಪಸರಿಸಿಕೊಂಡಿತ್ತು. ಅದೇ ದಾರಿಯಲ್ಲಿ ಮಹಾನಗರದಲ್ಲಿ ಸತ್ತುಬಿದ್ದ ಪ್ರಾಣಿಗಳ ಮೃತದೇಹಗಳನ್ನು ಗಾಡಿಯಲ್ಲಿ ಹಾಕಿ ತೆಗೆದುಕೊಂಡು ಹೋಗುತ್ತಿದ್ದರು. ಮುಂಭಾಗದಲ್ಲಿ ಒಂದು ಆಸ್ಪತ್ರೆ. ಅಲ್ಲಿ ಮೈಲಿಯಾಗಿದ್ದ ರೋಗಿಗಳು ಇದ್ದರು. ಸಾಯುವವರ ಸಂಖ್ಯೆ ಹೆಚ್ಚು ಇದ್ದುದರಿಂದ ರಾತ್ರಿ, ಅಪರಾತ್ರಿ ಅಳುವ ಸದ್ದು ಜೋರಾಗಿ ಕೇಳಿಬರುತ್ತಿತ್ತು.

ಕೈದಿಗಳಿಗೆ ಜೈಲಿನ ಸಮವಸ್ತ್ರ ಕಡ್ಡಾಯ. ಆದರೆ ಒಳ ಉಡುಪು ಧರಿಸುವಂತಿಲ್ಲ. ಮೊಕದ್ದಮೆ ನಡೆಯುತ್ತಿದ್ದವರಿಗೆ ಮಾತ್ರ ಸ್ವಂತ ಉಡುಪನ್ನು ಧರಿಸುವುದಕ್ಕೆ ಅನುಮತಿ ಇತ್ತು. ಶಿಕ್ಷೆಯಾದ ಕೂಡಲೇ ಮತ್ತೆ ಜೈಲಿನ ಉಡುಪು. ಈ ಉಡುಪನ್ನು ಧರಿಸಲು ಕಮಲಾದೇವಿ ವಿರೋಧ ವ್ಯಕ್ತಪಡಿಸಿದರು (ಅಲ್ಲಿ ನಾನಾ ವಿಧದ ರೋಗಿಗಳಿದ್ದರು. ಸ್ವಚ್ಛತೆಯ ಕುರುಹು ಕೂಡಾ ಇರಲಿಲ್ಲ). ಅವರು ಅರ್ಜಿ ನೀಡಿದರು. ಕೆಲವೇ ದಿನಗಳಲ್ಲಿ ಅವರನ್ನು ಬೇರೆ ಕಟ್ಟಡಕ್ಕೆ ಸ್ಥಳಾಂತರಿಸಲಾಯಿತು. ಅಲ್ಲಿ ಅವರು ಮೀರಾಬೆನ್‌ರನ್ನು ಭೇಟಿಯಾದರು. ಮೀರಾಬೆನ್ ಬ್ರಿಟಿಷ್ ಮಹಿಳೆ. ಮೆಡಲಿನ್

ಸ್ಲೇಡ್ ಅವರ ಪೂರ್ವಾಶ್ರಮದ ಹೆಸರು. ಗಾಂಧೀಜಿಯ ಆಪ್ತವಲಯದ ಸದಸ್ಯರಾಗಿದ್ದ ಅವರು ಕೂಡಾ ಚಳವಳಿಯಲ್ಲಿ ಭಾಗಿಯಾಗಿ ಬಂಧಿತರಾಗಿದ್ದರು. ಗಾಂಧೀಜಿ ಅವರಿಗೆ ಮೀರಾ ಎಂಬ ಹೆಸರನ್ನು ನೀಡಿದ್ದರಿಂದ ಎಲ್ಲರಿಗೂ ಅವರು ಮೀರಾಬೆನ್ ಆಗಿದ್ದರು. ಕಮಲಾದೇವಿಯವರು ತಮ್ಮ ಆತ್ಮಚರಿತ್ರೆಯಲ್ಲಿ ತನ್ನ ಜೈಲಿನ ಕಟು ಅನುಭವವನ್ನು ಬರೆದಿಲ್ಲ. ಆದರೆ ಮೀರಾಬೆನ್ ತಮ್ಮ ಆತ್ಮವೃತ್ತಾಂತ ದಿ ಸ್ಪಿರಿಟ್ಸ್ ಪಿಲ್‌ಗ್ರಿಮೇಜ್‌ನಲ್ಲಿ ಕಮಲಾದೇವಿ ಜೈಲಿಗೆ ಬಂದು ಕೆಲವು ದಿನಗಳನ್ನು ಕಳೆದುದರ ಕುರಿತು ಸುಂದರವಾದ ವರದಿ ನೀಡಿದ್ದಾರೆ.

*...ಒಂದು ದಿನ ಸೋಶಿಯಲಿಸ್ಟ್ ಮುಖಂಡರಾದ ಕಮಲಾದೇವಿ ಚಟ್ಟೋಪಾಧ್ಯಾಯ ಅವರನ್ನು ಜೈಲಿಗೆ ಕರೆತರಲಾಯಿತು. ಅವರು ಕಲಾತ್ಮಕ ಸೌಂದರ್ಯದ ಪ್ರತಿರೂಪವಾಗಿದ್ದರು. ರಾತ್ರಿ ಅವರನ್ನು 'ಸಿ' ದರ್ಜೆಯ ಬೆರ್‍ಯಾಕ್‌ನಲ್ಲಿ ಹಾಕಲಾಯಿತು. ನಂತರ ನಾವಿಬ್ಬರೂ ಕೂಡಿ ಜೈಲುವಾಸಿ ಮಹಿಳೆಯರ ಅನಾರೋಗ್ಯಕ್ಕೆ ಕಾರಣವಾಗಿದ್ದ ಆಡಳಿತದ ವಿರುದ್ಧ ನಿವೇದನಾ ಪತ್ರವೊಂದನ್ನು ತಯಾರಿಸಿದೆವು. ಅದನ್ನು ಹಿಡಿದು ಸೂಪರಿಂಟೆಂಡೆಂಟ್ ಅವರ ಬಳಿ ಹೋದರೆ, ಅವರು 'ಸುಮ್ಮನಿರಿ!' ಎಂದು ಹೇಳಿ ನಮ್ಮನ್ನು ವಾಪಸು ಕಳುಹಿಸಿದರು. ನಾವು ಸುಮ್ಮನೆ ಕುಳಿತುಕೊಳ್ಳಲಿಲ್ಲ. ಕೆಲವೇ ದಿನಗಳಲ್ಲಿ ಕಮಲಾದೇವಿಯನ್ನು ಅಲ್ಲಿಯ ಬೇರೆ ಬೆರ್‍ಯಾಕಿಗೆ ಹಾಕಿದರು. ಅದು 'ಬಿ' ದರ್ಜೆ ಎಂದು ಕರೆಯಿಸಿಕೊಳ್ಳುತ್ತಿತ್ತು! ಎಲ್ಲಾ ಬೆರ್‍ಯಾಕಿಗೂ ಅಂಗಳ ಒಂದೇ ಇದ್ದುದರಿಂದ ಕಮಲಾದೇವಿ ಎಲ್ಲಾ ಮಹಿಳಾ ಕೈದಿಗಳನ್ನು ಭೇಟಿಯಾಗುತ್ತಿದ್ದರು.*

*ಒಂದು ದಿನ ಕಮಲಾದೇವಿಯವರು ಕಾಂಪೌಂಡಿನ ಗಿಡದಲ್ಲಿ ಅರಳಿದ್ದ ಕೆಂಪು ಹೂವನ್ನು ಕಿತ್ತು ತನ್ನ ಅಚ್ಚ ಕಪ್ಪು ಕೂದಲಲ್ಲಿ ಮುಡಿದುಕೊಂಡರು. ಸಂಜೆ ಮೆಟ್ರನ್ ಬಂದಾಗ ಅದನ್ನು ನೋಡಿದರು. ಹೂ ಕಿತ್ತು ಮುಡಿಯುವ ಹಾಗಿಲ್ಲ! ಎಂದು ತಾಕೀತು ಮಾಡಿದರು. ಮರುದಿನ ನಿಮ್ಮ ಒಗೆದ ಬಟ್ಟೆಯನ್ನು ಹೊರಗೆ ಒಣಗಿಸುವ ಹಾಗಿಲ್ಲ–ಕಿಟಕಿ ಬಳಿಯಂತೂ ಕಡ್ಡಾಯವಾಗಿ ಹಾಕುವಂತಿಲ್ಲ ಎಂದು ಆಜ್ಞೆ ಹೊರಡಿಸಿದರು. ಸ್ವಚ್ಛತೆಗಾಗಿ ಸ್ನಾನ ಮಾಡಬೇಕು, ಬಟ್ಟೆ ಒಗೆಯಬೇಕು, ಒಣಗಿಸುವುದು ಎಲ್ಲಿ? ನಾವು ಅವರನ್ನು ವಿಚಾರಿಸಿದೆವು. 'ಅಲ್ಲಿ ಮೂಲೆಯಲ್ಲಿ ಒಣಗಿಸಬಹುದು. ಈ ಬೆರ್‍ಯಾಕ್ ಮೇಲೆ ಸ್ಪಷ್ಟವಾಗಿ ಕಾಣುವ ಹಾಗಿರಬೇಕು! ಎದುರು ಇರುವ ಫ್ಲಾಟ್ ಜೈಲು ಅಧಿಕಾರಿಯದು. ಆ ಮಹಿಳೆ ನಿರಂತರವಾಗಿ ನಿಮ್ಮ ಮೇಲೆ ದೃಷ್ಟಿ ಇಡಬೇಕಾಗಿದೆ!' ಎಂದರು.*

ಇದು ರಾಜಕೀಯ ಕೈದಿಗಳ ಅವಸ್ಥೆ!

ಕಮಲಾದೇವಿಯವರು ಕಿಟಕಿ ಪಹರೆಯವರಿಗೆ ಕಾಣದಂತೆ ಕೆಲವು ವ್ಯಾಯಾಮ ಮತ್ತು ಸ್ಕಿಪ್ಪಿಂಗ್‌ನ್ನು ಪ್ರಾರಂಭಿಸಿದರು. ಎಲ್ಲರೂ ಸೇರಿ ಹಾಡು ಹೇಳುವುದು, ಪ್ರಾರ್ಥನೆ ಮಾಡುವುದನ್ನು ಶುರು ಮಾಡಿದರು. ಅದಕ್ಕೂ ಆಕ್ಷೇಪ ಎತ್ತಲಾಯಿತು. ಆದರೆ ಕಮಲಾದೇವಿ ಅದನ್ನು ನಿಲ್ಲಿಸಲಿಲ್ಲ. ಸಣ್ಣಧ್ವನಿಯಿಂದ ಹೇಳತೊಡಗಿದರು.

ಜೈಲಿನ ಆಹಾರ ಮತ್ತು ನೀರು ಬಹಳ ಕೆಟ್ಟದ್ದಾಗಿ ಇರುತ್ತಿತ್ತು. ಕಮಲಾದೇವಿಗೆ ತೀವ್ರ ಸ್ವರೂಪದ ಕಾಮಾಲೆ (ಜಾಂಡಿಸ್) ಬಂತು. ಜೈಲಿನಲ್ಲಿ ಯಾವುದೇ ವೈದ್ಯಕೀಯ ಚಿಕಿತ್ಸೆ ಇರಲಿಲ್ಲ. ಅಲ್ಲಿದ್ದ ಪ್ರಭಾವಿ ರಾಜಕಾರಣಿಯೊಬ್ಬರು ಅವರ ಸ್ಥಿತಿಯನ್ನು ನೋಡಿ ಚಿಕಿತ್ಸೆಯ ವ್ಯವಸ್ಥೆ ಮಾಡಿದರು. ಗುಣಮುಖರಾದ ನಂತರ ಅವರನ್ನು ಯರವಾಡಾ ಜೈಲಿಗೆ ಹಾಕಲಾಯಿತು. ಚೇತರಿಸಿಕೊಳ್ಳಲು ಅವರಿಗೆ ಬಹಳ ದಿನ ಹಿಡಿಯಿತು.

ಯರವಾಡಾ ಜೈಲು ಬಹಳ ದೊಡ್ಡದಿತ್ತು. ಅಲ್ಲಿ ರಾಜಕೀಯ ಕೈದಿಗಳು ತುಂಬಿ ಕೊಂಡಿದ್ದರು. ಮಹಿಳೆಯರು ದೊಡ್ಡ ಪ್ರಮಾಣದಲ್ಲಿ ಇದ್ದರು. ಎಲ್ಲಕ್ಕಿಂತ ಹೆಚ್ಚಾಗಿ ಅವರ

ನಾದಿನಿ ಸರೋಜಿನಿ ನಾಯ್ಡು ಅಲ್ಲಿ ಭೇಟಿಯಾಗುತ್ತಿದ್ದರು. ಕೆಲವೇ ದಿನಗಳಲ್ಲಿ ಅವರ ಜೊತೆಯಲ್ಲಿ ಇರುವುದು ಕಮಲಾದೇವಿಗೆ ಸಾಧ್ಯವಾಯಿತು. ಸರೋಜಿನಿ ನಾಯ್ಡು ಅವರದು ವಿನೋದ ಪ್ರಕೃತಿ. ಅವರು ಎಲ್ಲರನ್ನು ನಗಿಸುತ್ತಾ, ನಗುತ್ತಾ ಇರುತ್ತಿದ್ದರು. ಅವರು ತಮ್ಮ ಹೆಚ್ಚಿನ ಸಮಯವನ್ನು ತೋಟದಲ್ಲಿ ಕಳೆಯುತ್ತಿದ್ದರು. ಗಿಡಗಳನ್ನು ಬೆಳೆಸುವುದು, ನೀರು ಹಾಕುವುದು ಇತ್ಯಾದಿ. ಈ ಕೆಲಸದಲ್ಲಿ ಇಬ್ಬರ ಸಮಯವೂ ಆನಂದದಿಂದ ಕಳೆಯುತ್ತಿತ್ತು. ಓದಲು ಸಮಯ ಸಿಗುತ್ತಿರಲಿಲ್ಲ. ಬರೆಯುವುದಕ್ಕೆ ಅನುಮತಿ ಇರಲಿಲ್ಲ.

ಎರಡನೆಯ ಜೈಲು ವಾಸದ ಸಂದರ್ಭದಲ್ಲಿ ಕಮಲಾದೇವಿ ಬೋರಿವಲಿಯ ಸೇವಾದಳದ ಶಿಬಿರವನ್ನು ನಡೆಸುತ್ತಿದ್ದರು. ವಿದೇಶಿ ವಸ್ತುಗಳ ಬಹಿಷ್ಕಾರ, ಸೆರೆ ಅಂಗಡಿಯನ್ನು ಮುಚ್ಚುವುದಕ್ಕಾಗಿ ಪಿಕೆಟಿಂಗ್, ಮೆರವಣಿಗೆ ಇತ್ಯಾದಿ ನಡೆಸುತ್ತಾ ಇದ್ದರು. ಶಾಂತಿ–ಭಂಗದ ಆರೋಪದಲ್ಲಿ ಅವರನ್ನು ದಸ್ತಗಿರಿ ಮಾಡಲಾಯಿತು. ಅವರು ಶಿಬಿರವನ್ನು ಮುಚ್ಚಿ ಸ್ವಯಂಸೇವಕರನ್ನು ಮನೆಗೆ ಕಳುಹಿಸಿ ಕೆಲವೇ ಸಮಯ ಕಳೆದಿತ್ತು!

ಅವರ ಮೇಲೆ 'ರಸ್ತೆಯಲ್ಲಿ ಗೂಂಡಾಗಿರಿ' (ಮೆರವಣಿಗೆಯನ್ನು ನಡೆಸಿದ್ದು!) ನಡೆಸಿದ ಆರೋಪವನ್ನು ಕೂಡಾ ಹೊರೆಸಲಾಯಿತು. ಮತ್ತೊಮ್ಮೆ ಸಿ ದರ್ಜೆ ವಾಸ ಲಭಿಸಿತು. ಕೆಲವೇ ದಿನಗಳಲ್ಲಿ ಕಾಮಾಲೆ ಕಾಯಿಲೆ ಮತ್ತೆ ಕಾಡಿತು. ಅಲ್ಲಿ ಚಿಕಿತ್ಸೆ ಇರಲಿಲ್ಲ. ಕಾಮಾಲೆಯಿಂದಾಗಿ ಹಲವು ಮಂದಿ ಜೈಲಿನಲ್ಲಿಯೇ ಸಾವನ್ನಪ್ಪಿದ್ದರು. 1932ರ ಈ ಸತ್ಯಾಗ್ರಹದಿಂದಾಗಿ ಹಲವಾರು ಮಂದಿ ಜೈಲು ಸೇರಿದ್ದರು. ಶೇಕಡಾ 95ರಷ್ಟು ರಾಜಕೀಯ ಕೈದಿಗಳನ್ನು ಸಿ ದರ್ಜೆಯಲ್ಲಿ ತುಂಬಿರುವುದು ಕಂಡುಬರುತ್ತಿತ್ತು. ಮತ್ತೊಮ್ಮೆ ಹೊರಗಿದ್ದ ಹಿತೈಷಿ ಸ್ನೇಹಿತರ ದೃಷ್ಟಿಗೆ ಕಮಲಾದೇವಿಯ ಅನಾರೋಗ್ಯ ಗೋಚರಿಸಿತು. ಅವರು ಬದುಕುಳಿದರು. ಆದರೆ ಅವರಿಗಾಗಿ ಕಳುಹಿಸಿದ ಹಣ್ಣು–ಆಹಾರವಸ್ತುಗಳು ಇತ್ಯಾದಿ ಯಾವುದೂ ಅವರಿಗೆ ತಲುಪಿರಲಿಲ್ಲ. ಈ ವಿಚಾರ ಕಮಲಾದೇವಿಗೆ ತಿಳಿದದ್ದು ಜೈಲಿನಿಂದ ಹೊರಬಂದ ನಂತರವೇ!

ಚೇತರಿಸಿಕೊಳ್ಳಲು ಅವರಿಗೆ ಮೂರು ತಿಂಗಳು ಹಿಡಿಯಿತು. ಅದರ ನಂತರ ಮಹಿಳಾ ಕೈದಿಗಳಿಗೆ ಚಿಕಿತ್ಸೆ ನೀಡುವ ಜವಾಬ್ದಾರಿಯನ್ನು ಅವರು ವಹಿಸಿಕೊಂಡರು. ತನಗಾಗಿ ಸಣ್ಣ ಜಾಗದ ಬೇಡಿಕೆಯನ್ನು ಮುಂದಿಟ್ಟರು. ಪ್ರಾರಂಭದಲ್ಲಿ ಜೈಲರ್ ಇದಕ್ಕೆ ಸಮ್ಮತಿಸಲಿಲ್ಲ. ಆದರೆ ಕಾಯಿಲೆ ಬೀಳುವ ಮಹಿಳೆಯರ ಸಂಖ್ಯೆ ಹೆಚ್ಚುತ್ತಾ ಹೋಯಿತು! ಆಸ್ಪತ್ರೆ ನಡೆಸಲು ಕಮಲಾದೇವಿಗೆ ಮಣ್ಣಿನ ಗೋಡೆಯ, ತಗಡಿನ ಸೂರಿನ ಒಂದು ಶೆಡ್ ದೊರೆಯಿತು. ಅವರು ಜೈಲಿನ ವೈದ್ಯರ ಬಳಿ ವಿವಿಧ ರೋಗಗಳಿಗೆ ಔಷಧಿಗಳನ್ನು ಬರೆದಿಟ್ಟುಕೊಂಡು, ಶೀಷೆಗಳಲ್ಲಿ ಬೇರೆ ಬೇರೆ ಬಣ್ಣದ ಔಷಧಿಯನ್ನು ತರುತ್ತಿದ್ದರು. ಜೈಲಿನಿಂದ ಹೊರಗೆ ಹೋಗುತ್ತಿರುವ ಕೈದಿಗಳಲ್ಲಿ ವಿನಂತಿಸಿಕೊಂಡು ಔಷಧಿ, ಗುಳಿಗೆಗಳನ್ನು ತರಿಸಿ ಸ್ವತಃ ರೋಗಿಗಳಿಗೆ ಚಿಕಿತ್ಸೆ ನೀಡುವುದನ್ನು ಪ್ರಾರಂಭಿಸಿದರು.

ಒಮ್ಮೆ ಒಬ್ಬ ಕೈದಿಯ ಹೆರಿಗೆ ಮಾಡಿಸುವ ಕಠಿಣ ಪ್ರಸಂಗ ಬಂತು! ಕಮಲಾದೇವಿ ತುಂಬಾ ಹೆದರಿಕೊಂಡರು. ಆದರೆ ಬೇರೆ ದಾರಿ ಇರಲಿಲ್ಲ. ಮಗುವಿಗೇನಾದರೂ ಸಂಭವಿಸಿದರೆ ಎಂಬ ದೊಡ್ಡ ಅಂಜಿಕೆ ಇತ್ತು. ಎಲ್ಲವೂ ಸರಾಗವಾಗಿ ನಡೆದು ಮಗು ಗಟ್ಟಿಧ್ವನಿಯಿಂದ ಅಳತೊಡಗಿದಾಗ ಆ ಸದ್ದು ಅವರ ಕಿವಿಗೆ ಅತ್ಯಂತ ಮಧುರ ರಾಗದ ಹಾಗೆ ಕೇಳಿಸಿತಂತೆ! ಇದರ ನಂತರ ಈ ರೀತಿಯ ಗಂಡಾಂತರ ಬೇಡವೆಂದುಕೊಂಡು ಅವರು ಗರ್ಭಿಣಿ ಸ್ತ್ರೀಯರನ್ನು ಯರವಾಡಾ ಜೈಲಿಗೆ ಕಳುಹಿಸುವಂತೆ ಮನವಿ ಮಾಡಿದರು. ಮನವಿ ಸ್ವೀಕಾರವಾಯಿತು.

ಬೆಳಗಾವಿಯ ಈ ಎರಡನೇ ಅವಧಿ ಮುಗಿದು, ಜೈಲಿನಿಂದ ಬಿಡುಗಡೆ ಪಡೆದ ಕೂಡಲೇ ಕಮಲಾದೇವಿಯವರು ಹೋಗಿ ಮೊದಲು ಗಾಂಧೀಜಿಯನ್ನು ಭೇಟಿಯಾದರು. ಗಾಂಧೀಜಿಯವರು ಕಮಲಾದೇವಿಯ ಮಗ ರಾಮನ ಕುರಿತು ಕಾಳಜಿ ವ್ಯಕ್ತಪಡಿಸಿದರು. "ಸ್ವಲ್ಪ ಸಮಯ ಅವನೊಡನೆ ಕಾಲಕಳೆಯುವಿಯಂತೆ! ಅವನ ಶಿಕ್ಷಣ ಮತ್ತು ಭವಿಷ್ಯದ ನಿರ್ಧಾರವಾದ ನಂತರ ಮತ್ತೆ ರಾಜಕೀಯಕ್ಕೆ ಬಾ" ಎಂದು ಅವರು ಸೂಚಿಸಿದರು.

ಆದರೆ ಆದದ್ದು ಬೇರೆಯೇ! ಮತ್ತೆ ಅವರನ್ನು ಬಂಧಿಸಲಾಯಿತು. ಆ ದಿನಗಳಲ್ಲಿ ರಾಜಕೀಯ ವ್ಯಕ್ತಿಗಳನ್ನು ಬಂಧಿಸಲು, ಜೈಲಿಗೆ ತಳ್ಳಲು ಅರೆಸ್ಟ್ ವಾರಂಟ್ ಬೇಕಾಗಿರಲಿಲ್ಲ. ಶಾಂತಿಭಂಗಕ್ಕೆ ಕಾರಣರಾದ ವ್ಯಕ್ತಿಯೆಂಬ ಸರಕಾರಿ ಸಂದೇಶವೊಂದೇ ಸಾಕಾಗಿತ್ತು. ಈ ಬಾರಿ ಅವರು ವೆಲ್ಲೂರು ಜೈಲಿನಲ್ಲಿ ಬಂಧಿವಾಸಿಯಾದರು.

ಇದು ಅವರ ಬದುಕಿನ ಅತ್ಯಂತ ಕಠಿಣ ದಿನಗಳೆನಿಸಿದವು. ಮಹಿಳೆಯರಿಗಾಗಿ ನಿರ್ಮಿಸಲಾದ ಈ ನವೀನ ಕಾರಾಗೃಹವು ಬಂಡೆನೆಲದ ಮೇಲೆ ಇತ್ತು. ಅಲ್ಲಿಯ ತೀಕ್ಷ್ಣ ಉಷ್ಣತೆಗೆ ಬಂಡೆ ಕಾದು ಬಿಸಿಯಾಗಿರುತ್ತಿತ್ತು. ರಾಜಕೀಯ ಕೈದಿಗಳು ಯಾರೂ ಅಲ್ಲಿ ಇಲ್ಲದ್ದರಿಂದ ಕಮಲಾದೇವಿಗೆ ಇದು ಏಕಾಂತ ಬಂಧಿವಾಸವಾಯಿತು. ಪ್ರತಿದಿನ ಸಂಜೆ ಆರು ಗಂಟೆಯ ನಂತರ ಕಿಟಕಿ ಇಲ್ಲದ ಕೋಣೆಯಲ್ಲಿ ಅವರು ಇರಬೇಕಾಗಿತ್ತು. ಮರುದಿನ ಬೆಳಿಗ್ಗೆ ಬೀಗ ಕಳಚಿ ಬಾಗಿಲು ತೆರೆದಾಗ ಸೆಕೆಯಿಂದ ಚಡಪಡಿಸುವಂತಾಗುತ್ತಿತ್ತು. ಹೊರಗೆ ಒಂದು ಮರ, ಒಂದು ಬಳ್ಳಿ ಕೂಡಾ ಇರಲಿಲ್ಲ. ಕೋಣೆಯ ಹೊರಗೆ ಮಲಗೋಣವೆಂದರೆ, ಅದಕ್ಕೆ ಅನುಮತಿ ಸಿಗಲಿಲ್ಲ. 'ನಾವಾಗಿ ಜೈಲಿಗೆ ಬಂದಿದ್ದೇವೆ. ಓಡಿಹೋಗುವ ಪ್ರಯತ್ನ ಮಾಡುವುದಿಲ್ಲ!' ಎಂದು ತಿಳಿಸಿದರೂ, ಬಿಗಿಪಹರೆ ಇರುವಲ್ಲಿ ಕೂಡಾ ಕೋಣೆಯ ಹೊರಗೆ ಮಲಗಲು ಅವರಿಗೆ ಅನುಮತಿ ದೊರೆಯಲಿಲ್ಲ. ಪಾತಕಿಗಳಿಗೆ ಮತ್ತು ಸ್ವಾತಂತ್ರ್ಯಯೋಧರಿಗೆ ಒಂದೇ ವಿಧದ ಆತಿಥ್ಯ ನೀಡಿ ಬ್ರಿಟಿಷ್ ಸರಕಾರ ಸಮಾನತೆಯನ್ನು ಸಾಧಿಸಿತು!

ಆ ಧಗೆಯಲ್ಲಿ ಏಕಾಂಗಿಯಾಗಿ ವರ್ಷ ಕಳೆಯುವುದು ಅತ್ಯಂತ ಯಾತನಾಮಯವಾಯಿತು. ಕೆಲವು ದಿನಗಳು ಓದಿನಲ್ಲಿ ಕಳೆದವು. ನಂತರ ತಮ್ಮ ಅನುಭವವನ್ನು ಬರೆಯಲಾರಂಭಿಸಿದರು. ತನ್ನ ಕಾಲದ ಸಾಮಾಜಿಕ ಜೀವನ, ಅದರ ವಿಶ್ಲೇಷಣೆ, ರಾಜಕೀಯ ಸಮಸ್ಯೆಯ ಕುರಿತು ತನ್ನ ವಿವೇಚನೆ, ಜೈಲಿನ ಅನುಭವ, ಆತ್ಮನಿವೇದನೆ, ಹೀಗೆ ಬರೆಯುತ್ತಾ ಹೋದರು. ದುರ್ದೈವವೆಂದರೆ ಈ ಅಮೂಲ್ಯ ಬರಹವನ್ನು ಪ್ರಕಟಿಸುವುದಾಗಿ ಹೇಳಿ ತೆಗೆದುಕೊಂಡು ಹೋದ ಒಬ್ಬ ಬಂಧು ಇದನ್ನು ಕಳೆದುಬಿಟ್ಟರು. ಕಮಲಾದೇವಿಯವರು ಇದರ ಪ್ರತಿಯನ್ನು ಇಟ್ಟುಕೊಂಡಿರಲಿಲ್ಲ. ಜೈಲಿನಲ್ಲಿ ಅದು ಸಾಧ್ಯವೂ ಇರಲಿಲ್ಲ. ಅವರಲ್ಲಿ ಬರೆಯುವ ಜಾಣ್ಮೆ ಇತ್ತು. ಶ್ರೀಮಂತ ಅನುಭವವಿತ್ತು. ಸ್ಪಂದನಶೀಲ ಮನಸ್ಸು ಇತ್ತು. ಆದರೆ ಅವರ ಬರಹ ನಾಲ್ಕು ಜನರಿಗೆ ಸಿಗುವ ಅವಕಾಶ ಶಾಶ್ವತವಾಗಿ ಇಲ್ಲವಾಯಿತು! ಅಲ್ಲಿಯ ಅನಾರೋಗ್ಯಕರ ವಾತಾವರಣದಿಂದ ಕಮಲಾದೇವಿ ನಿಶ್ಶಕ್ತರಾದರು. ಒಂದು ಬೆಳಿಗ್ಗೆ ಬೀಗ ತೆಗೆದು ಒಳಗೆ ಹೋದ ಪೋಲೀಸರ ಕಣ್ಣಿಗೆ ಪ್ರಜ್ಞಾಹೀನ ಸ್ಥಿತಿಯಲ್ಲಿ ನೆಲದ ಮೇಲೆ ಬಿದ್ದುಕೊಂಡಿದ್ದ ಕಮಲಾದೇವಿ ಕಾಣಿಸಿದರು. ವೈದ್ಯರಿಗೆ ಹೇಳಿಕಳುಹಿಸಲಾಯಿತು. ಚಿಕಿತ್ಸೆ ದೊರೆತು ಅವರು ಬದುಕುಳಿದರು. ಅವರಿಗೆ ಬೇಗ ಬಿಡುಗಡೆ ದೊರೆಯಿತು. ಅವರು ಮಂಗಳೂರಿಗೆ ಮರಳಿ ಬಂದರು (1934).

ಈ ಬಾರಿಯ ಜೈಲುವಾಸ ದೈಹಿಕವಾಗಿ ಮಾತ್ರವಲ್ಲ ಮಾನಸಿಕ ಚಿಂತೆಗೆ ಕೂಡಾ ಕಾರಣವಾಯಿತು. ಮಗ ರಾಮು ಗಿರಿಜಾಬಾಯಿಯ ಬಳಿ ಇದ್ದನು. ಅವನ ತಂದೆ

ಹರೀಂದ್ರನಾಥರು ಪಾಂಡಿಚೇರಿ ಆಶ್ರಮದಲ್ಲಿದ್ದರು. ಅವರು ಆಗಾಗ ಬಂದು ಹುಡುಗನನ್ನು ಮತ್ತು ಅವನನ್ನು ನೋಡಿಕೊಳ್ಳುವ ಆಳು ಸೀತಾಳನ್ನು ಕರೆದುಕೊಂಡು ಎಲ್ಲಿಯಾದರೂ ಹೋಗಿಬಿಡುತ್ತಿದ್ದರು. ಎಲ್ಲಿ ಹೋಗುತ್ತಾರೆ? ಏನು ಮಾಡುತ್ತಾರೆ? ಯಾರಿಗೂ ತಿಳಿಸುತ್ತಿರಲಿಲ್ಲ. ಅವರು ಇಲ್ಲಿವರೆಗೆ ಹೊಟ್ಟೆಪಾಡಿನ ನೌಕರಿ ಕೈಗೊಂಡದ್ದೇ ಇಲ್ಲ. ಅವರ ಸ್ವಚ್ಛಂದ ಪ್ರವೃತ್ತಿ, ವಿಚಿತ್ರ ಭಾವವಿಕಾರವನ್ನು ಸಹಿಸಿಕೊಳ್ಳುತ್ತ ಬಂದವರು ಕಮಲಾದೇವಿ. ಆದರೆ ಅವರ ಮದ್ಯದ ದೌರ್ಬಲ್ಯವನ್ನು ತಡೆದುಕೊಳ್ಳುವುದು ಅವರಿಗೆ ಕಠಿಣವಾಯಿತು. ಈ ಸ್ಥಿತಿಯಲ್ಲಿ ಅವರು ಹುಡುಗನನ್ನು ಹೇಗೆ ನೋಡಿಕೊಳ್ಳುತ್ತಾರೆ? ಗಾಂಧೀಜಿಯ ಉಪದೇಶ ಮತ್ತೆಮತ್ತೆ ನೆನಪಿಗೆ ಬರುತ್ತಿತ್ತು. "ನೀನು ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸುತ್ತಿದ್ದೀಯಾ ! ಆದರೆ ನಿನ್ನ ಸ್ವಾತಂತ್ರ್ಯ ದೊರಕಿಸಿಕೊಳ್ಳಲು ಅಸಮರ್ಥಳಾಗಿದ್ದಿ ! ಯೋಚಿಸಿ ನಿನ್ನ ಮಗನ ಭವಿಷ್ಯವನ್ನು ನಿರ್ಧರಿಸು. ಯಾವುದಾದರೂ ಒಂದು ಅಚಲ ನಿರ್ಧಾರಕ್ಕೆ ಬಾ. ಪರಿಣಾಮಕ್ಕೆ ಕಾಯಬೇಡ !" ಕಮಲಾದೇವಿ ತುಂಬಾ ಯೋಚಿಸಿದರು. ವಿವಾಹಬಂಧನ ಬೇಡವೆಂದು ನಿರ್ಧರಿಸಿದರು. ಸ್ವತಃ ಸ್ವತಂತ್ರರಾಗದ ವ್ಯಕ್ತಿ ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡುವುದು ಅಸ್ವಾಭಾವಿಕವಾಗಿ ಕಂಡಿತು. ಜೊತೆಯಿಲ್ಲದ ವೈವಾಹಿಕ ಬದುಕನ್ನು ಮುಂದುವರಿಸುವುದರಲ್ಲಿ ಅರ್ಥವಿಲ್ಲ. ಅವರು ಬೇರೆಯಾಗುವ ನಿರ್ಧಾರ ತಳೆದರು. ಅದು ಹರೀಂದ್ರನಾಥರಿಗೆ ಬೇಕಿರಲಿಲ್ಲ. "ನೀನ್ಯಾಕೆ ಹೀಗೆ ಯೋಚಿಸುತ್ತಿ?" ಎಂದು ಅವರು ಕೇಳುತ್ತಿದ್ದರು. ಅವರ ವ್ಯಕ್ತಿಸ್ವಾತಂತ್ರ್ಯದ ಕಲ್ಪನೆ ಬೇರೆಯೇ ಆಗಿತ್ತು. 'ಸರ್ವಜನ, ಸರ್ವತಂತ್ರ ಸ್ವತಂತ್ರ ಇರುತ್ತಾರೆ !' ಎಂದು ತಿಳಿದುಕೊಂಡರೆ ಕಡಿವಾಣ ಹಾಕಲು ಸಾಧ್ಯವಿದೆಯೇ? ಕಮಲಾದೇವಿ ಕಾನೂನಿಗೆ ಅನುಗುಣವಾಗಿ ಬೇರೆಯಾದರು. ಆ ದಿನಗಳಲ್ಲಿ ಪರಸ್ಪರ ಸಮ್ಮತಿಯಿಂದ ದಂಪತಿಗಳು ಬೇರೆಯಾಗುವುದು ಅಪರೂಪವಾಗಿತ್ತು.

'ನನಗೆ ಯಾವುದೇ ಪ್ರಸಂಗದಲ್ಲಿ ಹರೀಂದ್ರನಾಥರು ದುಃಖ ನೀಡಿದ್ದು, ಅವಮಾನ ಮಾಡಿದ್ದು ನೆನಪಿಗೆ ಬರುವುದಿಲ್ಲ !' ಎಂದು ಕಮಲಾದೇವಿ ಹೇಳಿದ್ದುಂಟು. ಹೆಂಡತಿಯ ಕರ್ತವ್ಯಶಕ್ತಿಯಲ್ಲಿ ಅವರಿಗೆ ಪೂರ್ಣ ವಿಶ್ವಾಸವಿತ್ತು. ಆದರೆ ಬದುಕಿನಲ್ಲಿ ದೇಶದ ಸ್ವಾತಂತ್ರ್ಯ ಪ್ರಾಪ್ತಿಯ ಆದರ್ಶವನ್ನು ಇಟ್ಟುಕೊಂಡಿರುವ ವ್ಯಕ್ತಿಗೆ ಬೇರೆ ಎಲ್ಲಾ ವಿಚಾರಗಳು ಗೌಣವಾಗಿರುತ್ತಿದ್ದವು. ಈ ಆದರ್ಶ ಚಂಚಲ ಮತ್ತು ರಸಿಕವ್ಯಕ್ತಿ ಹರೀಂದ್ರನಾಥರಿಗೆ ಸಾಧ್ಯವಿರಲಿಲ್ಲ. ಅವರಿಬ್ಬರೂ ಬೇರೆಯಾದ ನಂತರವೂ ಪರಸ್ಪರ ಗೌರವವನ್ನು ಕಾಪಾಡಿಕೊಂಡು ಬಂದರು.

ಕಮಲಾದೇವಿ ನಾಲ್ಕನೆಯ ಬಾರಿ ಜೈಲಿಗೆ ಹೋದರು. ಅವರು ಜಾಗತಿಕ ಸಂಚಾರ ಪೂರ್ಣಗೊಳಿಸಿ, ಸ್ವದೇಶಕ್ಕೆ ಮರಳಿ ಬರುವುದರೊಳಗೆ ಮತ್ತೆ ಚಳವಳಿಯಲ್ಲಿ ಧುಮುಕಿದರು. ಕಾಂಗ್ರೆಸ್ 1942, ಆಗಸ್ಟ್ 8 ರಂದು 'ಕ್ವಿಟ್ ಇಂಡಿಯಾ'(ಭಾರತ ಬಿಟ್ಟು ತೊಲಗಿರಿ) ಎಂದು ಬ್ರಿಟಿಷರಿಗೆ ನೋಟೀಸ್ ನೀಡಿತು. ಇದರಲ್ಲಿ ಎಲ್ಲಾ ಮುಖಂಡರು ಕೈಜೋಡಿಸಿದ್ದರು. ಮರುದಿನ ಬೆಳಕು ಮೂಡುವ ಮೊದಲೇ ಕಮಲಾದೇವಿಯನ್ನು ಬಂಧಿಸಿ ಅಜ್ಞಾತ ಜಾಗದಲ್ಲಿ ಇಡಲಾಯಿತು. ಆಗ ಅವರು ಬೆಂಗಳೂರಿನಲ್ಲಿದ್ದರು. ಸಂಸ್ಥಾನದಲ್ಲಿ ರಾಜಕೀಯ ಜಾಗೃತಿ ಬಹಳ ಕಡಿಮೆ ಎಂದು ತಿಳಿದುಕೊಂಡು ತನಗೆ ಸಾಧ್ಯವಿರುವ ಕಾರ್ಯವನ್ನು ನಡೆಸುವುದಕ್ಕಾಗಿ ಅವರು ಅಲ್ಲಿಗೆ ಹೋಗಿದ್ದರು. ಶಾಂತಿಭಂಗವಾಗುವ ಲಕ್ಷಣ ಕಂಡುಬಂದದ್ದರಿಂದ ಸರಕಾರ ಅವರನ್ನು ಬಂಧಿಸಿತು. ಅವರು ಕೆಲವು ತಿಂಗಳು ಬೆಂಗಳೂರು ಜೈಲಿನಲ್ಲಿ ಕಳೆದರು. ನಂತರ ಅವರು ಮೊದಲು ಇದ್ದಂತಹ ವೆಲ್ಲೂರು ಜೈಲಿಗೆ ಕಳುಹಿಸಲಾಯಿತು. ಅವರ ಮೇಲೆ ಯಾವುದೇ ಆಪಾದನೆ ಇರಲಿಲ್ಲ. ಆದರೆ ಸರಕಾರವು ತನ್ನ

ವಿಶೇಷ ಅಧಿಕಾರದಿಂದ 21 ತಿಂಗಳ ನಜರಬಂಧಿ ವಾಸದಲ್ಲಿ ಇರಿಸಿತು. ಹಿಂದಿನ ಹಾಗೆ ವೆಲ್ಲೂರಿನಲ್ಲಿ ಈಗ ಏಕಾಂತವಿರಲಿಲ್ಲ. ಮಹಿಳಾ ಕೈದಿಗಳು ಬಹಳ ಮಂದಿ ಇದ್ದರು. ಆದರೆ ಅದೇ ಧಗೆ ತುಂಬಿದ ಅನಾರೋಗ್ಯಕರ ವಾತಾವರಣ. ಈಗ ಅವರ ಆರೋಗ್ಯ ಇನ್ನಷ್ಟು ಬಿಗಡಾಯಿಸಿತು. ವೈದ್ಯಕೀಯ ಕಾರಣಗಳಿಂದಾಗಿ ಶಿಕ್ಷೆ ಪೂರ್ಣಗೊಳ್ಳಲು ಕೆಲವು ದಿನಗಳು ಇರುವಾಗಲೇ ಅವರನ್ನು ಜೈಲಿನಿಂದ ಬಿಡುಗಡೆ ಮಾಡಲಾಯಿತು.

ಆದರೆ ಇದೇ ಅವಧಿಯಲ್ಲಿ ಅವರಿಗೆ ಆಪ್ತರಾಗಿದ್ದ ಅನೇಕ ಮುಖಂಡರು ಸಾವನ್ನಪ್ಪಿದರು. ಕಸ್ತೂರಿಬಾ, ಮಹಾದೇವ ದೇಸಾಯಿ, ಆರ್.ಎಸ್. ಪಂಡಿತ(ವಿಜಯಲಕ್ಷ್ಮಿ ಪಂಡಿತರ ಪತಿ) ಮೊದಲಾದವರು. ಲೋಹಿಯಾ, ಜಯಪ್ರಕಾಶ ನಾರಾಯಣ ಅವರಂತಹ ಸಮಾಜವಾದಿ ಧುರೀಣರಿಗೆ ಜೈಲಿನಲ್ಲಿ ಚಿತ್ರಹಿಂಸೆ ನೀಡಿದ್ದರು. ಈ ಘಟನೆಯಿಂದ ಕಮಲಾದೇವಿಗೆ ಬಹಳ ದುಃಖವಾಗಿತ್ತು. ಆದರೆ ಜೈಲಿನಿಂದ ಹೊರಗೆ ಬಂದ ಬಳಿಕ ಮಾಡಬೇಕಾದ ಕೆಲಸ ಬಹಳಷ್ಟು ಇತ್ತು.

ಜೈಲಿನ ವಿವಿಧ ಅನುಭವ ಕಮಲಾದೇವಿಗೆ ಪಕ್ವತೆಯನ್ನು ತಂದಿತ್ತು. ಶ್ರೀಮಂತಿಕೆಯ ಸುಖಸೌಕರ್ಯಗಳಲ್ಲಿ ಬೆಳೆದ ಅವರಿಗೆ ಮೂಲಭೂತ ಸೌಲಭ್ಯಗಳಿಲ್ಲದ ಬ್ಯಾರಕಿನಲ್ಲಿ ದೀನ, ದರಿದ್ರ, ರೋಗಿ ಮತ್ತು ಮತಿಭ್ರಾಂತ ಮಹಿಳೆಯರೊಂದಿಗೆ ದಿನ ಕಳೆಯಬೇಕಾಗಿ ಬಂದಿತ್ತು. ಆ ಕಾಲದಲ್ಲಿ ಹುಚ್ಚರಾಸ್ಪತ್ರೆ ಇರಲಿಲ್ಲ. ಅವರ ಬೆಳಗಾವಿ ಜೈಲಿನ ವಾಸ್ತವ್ಯದಲ್ಲಿ ಹುಚ್ಚು ಹಿಡಿದ ಮಹಿಳೆಯೊಬ್ಬಳಿದ್ದಳು. ಅವಳಿಗೆ ಆಗಾಗ ಹುಚ್ಚು ಕೆರಳುತ್ತಿತ್ತು. ಅಂತಹ ಸಂದರ್ಭದಲ್ಲಿ ಅವಳು ಭಯಾನಕ ರೀತಿಯಿಂದ ವರ್ತಿಸುತ್ತಿದ್ದಳು. ಆದರೆ ಕಮಲಾದೇವಿಯನ್ನು ಕಂಡರೆ ಶಾಂತಳಾಗುತ್ತಿದ್ದಳು. ಕಮಲಾದೇವಿ ಅವಳ ಶುಶ್ರೂಷೆಯನ್ನು ಮಾಡಿದ್ದರು. ಹತ್ತು ವಾರಗಳು ಕಳೆದ ನಂತರ ಅವಳಲ್ಲಿ ಉತ್ತಮ ಸುಧಾರಣೆ ಕಂಡುಬಂದಿತ್ತು. ನಂತರ ಅವಳು ಸ್ವಚ್ಛವಾಗಿ ಇರಲು ಪ್ರಾರಂಭಿಸಿದಳು. ಅವಳ ಆರೈಕೆ ಮಾಡಿ ಜೈಲಿನ ಸಿಬ್ಬಂದಿಯ ತಲೆನೋವನ್ನು ಕಡಿಮೆ ಮಾಡಿದ್ದರಿಂದ ಕಮಲಾದೇವಿಯ ಶಿಕ್ಷೆಯಲ್ಲಿ ಒಂದು ತಿಂಗಳ ಅವಧಿಯನ್ನು ಕಡಿತಗೊಳಿಸಲಾಯಿತು!

ಮನುಷ್ಯರಿಗೆ ಜೈಲುವಾಸ ಸಹನೆಯನ್ನು ಕಲಿಸುತ್ತದೆ. ಬಹಳಷ್ಟು ಸಂದರ್ಭದಲ್ಲಿ ಅದು ಅವರಲ್ಲಿರುವ ಮಾನವೀಯತೆಯನ್ನು ಪ್ರಕಟಗೊಳಿಸುತ್ತದೆ ಎಂಬುದು ಕಮಲಾದೇವಿಯ ಅನುಭವ. ಇವತ್ತಿಗೂ ಭಾರತದ ಜೈಲು ಕ್ರೂರಶಿಕ್ಷೆಗೆ ಕುಪ್ರಸಿದ್ಧವಾಗಿ ಇದೆ. ಪೊಲೀಸ್ ಅತ್ಯಾಚಾರದ ಕುರಿತು ಪತ್ರಿಕೆಯಲ್ಲಿ, ಟಿ.ವಿ. ಮಾಧ್ಯಮದಲ್ಲಿ ವರದಿಯಾಗುತ್ತದೆ. ಸ್ವಾತಂತ್ರ್ಯ ಚಳವಳಿಯ ಅತಂತ್ರ ಪರಿಸ್ಥಿತಿಯಲ್ಲಿ ಅಗಾಧ ಸಂಖ್ಯೆಯಲ್ಲಿ ಜನರನ್ನು ಸೆರೆಹಿಡಿದು, ಹತ್ತು ಜನರು ಇರುವಲ್ಲಿ ಐವತ್ತು ಜನರನ್ನು ತುಂಬಿಸಿದಾಗ ಅಲ್ಲಿನ ಸ್ಥಿತಿ ಹೇಗಿರಬಹುದು? ಸಣ್ಣಸಣ್ಣ ವಿಷಯಕ್ಕೆ ಮನಸ್ತಾಪ, ಜಗಳ, ಗಂಡಸರಲ್ಲಿ ಹೊಡೆದಾಟಗಳು ನಡೆದುದನ್ನು ಅವರು ನೋಡಿದ್ದಾರೆ. ಅನಕ್ಷರಸ್ಥರು ಓದಲು, ಬರೆಯಲು ಕಲಿತು ಹೊರಗೆ ಬಂದದ್ದನ್ನು ಕೂಡಾ ಅವರು ನೋಡಿದ್ದಾರೆ. ವೈಯಕ್ತಿಕ ಬದುಕಿನಲ್ಲಿ ಮತ್ತು ರಾಷ್ಟ್ರದ ಬದುಕಿನಲ್ಲಿ ಸ್ವಾತಂತ್ರ್ಯ ಎಂಬ ಕಲ್ಪನೆಯ ಎಷ್ಟೋ ಮುಖಗಳು ಅವರಿಗೆ ಕಾಣಲು ಸಿಕ್ಕಿವೆ! ಮತ್ತು ಅದರಿಂದಾಗಿ ಅವರ ದೇಶಸೇವೆಯ ಕಲ್ಪನೆ ಸ್ಪಷ್ಟವಾಗುತ್ತಾ ಹೋಯಿತು.

ಅಧ್ಯಾಯ: ೭

# ಮಹಿಳೆಯರಿಗಾಗಿ: ವೈಯಕ್ತಿಕ ಮತ್ತು ಪರಿಷತ್ತಿನ ಸೇವೆ

ಕಮಲಾದೇವಿಯವರದು ಬಹುಮುಖ ವ್ಯಕ್ತಿತ್ವ. ಅದೇ ರೀತಿ ಅವರ ಜನಸೇವೆ ಕೂಡಾ ಬಹುರೂಪದ್ದಾಗಿದೆ. ಅವರು ಮಾಡಿರುವಂತಹ ಲೋಕಕಲ್ಯಾಣದ ಕಾರ್ಯಗಳಲ್ಲಿ ಕರಕುಶಲಕಲೆಗೆ ಅವರು ನೀಡಿದ ಪುನಶ್ಚೇತನ ಮತ್ತು ಪ್ರೋತ್ಸಾಹ ಅತಿಮುಖ್ಯ ಎನ್ನುವ ಕಲ್ಪನೆ ಇದೆ. ಆದರೆ ಅಷ್ಟೇ ಮುಖ್ಯವಾಗಿರುವುದು ಮಹಿಳೆಯರಿಗಾಗಿ ಅವರು ಸಲ್ಲಿಸಿದ ಸೇವೆ. ಈ ದೇಶದ ಮಹಿಳೆಯರಿಗೆ ವೈಯಕ್ತಿಕ ರೂಪದಿಂದ ಮತ್ತು ಅಖಿಲ ಭಾರತ ಮಹಿಳಾ ಅಧಿವೇಶನ(ಎಐಡಬ್ಲುಸಿ)ದ ಮೂಲಕ ಬೇರೆಬೇರೆ ವಿಧದಲ್ಲಿ ಅವರ ಸೇವೆ ಸಂದಿದೆ.

ಇಪ್ಪತ್ತೊಂದನೆಯ ಶತಮಾನವು ದೊಡ್ಡಪ್ರಮಾಣದ ಮಹಿಳಾ ಅಭಿವೃದ್ಧಿಯನ್ನು ಕಂಡಿದೆ. ಮಹಿಳೆಯರು ಮಿಂಚದಿರುವ ಕ್ಷೇತ್ರವೇ ಇಲ್ಲವೆನ್ನಬಹುದು! ಆದರೆ ನೂರು ವರ್ಷಗಳ ಹಿಂದೆ, ಪರಿಸ್ಥಿತಿ ಬಹಳ ಬೇರೆ ರೀತಿಯದ್ದಾಗಿತ್ತು. ಬಾಲ್ಯ ವಿವಾಹ, ವಿಧವೆಯರ ನಿಕೃಷ್ಟ ಸ್ಥಿತಿ, ಶಿಕ್ಷಣದ ಅಭಾವ, ಆರ್ಥಿಕ ಪರಾವಲಂಬನೆ, ಕೌಟುಂಬಿಕ ಹಿಂಸೆ, ಮೂಲಭೂತ ಹಕ್ಕುಗಳಿಂದ ವಂಚಿತಗೊಳ್ಳುವುದು, ಒಂದೆರಡಲ್ಲ! ಮಹಿಳೆಯರ ಮೇಲಿನ ಶೋಷಣೆಯು ಜಗತ್ತಿನ ಎಲ್ಲಾ ಕಡೆಗಳಲ್ಲಿ ಇತ್ತು. ಆದರೆ ಭಾರತದಲ್ಲಿ ಉಚ್ಚವರ್ಗವೆಂದು ಹೇಳಿಕೊಳ್ಳುತ್ತಿರುವ ಜನಾಂಗದ ಮಹಿಳೆಯರ ಶೋಚನೀಯ ಪರಿಸ್ಥಿತಿ ಹೇಳಿ ಮುಗಿಯುವಂತಿರಲಿಲ್ಲ! ಇವತ್ತಿನ ದಿನ ಅದು ಅಪರೂಪಕ್ಕೆ ಕಾಣಸಿಗುತ್ತದೆ. 'ಕೆಂಪು ಸೀರೆಯವಳು' 'ತಲೆಯ ಮೇಲೆ ಸೆರಗಿನವಳು' ಎಂದು ಸುಸಂಸ್ಕೃತ ಭಾಷೆಯಲ್ಲಿ ಗುರುತಿಸಲ್ಪಡುತ್ತಿದ್ದ ವಿಧವೆಯರನ್ನು ಈಗಿನ ಜನರು ಬರೀ ಸಿನೆಮಾದಲ್ಲಿ ಮಾತ್ರ, ಅದರಲ್ಲಿಯೂ ಹಿಂದಿನ ಕಾಲದ ಸಾಮಾಜಿಕ ಜೀವನದ ಚಿತ್ರಣವಿರುವ ಸಿನೆಮಾದಲ್ಲಿ ನೋಡುತ್ತಾರೆ! ಈ ಮಹಿಳೆಯರು ತಲೆ ಬೋಳಿಸಿ, ಕೆಂಪು ಸೀರೆಯುಟ್ಟು ಅಪಶಕುನವೆಂದು ಯಾರಿಗೂ ಮುಖ ತೋರಿಸದೆ ಮನೆಮೂಲೆಯ ಕತ್ತಲೆಯಲ್ಲಿ, ಸಾಯುವವರೆಗೆ ಕೆಲಸ ಮಾಡುತ್ತಾ ಹಗಲುರಾತ್ರಿ ಕಳೆಯುತ್ತಿದ್ದರು. ಈ ಕಠೋರ ಸತ್ಯವನ್ನು ಇವತ್ತಿನ ದಿನ ಎಷ್ಟು ಜನರು ಬಲ್ಲರು? ಬಡ ಮಹಿಳೆಯರ ಸ್ಥಿತಿಯಂತೂ ಘೋರವಾಗಿ ಇರುತ್ತಿತ್ತು. ಅಡುಗೆ ಕೆಲಸ, ಮತ್ತು ಬೇರೆಯವರ ಸೇವೆಯಲ್ಲಿ ಅವರ ಆಯುಷ್ಯ ಕಳೆಯುತ್ತಿತ್ತು. ಒಪ್ಪೊತ್ತಿನ ಊಟ, ವ್ರತ, ಉಪವಾಸ ಮಾಡಿಯೂ 'ಮುಂಡೆ' ಎಂದು ಕರೆಯಿಸಿಕೊಂಡು ತಿರಸ್ಕಾರಕ್ಕೆ ಪಾತ್ರರಾಗುತ್ತಿದ್ದರು.

ಇಂತಹ ಪರಿಸ್ಥಿತಿಯಲ್ಲಿ 1900ನೇ ಇಸವಿಯಿಂದ ಅಥವಾ ಅದಕ್ಕಿಂತ ಮೊದಲು ಶಿಕ್ಷಣ ದೊರೆತ ಧೀರ ಮತ್ತು ದಯಾವಂತ ಮಹಿಳೆಯರು ಕೆಲವೆಡೆ ಮಹಿಳೆಯರ ಉದ್ಧಾರಕ್ಕಾಗಿ ಕಾರ್ಯ ನಡೆಸುತ್ತಿದ್ದರು. ಇವರಲ್ಲಿಯೂ, ಲೆಕ್ಕವಿಲ್ಲದಷ್ಟು ಕಷ್ಟ ಅನುಭವಿಸಿ ಸ್ವತಃ ಅಥವಾ ಗಂಡನ ಪ್ರೋತ್ಸಾಹದಿಂದ ಸಂಸ್ಥೆಯನ್ನು ಕಟ್ಟಿ, ಸಾಮೂಹಿಕ ರೂಪದಿಂದ ಸೇವೆ ಮಾಡಿದವರು ಇದ್ದಾರೆ. ಇವರಲ್ಲಿ ಮಹಾರಾಷ್ಟ್ರದ ಸಾವಿತ್ರಿಬಾಯಿ ಫುಲೆ (1831–1897), ಪಂಡಿತಾ ರಮಾಬಾಯಿ ಸರಸ್ವತಿ (1858–1922) ಮತ್ತು ರಮಾಬಾಯಿ ರಾನಡೆ (1862–1924) ಪ್ರಮುಖರಾಗಿದ್ದರು. ಬಂಗಾಲ ಪ್ರಾಂತದಲ್ಲಿ ಮತ್ತು ದಕ್ಷಿಣದ ಮದ್ರಾಸ್ ಪ್ರಾಂತದಲ್ಲಿ ಕೂಡಾ ಕೆಲವು ಪುರೋಗಾಮಿ ಕಾರ್ಯಗಳು ನಡೆಯುತ್ತಿದ್ದವು. ಚಿಕ್ಕಂದಿನಿಂದಲೇ ಪುಣೆಯ ಪ್ರಸಿದ್ಧ

ವ್ಯಕ್ತಿಗಳ ಮತ್ತು ಅವರ ಕಾರ್ಯದ ಪೂರ್ಣಪರಿಚಯ ಕಮಲಾದೇವಿಗೆ ಇತ್ತು. ಮದ್ರಾಸಿನ ಸಂಪರ್ಕದಿಂದ ಗಿರಿಜಾಬಾಯಿ ಮತ್ತು ಕಮಲಾದೇವಿಯವರು ಆನಿ ಬೆಸೆಂಟ್ ಮತ್ತು ಗ್ರೆಟ್ಟಾರನ್ನು ಗುರು ಸಮಾನವಾಗಿ ಕಾಣುತ್ತಿದ್ದರು.

ಐರ್‌ಲ್ಯಾಂಡಿನ ಗ್ರೆಟ್ಟಾ ಅಥವಾ ಮಾರ್ಗರೆಟ್ ಕಸಿನ್ಸ್, ಇಂಡಿಯಾಕ್ಕೆ ಬಂದ ನಂತರ ಥಿಯೋಸೊಫಿಕಲ್ ಸೊಸೈಟಿಯ ಮೂಲಕ ಆನಿಬೆಸೆಂಟ್‌ರಿಗೆ ಸಮಾನವಾಗಿ ದುಡಿಯುತ್ತಿದ್ದರು. ಇವರಿಬ್ಬರೂ ಮಹಿಳೆಯರ ಶಿಕ್ಷಣಕ್ಕೆ ಪ್ರಾಮುಖ್ಯತೆಯನ್ನು ನೀಡಿದ್ದಾರೆ. ಅವರು ಕೆಲವು ಸುಶಿಕ್ಷಿತ ಮಹಿಳೆಯರೊಂದಿಗೆ ಮದ್ರಾಸಿನಲ್ಲಿ ಒಂದು ಸಂಘವನ್ನು 1917ರಲ್ಲಿ ಸ್ಥಾಪಿಸಿ, ಇಂಗ್ಲಿಷ್ ಭಾಷಾ ಶಿಕ್ಷಣ, ಹೊಲಿಗೆಯ ಪ್ರಕಾರದಲ್ಲಿ ತರಬೇತಿ, ಬೇರೆ ಬೇರೆ ಕ್ರೀಡೆಗಳ ಪ್ರಾರಂಭ ಮಾಡಿದರು. ಈ ಸಂಘದಲ್ಲಿ ಯುರೋಪಿನ ಮತ್ತು ಭಾರತೀಯ ಮಹಿಳೆಯರಿಗೆ ಮುಕ್ತ ಅವಕಾಶವಿತ್ತು. ಈ ಕಾರಣಕ್ಕಾಗಿಯೇ ಈ ಸಂಘಕ್ಕೆ ವಿಮೆನ್ಸ್ ಇಂಡಿಯಾ ಅಸೋಸಿಯೇಶನ್ (ಡಬ್ಲುಐಎ) ಎಂಬ ಹೆಸರನ್ನು ಇಡಲಾಗಿತ್ತು. ಆನಿಬೆಸೆಂಟ್ ಇದರ ಪ್ರಥಮ ಅಧ್ಯಕ್ಷರಾದರು. ದೇಶದಾದ್ಯಂತ ಪ್ರಚಾರ ದೊರೆತು ನಡೆದು ಇದರ ಶಾಖೆಗಳು ಬೇರೆ ಬೇರೆ ಪ್ರದೇಶಗಳಲ್ಲಿ ತಲೆಯೆತ್ತಿದವು. ಐದು ವರ್ಷಗಳೊಳಗೆ 43 ಶಾಖೆಗಳು ಮೂಡಿಬಂದವು. 2300 ಮಂದಿ ಸದಸ್ಯರಾದರು. ಆಯಾಯ ರಾಜ್ಯದಲ್ಲಿ ಡಬ್ಲು.ಐ.ಎ. ಸ್ಥಳೀಯ ಸಾಂಸ್ಕೃತಿಕ ರೂಪವನ್ನು ತಾಳುತ್ತಿತ್ತು. ಮಾತೃಭಾಷಾ ಶಿಕ್ಷಣ, ಹೊಲಿಗೆ, ಪ್ರಥಮ ಚಿಕಿತ್ಸೆ ಇಂತಹ ಉಪಯುಕ್ತ ವಿಷಯಗಳನ್ನು ಅವರು ಪಠ್ಯಕ್ರಮದಲ್ಲಿ ಅಳವಡಿಸಿಕೊಂಡಿದ್ದರು.

ಗಿರಿಜಾಬಾಯಿಯವರು ಈ ರೀತಿಯ ಸಮಾಜವನ್ನು ಸುಮಾರು 1910ರಲ್ಲಿಯೇ ತಮ್ಮ ಮನೆಯಲ್ಲಿ ಪ್ರಾರಂಭಿಸಿದ್ದರು. ಈ ಸಮಾಜದ ಮೂಲಕ ಮಹಿಳೆಯರಿಗೆ ಪತ್ರಿಕೆ, ಪುಸ್ತಕಗಳ ವಾಚನ, ಪರಸ್ಪರ ಸಹಾಯ ಇತ್ಯಾದಿಗಳನ್ನು ಅವರು ನಡೆಸುತ್ತಿದ್ದರು.

ಸಣ್ಣಪುಟ್ಟ ಶಾಖೆಗಳ ಮೂಲಕ ಮಹಿಳೆಯರನ್ನು ಮುಂದೆ ತರುವ ಪ್ರಯತ್ನ ನಡೆಯುತ್ತಿದ್ದರೂ, ರಾಷ್ಟ್ರಮಟ್ಟದಲ್ಲಿ ಕೇಂದ್ರೀಕೃತ ಯೋಜನೆಯೊಂದನ್ನು ತರುವ ಪ್ರಯತ್ನದಲ್ಲಿ ಗ್ರೆಟ್ಟಾ ಇದ್ದರು. ಬ್ರಿಟಿಷ್ ಸೆಕ್ರೆಟರಿ ಆಫ್ ಸ್ಟೇಟ್ಸ್, ಮಾಂಟಿಗ್ಯೂ ಅವರು ಭಾರತಕ್ಕೆ ಬಂದಾಗ, ಮಹಿಳೆಯರಿಗೆ ಮತದಾನದ ಹಕ್ಕನ್ನು ನೀಡಬೇಕೆಂದು ಮಹಿಳಾ ನಿಯೋಗದೊಂದಿಗೆ ಅವರನ್ನು ಭೇಟಿಯಾಗಲು ಗ್ರೆಟ್ಟಾ ತೆರಳಿದ್ದರು. ಅವರು ಮತ್ತು ಆನಿಬೆಸೆಂಟ್ ಕೂಡಿ ಮದ್ರಾಸಿನಿಂದ 'ಸ್ತ್ರೀಧರ್ಮ'ವೆಂಬ ಮಾಸಿಕವನ್ನು ಪ್ರಕಟಿಸುತ್ತಿದ್ದರು. ಮಹಿಳೆಯರಿಗೆ ಎಲ್ಲಾ ರೀತಿಯಿಂದ ಉಪಯೋಗವಾಗುವ ಲೇಖನಗಳು ಅದರಲ್ಲಿ ಪ್ರಕಟವಾಗುತ್ತಿದ್ದವು.

ಪುಣೆಯಲ್ಲಿ ಗೋಖಲೆ, ತಿಲಕ, ನ್ಯಾಯಮೂರ್ತಿ ರಾನಡೆ ಇವರ ಬೆಂಬಲದಿಂದ ಪ್ರಾರಂಭವಾದ ಕೆಲವು ಸಂಘಟನೆಗಳು ಉತ್ತಮ ರೀತಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದವು. ಪಂಡಿತ ರಮಾಬಾಯಿಯ ಶಾರದಾ ಸದನ ಮತ್ತು ರಮಾಬಾಯಿ ರಾನಡೆಯವರ ಸೇವಾಸದನ ಬಹಳ ಕಾರ್ಯಗಳನ್ನು ನಡೆಸುತ್ತಿದ್ದವು. ತಿರಸ್ಕೃತ ಅನಾಥ ಮಹಿಳೆಯರಿಗೆ ಮತ್ತು ತರುಣ ವಿಧವೆಯರಿಗೆ ಆಹಾರ, ಆಶ್ರಯ ಮತ್ತು ಶಿಕ್ಷಣ ನೀಡಿ ಅವರನ್ನು ಸ್ವಾವಲಂಬಿಗೊಳಿಸುವ ಧ್ಯೇಯ ಈ ಎರಡು ಸಂಸ್ಥೆಗಳಿಗೆ ಇತ್ತು. ಇವು ಜನಪ್ರಿಯವಾಗಿದ್ದವು. ಸೇವಾಸದನದ ಹೆಸರು ನಾಲ್ಕೂ ದಿಕ್ಕಿಗೆ ಪಸರಿಸಿತ್ತು. ಗಿರಿಜಾಬಾಯಿಗೆ ಈ ಇಬ್ಬರೂ ರಮಾಬಾಯಿಯವರ ಪರಿಚಯ ಚೆನ್ನಾಗಿತ್ತು. ಸಾಮಾಜಿಕ ಕಾರ್ಯ ಪರಿಚಯವಿದ್ದುದರಿಂದ, ಅವರು ಮತ್ತು ಕಮಲಾದೇವಿ ಕೆಲಸಮಯ ಪುಣೆಯಲ್ಲಿ ವಾಸ್ತವ್ಯ ಹೂಡಿದ್ದರು.

ಪುಣೆಯಲ್ಲಿ ಮಹಿಳಾ ಸಮ್ಮೇಳನವನ್ನು 1927ರಲ್ಲಿ ಸಂಘಟಿಸುವ ನಿರ್ಧಾರವನ್ನು ಗ್ರೆಟ್ಟಾ

ಕೈಗೊಂಡರು. ಅವರಿಗೆ ಶಾರದಾಸದನ ಮತ್ತು ಸೇವಾಸದನದ ಬೆಂಬಲ ಇತ್ತು. ಎಂದಿನಂತೆ ಕಮಲಾದೇವಿ ಸ್ವಯಂಸೇವಕಿಯಾಗಿ ಕೆಲಸ ಮಾಡಲು ಸಂತೋಷದಿಂದ ಮುಂದೆ ಬಂದರು. ಅವರು 6 ತಿಂಗಳಿಗಿಂತ ಮೊದಲೇ ಗ್ರೆಟ್ಟಾಗೆ ಪ್ರಾರಂಭವಾದ ಕೆಲಸದಲ್ಲಿ ನೆರವಾಗತೊಡಗಿದರು.

ಬರೋಡಾ ಸಂಸ್ಥಾನದ ಮಹಾರಾಣಿ ಚಿಮಣಾಬಾಯಿ ಗಾಯಕವಾಡ, ಅಧ್ಯಕ್ಷರಾಗಿ ಆಯ್ಕೆಯಾದರು. ಇವರು ತಮ್ಮ ಸಂಸ್ಥಾನದಲ್ಲಿ ಶಿಕ್ಷಣ ಪ್ರಸಾರ ಪ್ರಗತಿ ಸಾಧಿಸುವುದರಲ್ಲಿ ಪತಿ ಸಯಾಜಿರಾವ್ ಗಾಯಕವಾಡರಿಗೆ ಜೊತೆ ನೀಡಿದವರು. ಈ ಸಮ್ಮೇಳನದಿಂದಾಗಿ ಕಮಲಾದೇವಿಗೆ ದೇಶದ ಬೇರೆ ಬೇರೆ ರಾಜ್ಯಗಳಲ್ಲಿ ಕೆಲಸ ಮಾಡಿಕೊಂಡಿರುತ್ತಿದ್ದ ಅನೇಕ ಮಹಿಳಾ ರಾಜಕಾರಣಿಗಳ ಪರಿಚಯವಾಯಿತು. ಅವರು ನಡೆಸುತ್ತಿದ್ದ ಸ್ತ್ರೀ ಶಿಕ್ಷಣ ಮತ್ತು ಸಮಾಜ ಸುಧಾರಣಾ ಕಾರ್ಯಗಳ ಸ್ಪಷ್ಟ ಕಲ್ಪನೆ ಉಂಟಾಯಿತು.

ಸರೋಜಿನಿ ನಾಯ್ಡು(ಕಮಲಾದೇವಿಯ ನಾದಿನಿ) ಅವರು 1917ರಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷರಾದ ಬಳಿಕ ಕಾಂಗ್ರೆಸ್ ಕಾರ್ಯಕರ್ತರು ಮತ್ತು ಬ್ರಿಟಿಷ್ ಸರಕಾರ ಅವರ ಸ್ಥಾನಮಾನಕ್ಕೆ ಮತ್ತು ಮಾತಿಗೆ ಹೆಚ್ಚಿನ ಗೌರವ ನೀಡುತ್ತಿದ್ದರು. ಸಹಜವಾಗಿ ಮಹಿಳೆಯರ ಪುರೋಗಾಮಿತ್ವದಲ್ಲಿ ಅವರ ಪಾತ್ರ ವೃದ್ಧಿಯಾಯಿತು. ಅವರೀಗ ಎ.ಐ.ಡಬ್ಲ್ಯು.ಸಿ.ಯ ಕಲಾಪಗಳಲ್ಲಿ ಆಸ್ಥೆಯಿಂದ ಭಾಗವಹಿಸುತ್ತಿದ್ದರು. ಪ್ರಧಾನ ಕಾರ್ಯದರ್ಶಿ ಸ್ಥಾನಕ್ಕೆ ಕಮಲಾ ದೇವಿಯವರ ಹೆಸರು ಸೂಚಿಸಬಹುದೆಂದು ಸರೋಜಿನಿ ನಾಯ್ಡು ತಿಳಿಸಿದರು. ಆದರೆ ಕಮಲಾ ದೇವಿ ಒಪ್ಪಲಿಲ್ಲ. ಅವರ ಮನವೊಲಿಸಲು ಪ್ರಯತ್ನವನ್ನು ಈ ಮೊದಲೇ ಗ್ರೆಟ್ಟಾ ನಡೆಸಿದ್ದರು. ಮೊದಲಿನಿಂದಲೂ ಕಮಲಾದೇವಿಗೆ ಸ್ವಯಂಸೇವಕಿಯಾಗಿ ಹಿಂದೆ ನಿಂತು ಕೆಲಸ ಮಾಡುವು ದರಲ್ಲಿ ಹೆಚ್ಚು ತೃಪ್ತಿ. ತಾನು ಕಾರ್ಯದರ್ಶಿ ಆಗುವುದಿಲ್ಲವೆಂದು ಅವರು ಗ್ರೆಟ್ಟಾಗೆ ತಿಳಿಸಿದ್ದರು.

ಈಗ ನಾದಿನಿ ಆಗ್ರಹ ಮಾಡಿದರೂ ಕಮಲಾದೇವಿ ಸಿದ್ಧರಾಗಲಿಲ್ಲ. ಸರೋಜಿನಿ ನಾಯ್ಡುಗೆ ಸಿಟ್ಟು ಬಂತು. "ಸಮಾಜಸೇವೆ ಮಾಡ್ತೀನಿ ಅಂತ ಹೇಳ್ತಾ ಇರ್ತಿಯಾ! ಈಗ ರಾಷ್ಟ್ರಮಟ್ಟದ ಈ ಒಳ್ಳೇ ಅವಕಾಶ ಪ್ರಾಪ್ತವಾಗಿದೆ, ಸುಮ್ಮನೆ ಆಯ್ತು ಅಂತ ಹೇಳಿಬಿಡು. ಗ್ರೆಟ್ಟಾ ನಿನಗೆ ಎಲ್ಲಾ ಕೆಲಸ ಕಲಿಸುತ್ತಾರೆ. ಯಾಕೆ, ಏನು? ಎನ್ನುವುದನ್ನು ಅವರು ಹೇಳ್ತಾ ಇರ್ತಾರೆ" ಇಷ್ಟು ಹೇಳಿ ಕಮಲಾದೇವಿಗೆ ಮತ್ತೆ ಮಾತನಾಡಲು ಅವಕಾಶ ಕೊಡದೆ ಸರೋಜಿನಿ ನಾಯ್ಡು ವೇದಿಕೆ ಹತ್ತಿದರು. ಸಭೆಗೆ, ಅಧ್ಯಕ್ಷರಿಗೆ ಆಭಾರವನ್ನು ತಿಳಿಸುತ್ತಾ, ಸಮ್ಮೇಳನದಲ್ಲಿ ಭಾಗವಹಿಸಿದ ಎಲ್ಲಾ ಸಭಾಸದ ಸಂಸ್ಥೆಗಳಿಗೆ ಕೃತಜ್ಞತೆ ಸಲ್ಲಿಸಿದರು. ಸರೋಜಿನಿ ನಾಯ್ಡು ಅವರ ಮಾತು ಸುಂದರವಾಗಿ, ಹಾಸ್ಯಮಯವಾಗಿ, ಮತ್ತು ಅಪೂರ್ವ ರೀತಿಯದ್ದಾಗಿ ಇರುತ್ತಿತ್ತು. ಅವರಿಗೆ ಜನರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳುವ ತಂತ್ರ ಚೆನ್ನಾಗಿ ಸಾಧಿಸಿತ್ತು. ಕೊನೆಯಲ್ಲಿ ಅವರು "ಈಗ ಒಬ್ಬ ಕರ್ತವ್ಯಶೀಲ ಪ್ರಧಾನ ಕಾರ್ಯದರ್ಶಿ ನಮಗೆ ಸಿಗಲಿದ್ದಾರೆ. ಒಂದು ರಾಜ್ಯದ ನಷ್ಟ ಇಡೀ ದೇಶದ ಲಾಭವಾಗಲಿದೆ" ಎಂದು ಹೇಳಿ, ಕಮಲಾದೇವಿಯ ಹೆಸರು ಸೂಚಿಸಿದರು. ಪ್ರಚಂಡ ಕರತಾಡನವಾಯಿತು. ಕಮಲಾದೇವಿ ಸರ್ವಾನುಮತದಿಂದ ಕಾರ್ಯದರ್ಶಿಯಾಗಿ ಆಯ್ಕೆಯಾದರು. ಅವರು ಮದ್ರಾಸ್ ಅಸೆಂಬ್ಲಿಗೆ ನಿಂತು ಸೋತದ್ದು, ಆ ರಾಜ್ಯದ ನಷ್ಟ! ಎಂದು ಪ್ರಾಸಂಗಿಕವಾಗಿ ಸರೋಜಿನಿ ನಾಯ್ಡು ಅವರು ಹೇಳಿದ್ದು ಇರಬಹುದು. ಆದರೆ ಈಗ ಕಮಲಾದೇವಿಗೆ ನಿಜವಾದ ರೀತಿಯಿಂದ ಮಹಿಳೆಯರ ಒಳಿತನ್ನು ಸಾಧಿಸುವುದಕ್ಕೆ ಅಖಿಲ ಭಾರತ ಮಹಿಳಾ ಅಧಿವೇಶನದಂತಹ ರಾಷ್ಟ್ರಮಟ್ಟದ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ರೂಪದಲ್ಲಿ ದಾರಿ ಕಾಣಿಸಿತು.

ಸರೋಜಿನಿ ನಾಯ್ಡು ಅವರು ತನ್ನ ಹೆಸರನ್ನು ಘೋಷಿಸಿದಾಗ ಹೆದರಿ ಸಪ್ಪೆಗೊಂಡ

ಕಮಲಾದೇವಿಯ ಮುಖ ನೋಡಿದ ಗ್ರೆಟ್ಟಾ ನಗುತ್ತಾ ಕುಳಿತುಕೊಂಡರು! ಇದು ಅವರದೇ ತಂತ್ರ ಎನ್ನುವುದರಲ್ಲಿ ಕಮಲಾದೇವಿಗೆ ಯಾವ ಸಂದೇಹವೂ ಉಳಿಯಲಿಲ್ಲ. ನಂತರ ಕಮಲಾದೇವಿಗೆ ಗ್ರೆಟ್ಟಾ ತುಂಬಾ ಧೈರ್ಯ ನೀಡಿದರು. "ನನಗೆ ನೀನು ಸಹಾಯಕಿಯಾಗಿ ಕೆಲಸ ಮಾಡುತ್ತೀಯಾ. ಪ್ರತಿಯೊಂದು ಕೆಲಸವನ್ನು ನಾನು ಹೇಳಿದಂತೆ ಮಾಡುತ್ತಿರು. ಏನಾದರೂ ತಿಳಿಯದಿದ್ದರೆ ಕೇಳು" ಎಂದಾಗ, ತಕ್ಷಣ ಪ್ರತಿಕ್ರಿಯಿಸಿದ ಕಮಲಾದೇವಿ, "ನಾನು ತಪ್ಪು ಮಾಡಿ ನಿಮಗೆ ಕೆಟ್ಟ ಹೆಸರು ಬಂದರೆ ಏನು ಮಾಡುವುದು?" ಎಂದು ಕೇಳಿಯೇಬಿಟ್ಟರು.

"ಅಂತಹ ದೊಡ್ಡ ತಪ್ಪುಗಳು ನಿನ್ನಿಂದ ನಡೆಯಲಾರವು" ಸಾಮಾಜಿಕ ಕಾರ್ಯದಲ್ಲಿ ಪಳಗಿದ ಗ್ರೆಟ್ಟಾ ತಿಳಿಸಿದರು. ಕಮಲಾದೇವಿ ತನ್ನ ಹೊಸ ಹೊಣೆಗೆ ಸಿದ್ಧರಾದರು. ಅವರಿಗೆ ಮಹಿಳೆಯರ ಸ್ಥಾನಮಾನ ಸುಧಾರಿಸುವ ಉದ್ದೇಶದ ವಾತಾವರಣ ಚಿಕ್ಕಂದಿನಿಂದಲೇ ಪರಿಚಿತವಾಗಿತ್ತು. ವಿದೇಶದಲ್ಲಿ ಸಮಾಜಸೇವಾ ವಿಷಯದಲ್ಲಿ ಡಿಪ್ಲೊಮಾ ಮಾಡುವ ಸಂದರ್ಭದಲ್ಲಿ ಅಲ್ಲಿನ ಮಹಿಳೆಯರ ಸಮಸ್ಯೆ ಮತ್ತು ಅದನ್ನು ಹೋಗಲಾಡಿಸಲು ಸರಕಾರ, ಸಂಘ ಸಂಸ್ಥೆಗಳ ಮೂಲಕ ನಡೆಯುವ ಕೆಲವು ಪ್ರಯತ್ನಗಳನ್ನು ಅವರು ನೋಡಿದ್ದರು. ಅವರ ಪ್ರಾಯೋಗಿಕ ತರಗತಿಗಳು ಲಂಡನ್ನಿನ ಈಸ್ಟ್ ಎಂಡ್‌ನ ಬಡವರ ವಸತಿಯಲ್ಲಿ ನಡೆಯುತ್ತಿದ್ದವು. ಜಗತ್ತಿನ ಎಲ್ಲಾ ಕಡೆಗಳಲ್ಲಿ ಮಹಿಳೆಯರ ಸ್ಥಿತಿಯು ಶೋಚನೀಯವಾಗಿ ಇದೆ ಎನ್ನುವ ತಿಳಿವಳಿಕೆ ಆಗ ಅವರಿಗೆ ಮನವರಿಕೆಯಾಗಿತ್ತು.

ಇಂಗ್ಲೆಂಡಿನಿಂದ ಮರಳಿ ಬಂದ ನಂತರ ಅವರು ಸೇವಾದಳದ ಸ್ವಯಂ ಸೇವಿಕೆಯಾಗಿ ಕೆಲಸ ಮಾಡಿದ್ದರು. ಕಾಂಗ್ರೆಸಿನ ಕಾರ್ಯಕರ್ತೆಯಾಗಿ ಕೂಡಾ ಅವರು ಸಕ್ರಿಯವಾಗಿದ್ದರು. ಪುಣೆಯ ವಾಸ್ತವ್ಯದಲ್ಲಿ ಸೇವಾಸದನದಂತಹ ಸಂಸ್ಥೆಯ ಕಾರ್ಯವಿಧಾನವನ್ನು ಹತ್ತಿರದಿಂದ ನೋಡಿದ್ದರು. ಈಗ ನವೀನ ಜವಾಬ್ದಾರಿಯನ್ನು ನಿಭಾಯಿಸಲು ಅವರು ಸಿದ್ಧರಾದರು.

ಕಮಲಾದೇವಿ ಶೀಘ್ರಲಿಪಿ ಮತ್ತು ಟೈಪಿಂಗ್ ಕಲಿತು, ದೇಶದಾದ್ಯಂತ ಹರಡಿಕೊಂಡಿದ್ದ ಬಹುತೇಕ ಮಹಿಳಾ ಸಂಸ್ಥೆಗಳೊಂದಿಗೆ ನಿಯಮಿತವಾಗಿ ಪತ್ರವ್ಯವಹಾರವನ್ನು ಪ್ರಾರಂಭಿಸಿದರು. ಹೆಚ್ಚಿನ ಪತ್ರಗಳಿಗೆ ಸ್ವತಃ ತಾನೇ ಪ್ರತಿಕ್ರಿಯಿಸುತ್ತಾ, ಮಹಿಳೆಯರು ಕೇಳುತ್ತಿದ್ದ ಪ್ರಶ್ನೆಗಳಿಗೆಲ್ಲಾ ಸಮರ್ಪಕವಾಗಿ ಉತ್ತರ ನೀಡುತ್ತಿದ್ದರು. ಬೇರೆ ಬೇರೆ ಪ್ರದೇಶಗಳ ಹೊಸ ಸಂಸ್ಥೆಗಳಾದರೆ ಸ್ವತಃ ಭೇಟಿ ನೀಡಿ, ಅವರಿಗೆ ಸೂಚನೆ ನೀಡಲಾರಂಭಿಸಿದರು. ಈ ಪ್ರವಾಸದ ಸಂದರ್ಭಗಳಲ್ಲಿ ಬೆರಳಚ್ಚು ಯಂತ್ರವನ್ನು ಜೊತೆಗೆ ತೆಗೆದುಕೊಂಡು ಹೋಗುತ್ತಿದ್ದರು. ಅವರ ಕೆಲಸವು ರೈಲು ನಿಂತ ಕಡೆಗಳಲ್ಲಿ ಅಥವಾ ವಿಶ್ರಾಂತಿ ಕೋಣೆಯಲ್ಲಿ ಮುಂದುವರಿಯುತ್ತಿತ್ತು.

ಈ ಪ್ರವಾಸ ಯೋಜನೆಯಿಂದ ಅವರಿಗೆ ಒಳ್ಳೇ ಲಾಭವಾಯಿತು. ಅವರನ್ನು ಭೇಟಿಯಾಗಲು ಬಹುತೇಕ ಸ್ಥಳೀಯ ಮಹಿಳೆಯರು ಬರಲು ಪ್ರಾರಂಭಿಸಿದರು. ಅವರು ಜಿಲ್ಲಾಮಟ್ಟದಲ್ಲಿ ಸಭೆ ನಡೆಸಿದರು. ಮಹಿಳೆಯರಿಗೆ ರೈಲು ಪ್ರಯಾಣ ದರದಲ್ಲಿ ರಿಯಾಯಿತಿ ದೊರೆಯುವ ವ್ಯವಸ್ಥೆ ಮಾಡಿದರು. ಇದರಿಂದ ಎಷ್ಟೋ ಮಹಿಳೆಯರಿಗೆ ಮನೆಯಿಂದ ಹೊರಗೆ ಬರಲು ಸದವಕಾಶವಾಯಿತು. ತಮ್ಮ ಸಮಸ್ಯೆಗೆ ಗಮನ ನೀಡುವವರಿದ್ದಾರೆ ಎನ್ನುವ ತಿಳಿವಳಿಕೆಯಿಂದ ಹೊಸದಾಗಿ ಸ್ಥಳೀಯ ಸಂಘಟನಾ ಕಾರ್ಯದಲ್ಲಿ ತೊಡಗಿಸಿಕೊಳ್ಳಲು ಅವರಿಗೆ ಆತ್ಮವಿಶ್ವಾಸ ದೊರೆಯಿತು !

ಕಡಿಮೆ ವರಮಾನದ, ದೊಡ್ಡ ಜವಾಬ್ದಾರಿ ಇರುವ ಮನೆತನದ ಬಹಳಷ್ಟು ಮಹಿಳೆಯರನ್ನು ಭೇಟಿಯಾಗುವ ಅವಕಾಶ ಕಮಲಾದೇವಿಗೆ ದೊರೆಯುತ್ತಿತ್ತು. ಪುರುಷರು ಮತ್ತು ಮಕ್ಕಳಿಗೆ ವಿಶೇಷ ಗಮನ ನೀಡಿದರೂ, ತನಗೆ ಮಾತ್ರ ಹೊಟ್ಟೆತುಂಬಾ ಊಟ

ದೊರೆಯದ ಅನೇಕ ಮಹಿಳೆಯರು ಕಾಣಸಿಗುತ್ತಿದ್ದರು. ನಾಲ್ಕು ಅವಧಿಯ ಕಾರಾಗೃಹ ವಾಸದಲ್ಲಿ ಪಾತಕಿ ಎಂದು ಕರೆಯಿಸಿಕೊಳ್ಳುತ್ತಿದ್ದ ಮಹಿಳೆಯರ ಸ್ಥಿತಿಗತಿಯನ್ನು ಅವರು ಕಂಡಿದ್ದರು. ಆದರೂ, ಮನೆಯಲ್ಲಿನ ಸಂಕಷ್ಟಕ್ಕಿಂತ ಜೈಲಿನ ಬದುಕು ಮೇಲು! ಎಂದು ಹೇಳುವ ಮಹಿಳೆಯರು ಕೂಡಾ ಇದ್ದರು!

ದೇಶದಲ್ಲಿ ಪ್ರಪ್ರಥಮ ಬಾರಿ ಮಹಿಳಾ ಕಾರ್ಮಿಕರ ಸಂಘಟನೆಯನ್ನು ಮಾಡಿದ ಶ್ರೇಯಸ್ಸು ಕಮಲಾದೇವಿಗೆ ಸಲ್ಲುತ್ತದೆ. ಮದ್ರಾಸ್ ಪ್ರಾಂತ್ಯದಲ್ಲಿ ಬಹಳಷ್ಟು ಸಂಖ್ಯೆಯ ಗಿರಣಿಗಳು, ಕಾರ್ಖಾನೆಗಳು ಇದ್ದವು. ಅಲ್ಲಿ ಕೆಲಸ ಮಾಡಿಕೊಂಡಿದ್ದ ಮಹಿಳೆಯರಿಗೆ ಹೆರಿಗೆ ರಜೆ ಇರಲಿಲ್ಲ. ಮೊದಲೇ ಬಡತನ, ಕಡಿಮೆ ವೇತನ. ಈ ರೀತಿ ದೀರ್ಘ ರಜೆ ತೆಗೆದುಕೊಂಡರೆಂದರೆ ಅದು ವೇತನರಹಿತ ರಜೆಯೇ ಆಗಿರುತ್ತಿತ್ತು. ಈ ಪ್ರಸೂತಿ ರಜೆಯ ಮೇಲೆ ಹೆಚ್ಚಿನ ಒತ್ತು ನೀಡಿ, ಮಹಿಳೆಯರ ಸಂಘಟನೆಯನ್ನು ಮಾಡಿದ ಕಮಲಾದೇವಿ, ಹಕ್ಕಿನ ಬೇಡಿಕೆಗಳನ್ನು ಮುಂದಿಟ್ಟರು. ಬೇಡಿಕೆ ಇಟ್ಟವರನ್ನು ಕೆಲಸದಿಂದ ತೆಗೆದುಬಿಡುವುದಾಗಿ ಮಾಲಿಕರು ಬೆದರಿಕೆಯೊಡ್ಡಿದರು. ಗ್ರೆಟ್ಟಾ ಮತ್ತು ಕಮಲಾದೇವಿ ಜೊತೆಗೂಡಿ ಮಹಿಳಾ ಪರಿಷತ್ತಿನ(ಎ.ಐ. ಡಬ್ಲ್ಯು.ಸಿ.) ವತಿಯಿಂದ ಚಳವಳಿ ಪ್ರಾರಂಭಿಸಿದರು. ಚಳವಳಿ ಉಗ್ರರೂಪ ತಾಳುವ ಲಕ್ಷಣ ಕಂಡುಬಂದದ್ದರಿಂದ ಮಾಲಿಕರು ಬಗ್ಗಲೇ ಬೇಕಾಯಿತು. ಹೆರಿಗೆ ರಜೆ ಜಾರಿಗೆ ಬಂತು.

ಈ ಸುದ್ದಿ ಮಧುರೆಯ ಗಿರಣಿ ಮಾಲಿಕರನ್ನು ತಲುಪಿತು. ತಮಿಳುನಾಡಿನ ಮಧುರೆಯಲ್ಲಿದ್ದ ದೊಡ್ಡ ಬಟ್ಟೆಗಿರಣಿಯಲ್ಲಿ 3000 ಕಾರ್ಮಿಕರಿದ್ದರು. ಅಲ್ಲಿ ಕಾರ್ಮಿಕ ಸಂಘವಿತ್ತು, ಕಾರ್ಮಿಕ ಮಹಿಳೆಯರು ಕೂಡಾ ಇದ್ದರು. "ನೀವು ಸವಲತ್ತುಗಳನ್ನು ಕೇಳಿದರೆ, ಮಾಲಿಕರು ಕಾರ್ಮಿಕ ಸಂಘವನ್ನೇ ಮುಚ್ಚಿಬಿಡುತ್ತಾರೆ" ಎಂಬ ಬೆದರಿಕೆ ಬಂತು. ಕಮಲಾದೇವಿ ಯವರು ಕಾರ್ಮಿಕರ ಪತ್ನಿಯರನ್ನು ಸಂಘಟಿಸಿದರು. "ನೀವೇನಾದರೂ ಕಾರ್ಮಿಕ ಸಂಘವನ್ನು ಮುಚ್ಚಲು ಒಪ್ಪಿಕೊಂಡರೆ, ನಾವು ಮನೆಯ ಕೆಲಸ, ಅಡುಗೆ ಮತ್ತು ಗಿರಣಿ ಕೆಲಸ ಎಲ್ಲವನ್ನೂ ಬಿಟ್ಟು ಮುಷ್ಕರ ಹೂಡುತ್ತೇವೆ" ಎಂದು ಮಹಿಳಾ ವರ್ಗದವರು ಒಟ್ಟಾಗಿ ಗಂಡಸರಿಗೆ ಮತ್ತು ಮಾಲೀಕ ವರ್ಗದವರಿಗೆ ಬೆದರಿಕೆ ಹಾಕಿದರು! ಮಾಲೀಕರು ಹೆದರಿ ಕೊಂಡರು. ಮೊದಲಿದ್ದುದಕ್ಕಿಂತ ಹೆಚ್ಚಿನ ಸೌಲಭ್ಯಗಳನ್ನು ನೀಡಿದರು.

ಮಂಗಳೂರು ಜಿಲ್ಲೆಯಲ್ಲಿ ಸಾರಿಗೆ ಕಾರ್ಮಿಕರ ಸಂಘಟನೆಯನ್ನು ಕಮಲಾದೇವಿ ಕಟ್ಟಿದರು.

ಮಹಿಳೆಯರಿಗೆ ಎ.ಐ. ಡಬ್ಲ್ಯು.ಸಿ ಅಥವಾ ಅಖಿಲಭಾರತ ಮಹಿಳಾ ಪರಿಷತ್ತು ಕೊಡಿಸಿದ ಶಾಶ್ವತ ಕೊಡುಗೆ ಎಂದರೆ ಪ್ರಸೂತಿ ಮತ್ತು ಅನಾರೋಗ್ಯ ರಜೆಯ ಸೌಕರ್ಯವಾಗಿದೆ. ಈ ಸೌಕರ್ಯವು ಪ್ಲಾಂಟೇಶನ್ (ರಬ್ಬರ್, ಚಹ ತೋಟಗಳು) ಮತ್ತು ಗಣಿಗಳಲ್ಲಿ ಕೆಲಸ ಮಾಡುವ ಮಹಿಳೆಯರಿಗೆ ಕೂಡಾ ಅನ್ವಯಿಸುವಂತೆ ಕಮಲಾದೇವಿ ನೋಡಿಕೊಂಡರು. ಇದಕ್ಕಾಗಿ ಅಸ್ಸಾಂ ಮತ್ತು ಬಂಗಾಲಕ್ಕೆ ಕೂಡಾ ಅವರು ಭೇಟಿ ನೀಡಿದರು. ಆಳಕಣಿವೆಯಲ್ಲಿ ಮಹಿಳೆಯರನ್ನು ಕಳುಹಿಸುವಂತಿಲ್ಲ ಎಂಬ ಷರತ್ತನ್ನು ಹಾಕಿದರು. ಅದು ಸ್ವೀಕೃತವಾಯಿತು.

ಗೋಡಂಬಿ 1930ರಿಂದ ವಿದೇಶಕ್ಕೆ ರಫ್ತಾಗುತ್ತಿತ್ತು. ಗೋಡಂಬಿಯನ್ನು ಯಂತ್ರದಿಂದ ಸುಲಿಯುವ ಕ್ರಮ ಭಾರತದಲ್ಲಿ ಪ್ರಾರಂಭವಾಗಿರಲಿಲ್ಲ. ಚಾಕು ಬಳಸಲು ಕೂಡಾ ಅವಕಾಶ ವಿರಲಿಲ್ಲ. ವಿದೇಶಕ್ಕೆ ಕಳುಹಿಸುವ ಗೋಡಂಬಿ ಬೀಜ ಒಡೆದರೆ ನಷ್ಟವಾಗುತ್ತದೆ! ಎಂಬ ಅಂಶ ಮುಖ್ಯವಾಗಿದ್ದುದರಿಂದ ಮಹಿಳೆಯರು ಬಹಳ ನಾಜೂಕಿನಿಂದ ಅದನ್ನು ಸುಲಿಯಬೇಕಿತ್ತು. ಟನ್‌ಗಟ್ಟಳೆ ಗೋಡಂಬಿಯನ್ನು ಸುಲಿಯುವ ಕಾರ್ಯ ಅತ್ಯಂತ ಕಠಿಣವಾಗಿದ್ದು ಅವರ

ಬೆರಳಿಗೆ ಊತ ಬರುತ್ತಿತ್ತು. ಮಂಗಳೂರು ಗೋಡಂಬಿಯ ಕೇಂದ್ರವಾಗಿತ್ತು. ಕಮಲಾದೇವಿಯವರು ಮಹಿಳಾ ಕಾರ್ಮಿಕರನ್ನು ಸಂಘಟಿಸಿ, ಈ ಅನ್ಯಾಯ ಪದ್ಧತಿಯ ವಿರುದ್ಧ ಹರತಾಳ ಮಾಡಿದರು. ಚಾಕು ಬಳಸಲು ಅನುಮತಿ ದೊರೆಯಿತು!

ಅಖಿಲಭಾರತ ಮಹಿಳಾ ಪರಿಷತ್ತು ರಾಷ್ಟ್ರಮಟ್ಟದಲ್ಲಿ ಮಹಿಳೆಯರ ಸಮಸ್ಯೆಯನ್ನು ದೂರ ಮಾಡುವ ಪ್ರಯತ್ನದಲ್ಲಿ ಸಕ್ರಿಯವಾಗಿ ಪಾಲುಗೊಳ್ಳುತ್ತಿತ್ತು. ಬಾಲ್ಯವಿವಾಹವನ್ನು ತಪ್ಪಿಸುವ ಮಸೂದೆ ಹರಿವಿಲಾಸ ಸಾರ್ದ ಆಕ್ಟ್ (ನಮ್ಮಲ್ಲಿ ಇದನ್ನು ಶಾರದಾ ಆಕ್ಟ್ ಎಂದು ಗುರುತಿಸುತ್ತಾರೆ). ಹುಡುಗಿಯರಿಗೆ ಹದಿನಾಲ್ಕು ವರ್ಷ ಪೂರ್ಣವಾಗುವವರೆಗೆ ಮದುವೆ ಮಾಡುವಂತಿಲ್ಲ ಎನ್ನುವ ಈ ಮಸೂದೆಯ ಉದ್ದೇಶ ಮಹತ್ವಪೂರ್ಣವಾಗಿತ್ತು. ಈ ಮಸೂದೆ ಸಂಸತ್ತಿನಲ್ಲಿ ಪ್ರಸ್ತಾಪವಾಗುವುದರಲ್ಲಿತ್ತು. ಕಮಲಾದೇವಿ ಎಲ್ಲಾ ರಾಜಕಾರಣಿಗಳನ್ನು ಭೇಟಿಯಾಗಿ ಅವರ ಬೆಂಬಲವನ್ನು ಒಟ್ಟು ಸೇರಿಸುತ್ತಾ ಬಂದರು. ಲಾಲಾ ಲಜಪತ್‌ರಾಯ್, ಎಂ. ಆರ್. ಜಯಕರ, ಜಿನ್ನಾ ಇದ್ದರು. ಎಲ್ಲರೂ ಮನಃಪೂರ್ವಕ ಸಹಮತವನ್ನು ನೀಡಿದರು. ಒಂದು ದಿನ ಅವರು ಮೋತಿಲಾಲ ನೆಹರೂ ಬಳಿ ತೆರಳಿದರು. ಆ ದಿನಗಳಲ್ಲಿ ಮಗ ಜವಾಹರಲಾಲ್ ನೆಹರೂ ಅವರಿಗಿಂತ ಮೋತಿಲಾಲ್ ನೆಹರೂ ಅವರ ಪ್ರತಿಷ್ಠೆ ಮತ್ತು ಗೌರವ ಎತ್ತರದಲ್ಲಿ ಇತ್ತು! ಅವರೊಡನೆ ಮಾತನಾಡಲು ಎಲ್ಲರೂ ಹೆದರುತ್ತಿದ್ದರು. ಕಮಲಾದೇವಿ ಎಲ್ಲರ ಬಳಿ ಹೋದ ಹಾಗೆ ಅವರನ್ನು ಸಮೀಪಿಸಿ ಅವರ ಸಹಮತವನ್ನು ಕೇಳಿದರು. ಕಮಲಾದೇವಿಯನ್ನು ಮೇಲಿನಿಂದ ಕೆಳಗಿನವರೆಗೆ ನೋಡಿದ ಮೋತಿಲಾಲ ನೆಹರೂ ಹೇಳಿದರು, "ಈ ವಿಚಾರದಲ್ಲಿ ಒಂದು ಪುಟ್ಟ ಕೋಳಿಮರಿಯ ಅಭಿಪ್ರಾಯವನ್ನು ನಾವು ಗಂಭೀರ ರೀತಿಯಲ್ಲಿ ತೆಗೆದುಕೊಳ್ಳಬೇಕೇನು ?"

ಕಮಲಾದೇವಿ ಒಂದು ಕ್ಷಣ ದಿಙ್ಮೂಢರಾದರು! ತಕ್ಷಣ ಧೈರ್ಯ ತಂದುಕೊಂಡು, "ನಿಮಗೆ ಬಿಡುವು ಇದ್ದರೆ ವಯಸ್ಸಾದವರು, ಸೊಂಟ ಬಗ್ಗಿದವರು, ಬಿಳಿಕೂದಲಿನವರು, ಹೀಗೆ ಮಹಿಳೆಯರ ದೊಡ್ಡ ಗುಂಪನ್ನೇ ತಂದು ನಿಮ್ಮ ಮುಂದೆ ನಿಲ್ಲಿಸುತ್ತೇನೆ!" ಇಷ್ಟು ಹೇಳಿ ಉತ್ತರಕ್ಕೆ ಕಾಯದೆ ತಕ್ಷಣ ತಿರುಗಿ ಹೆಜ್ಜೆ ಇಟ್ಟರು. ಮೋತಿಲಾಲರ ದೊಡ್ಡ ನಗೆಯಿಂದ ಅವರ ಕಚೇರಿ ತುಂಬಿಹೋಯಿತು! "ಬೇಡ ಮೇಡಂ, ಬೇಡ. ಈ ವಿಚಾರದಲ್ಲಿ ಅವರ ಮನವಿಯನ್ನು ನಿಮ್ಮೊಂದಿಗೆ ಒಪ್ಪಿಕೊಳ್ಳುತ್ತೇನೆ!" ನಗುತ್ತಾ ಮೋತಿಲಾಲ ನೆಹರು ಹೇಳಿದರು. ಅವರು ಮಸೂದೆ ಜಾರಿಗೊಳ್ಳಲು ಸಂಪೂರ್ಣ ಸಹಕಾರ ನೀಡುವ ಭರವಸೆಯನ್ನು ನೀಡಿದರು. ಇಷ್ಟೇ ಅಲ್ಲ! ಅಲಹಾಬಾದಿನ ತಮ್ಮ ಸ್ವಂತ ಮನೆ ಆನಂದಭವನಕ್ಕೆ ಬರುವಂತೆ ಕಮಲಾದೇವಿಗೆ ವೈಯಕ್ತಿಕ ಆಮಂತ್ರಣ ನೀಡಿದರು. ಕಮಲಾದೇವಿ ಅಲ್ಲಿಯೂ ತಲುಪಿದರು. ಅವರ ಕುಟುಂಬಕ್ಕೆ ನಿಕಟವರ್ತಿಯಾದರು. ಮೂರು ದಿನ ಅವರ ಅತಿಥಿಯಾಗಿದ್ದಾಗ ತಂದೆ ಮತ್ತು ಮಗನ ಪ್ರತಿಭೆಯ ಪರಿಚಯ ಅವರಿಗಾಯಿತು. ಮುಂಜಾನೆ ಉಪಹಾರದ ಮೇಜಿನ ಮೇಲೆ ಅವರ ವಾದ, ತರ್ಕ, ಚರ್ಚೆ ನಡೆಯುತ್ತಿದ್ದವು. ಮೋತಿಲಾಲ ನೆಹರೂ ಅವರು "ಈಕೆ ಅಪಾಯಕಾರಿ ಹೆಂಗಸು ಕಮಲಾದೇವಿಯಂತ. ನಮಗೆ ಮಸೂದೆ ಜಾರಿಗೆ ತರಲು ಬ್ಲಾಕ್‌ಮೇಲ್ ಮಾಡಲು ಬಂದಿದ್ದಾಳೆ!" ಎಂದು ಎರಡು ಮೂರು ಬಾರಿ ತಮ್ಮ ಸ್ನೇಹಿತರಿಗೆ ವಿನೋದದಿಂದ ಅವರನ್ನು ಪರಿಚಯಿಸಿದ್ದರು.

ಕಮಲಾದೇವಿ ತನ್ನ ಯುರೋಪು ಪ್ರವಾಸದಲ್ಲಿ ಆಗಿನ ಪ್ರಸಿದ್ಧ ಸಮಾಜಸೇವಿಕೆಯರನ್ನು ಭೇಟಿಯಾಗಿದ್ದರು. ಜೇನ್ ಆಡಮ್ಸ್ (1860-1935) ಅಮೇರಿಕೆಯಲ್ಲಿ ದೊಡ್ಡ ಹೆಸರು. ಅವರು ಸಹಕಾರಿ ರೂಪದಲ್ಲಿ ಮಹಿಳೆಯರು ಮತ್ತು ಮಕ್ಕಳಿಗೆ ಅತ್ಯಂತ ಅಗತ್ಯವಿರುವ ಶಿಕ್ಷಣ

ಮತ್ತು ವೈದ್ಯಕೀಯ ಸಹಾಯ ಸಿಗುವಂತೆ ಮಾಡಿದ್ದರು. ಅವರು ಅಮೇರಿಕೆಗೆ ಬರುವ ಬೇರೆ ದೇಶದ ನಿರಾಶ್ರಿತರಿಗೆ ದೊಡ್ಡ ಪ್ರಮಾಣದಲ್ಲಿ ನೆರವಾಗುತ್ತಿದ್ದರು. ಪ್ರೀತಿ, ದಯೆ, ಮತ್ತು ಶಾಂತಿಯಿಂದ ಮಾತ್ರ ಲೋಕಕಲ್ಯಾಣ ಸಾಧ್ಯ ಎಂಬುದು ಅವರ ನಂಬಿಕೆಯಾಗಿತ್ತು. ಮೊದಲ ನೋಬೆಲ್ ಪ್ರಶಸ್ತಿ ಪಡೆದ ಅಮೇರಿಕನ್ ಮಹಿಳೆ ಈಕೆ. ಅವರ ಅಭಿಪ್ರಾಯ ಗಾಂಧಿ ತತ್ವಕ್ಕೆ ಅತೀಸಮೀಪದ ರೀತಿಯದ್ದಾಗಿತ್ತು. ಅವರು ಗಾಂಧಿ ತತ್ವದ ಕುರಿತು ಕಮಲಾದೇವಿಯಿಂದ ಹೆಚ್ಚಿನ ಮಾಹಿತಿಯನ್ನು ಪಡೆದುಕೊಂಡರು. ಈ ಮಹಿಳೆಯ ಅಹಿಂಸಾತ್ಮಕ, ಶಾಂತಿಪರ ಹೋರಾಟಕ್ಕೆ ಜೊತೆ ನೀಡುವವರು ಅವರ ದೇಶದಲ್ಲಿ ಯಾರೂ ಇಲ್ಲ, ಆದರೆ ನಮ್ಮ ದೇಶದಲ್ಲಿ ಗಾಂಧೀಜಿಯ ಮಾತಿಗೆ ಗೌರವ ನೀಡುವ ಮಂದಿ ಲಕ್ಷಗಟ್ಟಳೆ ಇದ್ದಾರೆ ಎನ್ನುವ ವಿಚಾರ ಕಮಲಾದೇವಿಯ ಮನಸ್ಸಿಗೆ ಸ್ಪಷ್ಟವಾಯಿತು.

ಇಡೀ ಜಗತ್ತಿನಲ್ಲಿ ಬಾಲ್ಯಶಿಕ್ಷಣದಲ್ಲಿ ಪ್ರಸಿದ್ಧರಾದವರು ಮಾರಿಯಾ ಮೊಂಟೆಸರಿ(1872–1952). ಕುಟುಂಬ ಯೋಜನೆಯೆಂಬ ವಿಚಾರವನ್ನು ಮೊದಲ ಬಾರಿ ಪ್ರಚಾರಕ್ಕೆ ತಂದವರು ಮಾರ್ಗರೇಟ್ ಸ್ಯಾಂಗರ್ (1883–1966). ಇವರನ್ನು ಕಮಲಾದೇವಿ ಸ್ವತಃ ಭೇಟಿಯಾಗಿದ್ದಾರೆ. ಇವರ ಜೊತೆ ಮಾತನಾಡಿ ಇವರ ವಿಚಾರಗಳನ್ನು ತಿಳಿದುಕೊಂಡದ್ದನ್ನು ತಮ್ಮ ಆತ್ಮಚರಿತ್ರೆಯಲ್ಲಿ ಅವರು ಹೇಳಿಕೊಂಡಿದ್ದಾರೆ. ಇದೇ ವೇಳೆ, ಭಾರತದಲ್ಲಿ ಕೂಡಾ ಕುಟುಂಬ ಯೋಜನೆ ಪ್ರಾಥಮಿಕ ರೂಪದಲ್ಲಿ ಕಾಣಿಸಿಕೊಳ್ಳತೊಡಗಿತ್ತು. ಈ ಕುರಿತು ಮಾತನಾಡುವುದು ನಿಷಿದ್ಧವಿದ್ದ ದಿನಗಳಲ್ಲಿ ಮಹಿಳಾ ಪರಿಷತ್ತಿನ ವತಿಯಿಂದ ಇದಕ್ಕೆ ಸೌಮ್ಯರೂಪದ ಪ್ರಚೋದನೆಯನ್ನು ಕಮಲಾದೇವಿ ನೀಡಿದ್ದರು. ಮಹಿಳೆಗೆ ತನ್ನ ದೇಹದ ಮೇಲೆ ಹಕ್ಕು ಇರುವ ಹಾಗೆ, ಕುಟುಂಬಕ್ಕೆ ಎಷ್ಟು ಮಕ್ಕಳು ಬೇಕು ? ಎಂಬ ನಿರ್ಧಾರ ಕೈಗೊಳ್ಳುವ ಹಕ್ಕು ಕೂಡಾ ಅವಳಿಗೆ ಇರುತ್ತದೆ! ಎಂದು ಸ್ಪಷ್ಟವಾಗಿ ಅವರು ಹೇಳುತ್ತಿದ್ದರು. ಮುಂಬೈ ಪ್ರಾಂತದಲ್ಲಿ ಇದನ್ನು ಪ್ರಚುರಪಡಿಸುತ್ತಿದ್ದವರು ಶಕುಂತಲಾ ಪರಾಂಜಪೆ. ಜಗತ್ತಿನ ಬೇರೆ ಬೇರೆ ದೇಶಗಳ ಮಹಿಳೆಯರ ಸ್ಥಾನಮಾನವನ್ನು ಅವರು ಹತ್ತಿರದಿಂದ ನೋಡಿದ ಕಾರಣವಾಗಿ, ತನ್ನ ದೇಶದ ಮಹಿಳೆಯರಿಗಾಗಿ ತಾನು ಏನು ಮಾಡಬಲ್ಲೆ ? ಎಂದು ತೌಲನಿಕವಾಗಿ ಆಲೋಚಿಸಿ ಅವರು ಕೆಲಸ ಮಾಡುತ್ತಿದ್ದರು. ಅವರ ಮಹಿಳೆಯರ ಕುರಿತಾದ ಪ್ರಗತಿಪರ ವಿಚಾರಗಳು ಪ್ರಚಾರಕ್ಕೆ ಬರಲು ಅಖಿಲಭಾರತ ಮಹಿಳಾ ಪರಿಷತ್ತಿನ ವತಿಯಿಂದ ಸಹಾಯ ದೊರೆಯಿತು.

ಬರೋಡಾ ಮಹಾರಾಣಿಯವರ ಅವಧಿ ಮುಗಿಯುತ್ತಿದ್ದಂತೆ ಭೋಪಾಲದ ಬೇಗಂ ಅವರನ್ನು ಅಖಿಲ ಭಾರತ ಮಹಿಳಾ ಪರಿಷತ್ತಿನ ಅಧ್ಯಕ್ಷರಾಗುವಂತೆ ವಿನಂತಿಸಿಕೊಳ್ಳಲು ಕಮಲಾದೇವಿ ಭೋಪಾಲಕ್ಕೆ ತೆರಳಿದರು. ಬೇಗಂ ಅವರು ಮಹಿಳೆಯರ ಪ್ರಗತಿಗೆ, ವಿಶೇಷವಾಗಿ ಮಹಿಳಾ ಶಿಕ್ಷಣಕ್ಕೆ ಹೆಚ್ಚಿನ ಗಮನವನ್ನು ನೀಡುತ್ತಿದ್ದವರು. ಅವರು ಅಧ್ಯಕ್ಷರಾಗಲು ಒಪ್ಪಿಗೆ ನೀಡಿದರು. ಆದರೆ ಸಮಾವೇಶ ಸಾರ್ವಜನಿಕ ಕಾರ್ಯಕ್ರಮವಾದ್ದರಿಂದ ತಾನು ಬುರ್ಕಾ ಹಾಕಿಕೊಂಡೇ ಬರುವವಳಿದ್ದೇನೆ ಎಂದು ಅವರು ಸ್ಪಷ್ಟವಾಗಿ ಹೇಳಿದರು !

ಕಮಲಾದೇವಿಗೆ ಆಘಾತವಾಯಿತು ! ಮಹಿಳೆಯರನ್ನು ಪರದೆಯಿಂದ, ಬುರ್ಕಾದಿಂದ ಹೊರಗೆ ತರುವ ಉದ್ದೇಶವನ್ನೇ ಪ್ರಥಮವಾಗಿ ಸ್ವೀಕರಿಸಿದ ಸಂಸ್ಥೆ ಎ.ಐ.ಡಬ್ಲ್ಯು.ಸಿ ! ಕಮಲಾದೇವಿಯವರು ಅವರ ಷರತ್ತನ್ನು ಸ್ವೀಕರಿಸಿದರು. ಬೇಗಂ ಅವರ ಪ್ರೀತಿಯ ವಿಷಯವಾದ ಸ್ತ್ರೀ ಶಿಕ್ಷಣಕ್ಕೆ ಪರಿಷತ್ತು ನೀಡಿದ ಮಹತ್ವವನ್ನು ಅವರಿಗೆ ಪರಿಚಯಿಸಿದರು. ಬೇಗಂ ಸಾಹೇಬ್ ಅವರು ಅಧಿವೇಶನದ ಎಲ್ಲಾ ಗೋಷ್ಠಿಗಳಲ್ಲಿ ಆಸಕ್ತಿಯಿಂದ ಪಾಲುಗೊಂಡರು. ಮಹಿಳೆಯರ ಶಿಕ್ಷಣ ಪದ್ಧತಿಯಲ್ಲಿ ಬೇರೆ ಬೇರೆ ಕಲಾಪ್ರಕಾರವನ್ನು ಸೇರಿಸ

ಬೇಕೆಂಬ ಪ್ರಸ್ತಾಪ ಬಂದಾಗ, ನೃತ್ಯವೂ ಇರಬೇಕೆಂಬ ಮಾತು ಕೇಳಿದ ಬೇಗಂ ಕೆರಳಿದರು. 'ನಾನು ಅಧ್ಯಕ್ಷಳಾಗಿರುವ ಸಭೆಯಲ್ಲಿ ನೃತ್ಯದ ಕುರಿತು ಯಾವುದೇ ಚರ್ಚೆಗೆ ಆಸ್ಪದ ನೀಡುವುದಿಲ್ಲ!' ಎಂದು ಅವರು ಘೋಷಿಸಿದರು. ಸೂಚನೆ ಮಂಡಿಸಿದ್ದ ಬೆಂಗಳೂರಿನ ಮಹಿಳಾ ಕಾಲೇಜಿನ ಪ್ರಾಂಶುಪಾಲೆ ಜೇಮಾ ಲಾಜರ್ಸನ್ ಅವರು ತಲೆಯಾಡಿಸಿ 'ಸರಿ' ಎಂದು ಹೇಳಿದರು. ಸಂಗೀತವನ್ನು ಅಳವಡಿಸಲು ಅಡ್ಡಿ ಇಲ್ಲವೆಂದು ಹೇಳಿದಾಗ, ಸಂಗೀತದಂತಹ ಕಲಾ ವಿಧಾನವೆಂದು ಹೇಳಿ, 'ಡ್ಯಾನ್ಸ್' ಎಂಬ ಪದವನ್ನು ಬಳಸದೆ, ನೃತ್ಯಾಭಿನಯಕ್ಕೆ ಅನುಮೋದನೆ ದೊರೆಯುವಂತೆ ಮಾಡಿದರು. ಸಂದೇಶ ಗಮನವಿಟ್ಟು ಕೇಳಿದವರಿಗೆ, ನೋಡಿದವರಿಗೆ ಮಾತ್ರ ತಲುಪಿತು! ಆ ಮಹಿಳೆಯರು ನಗು ತಡೆದು ಕೊಂಡರು. ಬೇಗಂ ಸಾಹೇಬರ ಗಮನಕ್ಕೆ ಬರುವ ಮೊದಲೇ ಠರಾವು ಒಪ್ಪಿಗೆ ಪಡೆಯಿತು!

ಆಮೇಲಿನ ಅಧಿವೇಶನದ ಅಧ್ಯಕ್ಷರಾದವರು ಮಂಡಿ ಪ್ರಾಂತದ ರಾಣಿ. ಕಮಲಾದೇವಿ ಯವರು ಸ್ವತಃ ಭೇಟಿಯಾಗಿ ನೀಡಿದ ಆಮಂತ್ರಣಕ್ಕೆ ಅವರು ಒಪ್ಪಿಕೊಂಡರು. ಇಷ್ಟೇ ಅಲ್ಲ, ಅವರ ಸೀಮಿತ ನಿಧಿಯಿಂದಲೇ ಪರಿಷತ್ತಿಗೆ ದೊಡ್ಡ ದೇಣಿಗೆ ನೀಡಿದರು.

ಮಹಿಳೆಯರಿಗೆ ಸರ್ವೋಪಯೋಗಿಯಾಗಿದ್ದ ಒಂದು ಪ್ರತ್ಯೇಕ ಗೃಹವಿಜ್ಞಾನ ಕಾಲೇಜು ದೇಶದಲ್ಲಿ ಇರಲಿಲ್ಲ. ಕಮಲಾದೇವಿಯವರು ಪರಿಷತ್ತಿನ ವತಿಯಿಂದ ಸರಕಾರದ ಮೇಲೆ ಮತ್ತೆ ಮತ್ತೆ ಒತ್ತಾಯ ತಂದರು. ಸರಕಾರ ಒಂದು ಸಮಿತಿಯನ್ನು ನೇಮಿಸಿತು. ವೈಸರಾಯಿಣಿ ಲೇಡಿ ಇರ್ವಿನ್‌ರಿಗೆ ಈ ಕುರಿತು ವಿಶೇಷ ಆಸಕ್ತಿ ಇತ್ತು. ಆದ್ದರಿಂದ ಲೇಡಿ ಇರ್ವಿನ್ ಕಾಲೇಜು ಅಸ್ತಿತ್ವಕ್ಕೆ ಬಂತು. ನ್ಯೂಜಿಲ್ಯಾಂಡಿನ ಒಬ್ಬ ತಜ್ಞ ಮಹಿಳೆಯನ್ನು ಆಮಂತ್ರಿಸಲಾಯಿತು. ಅವರು 4–5 ಮಂದಿ ಭಾರತೀಯರಿಗೆ ತರಬೇತಿ ನೀಡಿದರು. ಸರಕಾರಕ್ಕೆ ಪರಿಷತ್ತಿನ ಸಲಹೆ–ಸೂಚನೆ ಬೇಡವಿತ್ತು. 'ನಾವು ಮಹಿಳೆಯರಿಗಾಗಿ ಪ್ರತಿ ರಾಜ್ಯದಲ್ಲಿ ಒಂದೊಂದು ಪಾಲಿಟೆಕ್ನಿಕ್ ಪ್ರಾರಂಭಿಸುತ್ತೇವೆ' ಎಂದು ಸರಕಾರ ಆಶ್ವಾಸನೆ ನೀಡಿತು.

ಆಶ್ವಾಸನೆ ಕಾಗದದಲ್ಲಿ ಮಾತ್ರ ಉಳಿಯಿತು! ಆದರೆ ಲೇಡಿ ಇರ್ವಿನ್ ಕಾಲೇಜು ಮಾತ್ರ 75 ವರ್ಷಗಳಿಂದ ಉತ್ತಮ ರೀತಿಯಿಂದ ನಡೆದು ಬಂದಿರುವ ಸಂಸ್ಥೆಯಾಗಿದೆ.

ಪರಿಷತ್ತಿನ ಸ್ಥಾನ ಒಮ್ಮೆ ಸ್ಥಿರಗೊಂಡ ನಂತರ, ಮಹಾರಾಣಿ, ಗವರ್ನರರ ಪತ್ನಿಯರು ಇಂತಹವರನ್ನು ಅಧ್ಯಕ್ಷರಾಗಿ ಕರೆಯಿಸಿಕೊಳ್ಳುವುದನ್ನು ನಿಲ್ಲಿಸಲಾಯಿತು. ಸರೋಜಿನಿ ನಾಯ್ಡು ಅವರು 5ನೇ ಅಧಿವೇಶನದ ಅಧ್ಯಕ್ಷರಾಗಿ ಸರ್ವಾನುಮತದಿಂದ ಆಯ್ಕೆಯಾದರು. ಕಮಲಾದೇವಿ ಕಾರ್ಯದರ್ಶಿಯಾಗಿ ಕೆಲಸ ಮಾಡುತ್ತಾ ಉಳಿದರು. ಈ ಹೊಣೆಗಾರಿಕೆಯ ಕೆಲಸ, ತಿರುಗಾಟ, ಪತ್ರವ್ಯವಹಾರ, ಸಂಘಟನೆಯ ಕೆಲಸ, ಬೇರೆ ಯಾರಿಂದ ಸಾಧ್ಯವಿತ್ತು? ಈ ಕೆಲಸಗಳಲ್ಲದೆ, ಆಹಾರ ಸಾಮಾಗ್ರಿಯ ಸಮರ್ಪಕ ಹಂಚುವಿಕೆ, ಮಕ್ಕಳಿಗೆ ಹಾಲು ಪೂರೈಕೆ, ಆನುವಂಶಿಕವಾಗಿ ಸಿಗುವ ಆಸ್ತಿಯಲ್ಲಿ ಮಹಿಳೆಯರ ಹಕ್ಕು ಸ್ಥಾಪನೆ, ವಿವಾಹಕ್ಕೆ ಸಂಬಂಧಿಸಿದ ಕಾನೂನು ಸುಧಾರಣೆ, ಈ ರೀತಿಯ ವಿಚಾರಗಳನ್ನು ಕೂಡಾ ಅವರು ಕಾರ್ಯಸೂಚಿಯಲ್ಲಿ ತಂದರು. ಅನೇಕ ಕರಪತ್ರಗಳನ್ನು ಬರೆದು, ಹಂಚಿದರು. ಅದಕ್ಕೆ ಉತ್ತಮ ಪ್ರತಿಕ್ರಿಯೆ ಕೂಡಾ ಬಂದಿತ್ತು.

ಪರಿಷತ್ತು ಮಕ್ಕಳ ಹಿತರಕ್ಷಣೆಗಾಗಿ ಚಿಲ್ಡ್ರನ್ ಚಾರ್ಟರ್ ಎಂಬ ಸೂಚನೆಯನ್ನು, ಪ್ರಾಯಶಃ ಜಗತ್ತಿನಲ್ಲಿಯೇ ಮೊದಲ ಬಾರಿಗೆ ಮಂಡಿಸಿತು. ಇದರಲ್ಲಿ ಮಕ್ಕಳಿಗೆ ಸಾಂಪ್ರದಾಯಿಕ ಆಹಾರ (ರಾಗಿಯ ತರಿ, ಗಂಜಿ, ಕಷಾಯ)ದ ಮೇಲೆ ಹೆಚ್ಚಿನ ಒತ್ತು ನೀಡಲಾಯಿತು. ಆ ಕಾಲದಲ್ಲಿ ಮಕ್ಕಳ ಆಹಾರ (ಬೇಬಿ ಫುಡ್) ವಿದೇಶದಿಂದ ಬರುತ್ತಿತ್ತು ಎನ್ನುವುದನ್ನು ನೆನಪಿಸಿಕೊಂಡರೆ, ಕಮಲಾದೇವಿಯವರ ಸ್ವದೇಶಿ ಪ್ರೇಮ ಶಿಶುಗಳವರೆಗೆ ತಲುಪಿರುವುದು ಕಂಡುಬರುತ್ತದೆ!

ಇವತ್ತಿನ ದಿನ ಪ್ರಚಾರಕ್ಕೆ ಬಂದಿರುವ 'ಮಗುವಿಗೆ ತಾಯಿ ಹಾಲೇ ಉತ್ತಮ' ಎನ್ನುವುದು ಆಗ ಕೂಡಾ ಪ್ರಾಮುಖ್ಯತೆ ಪಡೆದ ವಿಚಾರವಾಗಿತ್ತು.

ಅಸಹಕಾರ ಚಳವಳಿಯಲ್ಲಿ ಭಾಗಿಯಾಗಿ ಜೈಲು ಶಿಕ್ಷೆಯನ್ನು ಅನುಭವಿಸುತ್ತಿರುವಾಗ ಅವರಿಗೆ ಪರಿಷತ್ತಿನಿಂದ ದೂರವಿರಬೇಕಾಗಿ ಬಂತು. ನಂತರ 1939–41ರಲ್ಲಿ ಎರಡನೇ ಮಹಾಯುದ್ಧದ ಕಾಲದಲ್ಲಿ ಅವರು ವಿದೇಶಿ ಪ್ರವಾಸದಲ್ಲಿದ್ದರು. ಮರಳಿ ಬಂದ ನಂತರ ಕ್ವಿಟ್ ಇಂಡಿಯಾ ಚಳವಳಿಯಿಂದಾಗಿ ಜೈಲಿಗೆ ಹೋದರು. ಆದ್ದರಿಂದ ಅಖಿಲಭಾರತ ಮಹಿಳಾ ಪರಿಷತ್ತಿನ ಅವರ ಅಧ್ಯಕ್ಷಗಿರಿಯ ಚುನಾವಣೆ ನಡೆದರೂ, ಕೆಲಸ ಮಾತ್ರ ಮುಂದೆ ಹಾಕಲ್ಪಡುತ್ತಿತ್ತು. ಕೊನೆಗೆ 1944ನೇ ಇಸವಿಯಲ್ಲಿ ಅವರು ಪರಿಷತ್ತಿನ ಅಧ್ಯಕ್ಷರಾದರು.

ಮಹಿಳೆಯರಿಗಾಗಿ ಕಾರ್ಯ ನಡೆಸುತ್ತಿದ್ದ ಬಹುತೇಕ ಮಹಿಳೆಯರು ಜೈಲು ಸೇರಿದ್ದರು. ಹೀಗಾಗಿ ಈ ಅವಧಿಯಲ್ಲಿ ಕೆಲಸ ಸ್ಥಗಿತಗೊಂಡಿತು. ಕಮಲಾದೇವಿಯವರು ಅಧ್ಯಕ್ಷ ಸ್ಥಾನದಿಂದ ಮಹಿಳೆಯರ ಸುಧಾರಣೆಗಾಗಿ ಕೆಲವು ಕ್ರಮಗಳನ್ನು ಸೂಚಿಸಿದರು. "..ಜಗತ್ತಿನಾದ್ಯಂತ ಮಹಿಳೆಯರ ಆರ್ಥಿಕ–ಸಾಮಾಜಿಕ ಸ್ಥಿತಿ ಸುಧಾರಣೆಗಾಗಿ ಪ್ರಯತ್ನ ಜಾರಿಯಲ್ಲಿದ್ದಾಗ, ಭಾರತ ಹಿಂದುಳಿಯುವಂತಿಲ್ಲ. ಮಹಿಳೆಯರು ಬಡವರು ಎನ್ನುವ ದೋಷಪೂರ್ಣ ವಿಚಾರ ಶತಮಾನಗಳಿಂದ ನಮ್ಮ ರಕ್ತದಲ್ಲಿ ಸೇರಿಹೋಗಿದೆ! ಇದಕ್ಕೆ ಮಾನಸಿಕ ಬದಲಾವಣೆ ಮೊದಲು ಆಗಬೇಕಾಗಿದೆ! ಸಾಮಾಜಿಕ ಬದಲಾವಣೆ ನಂತರ ಬಂದರೂ ನಡೆಯುತ್ತದೆ!" ಎಂದು ಅವರು ಘೋಷಿಸಿದರು.

'ಕಾರ್ಮಿಕ ಪುರುಷರು ಮತ್ತು ಮಹಿಳೆಯರ ನಡುವೆ ವೇತನ ತಾರತಮ್ಯ ಬಹಳವಿದೆ! ಇದು ತೊಲಗಬೇಕು. ಮಧ್ಯಮವರ್ಗದ ಮಹಿಳೆಯ ಕುರಿತು ಅವರು ಪರಾವಲಂಬಿ ಎಂಬ ಅಭಿಪ್ರಾಯ ಗಟ್ಟಿಯಾಗಿ ತಳವೂರಿದೆ. ಅವಳ ಗೃಹಕೃತ್ಯ ದುಡಿಮೆಯ ಶ್ರಮ, ಹೊಣೆಗಾರಿಕೆಯನ್ನು ಗಮನಕ್ಕೆ ತಂದುಕೊಳ್ಳಬೇಕು. ಅವಳದು ವೇತನವಿಲ್ಲದ ದುಡಿಮೆ. ಇದರ ಅಸಂಖ್ಯಾತ ಕಷ್ಟಗಳ ಕಡೆಗೆ ಲಕ್ಷ್ಯ ಹರಿಸಬೇಕು' ಎಂದು ಅವರು ಹೇಳಿದರು.

ಹತ್ತು ವರ್ಷಗಳ ನಂತರ ಯೂನಿಸೆಫ್ ಪ್ರಚಾರಕ್ಕೆ ತಂದಂತಹ ಮಹಿಳೆಯರು ಮತ್ತು ಮಕ್ಕಳ ಆರೋಗ್ಯ ರಕ್ಷಣೆಯ ಔಷಧಿ, ಆಹಾರ, ಹಾಲು ಮತ್ತು ಆರೋಗ್ಯ ಶಿಕ್ಷಣ ವ್ಯವಸ್ಥೆಯನ್ನು ಕಮಲಾದೇವಿಯವರು ಹಣದ ಕೊರತೆಯಲ್ಲಿಯೇ ಆ ಕಾಲದಲ್ಲಿ ಪ್ರಾರಂಭಿಸಿದ್ದರು. ಇಂಗ್ಲೆಂಡಿಗೆ ಬೇಡಿಕೆ ಸಲ್ಲಿಸಿ ವೈದ್ಯಕೀಯ ನೆರವಿಗಾಗಿ ಸ್ಕಿಪ್ಪೊ ಎನ್ನುವ ನಾಲ್ಕು ಸಂಚಾರಿ ವಾಹನಗಳನ್ನು ತಂದಿದ್ದರು. ಅದನ್ನು ಉಡುಗೊರೆಯೆಂದು ಹೇಳಿ ಖರ್ಚಿಲ್ಲದೆ ತರಿಸುವುದರಲ್ಲಿ ಅವರು ಸಫಲರಾಗಿದ್ದರು. ಸಂಚಾರಿ ವಾಹನದ ಮೂಲಕ ದಿಲ್ಲಿಯ ಸುತ್ತಮುತ್ತಲ ಊರುಗಳಿಗೆ ಆರೋಗ್ಯ ವ್ಯವಸ್ಥೆ ಮಾಡಿದರು. ಸಣ್ಣ ಊರುಗಳಲ್ಲಿ ವೈದ್ಯಾಲಯ ತೆರೆಯುವ ಸಲುವಾಗಿ ಹಣ ಒಟ್ಟುಗೂಡಿಸಿ ಸ್ಥಳೀಯ ಜನರಿಗೆ ಅದರ ಜವಾಬ್ದಾರಿಯನ್ನು ವಹಿಸಿಕೊಟ್ಟರು. ನಗರಗಳಲ್ಲಿ ಉದ್ಯೋಗಸ್ಥ ಮಹಿಳೆಯರಿಗಾಗಿ ವಸತಿಗೃಹ ಪ್ರಾರಂಭಿಸಲು ನೆರವಾದರು. ವಸತಿ ವ್ಯವಸ್ಥೆ, ರಕ್ಷಣೆಯ ವ್ಯವಸ್ಥೆ ಇಲ್ಲದಿದ್ದರೆ ಇಂದಿನಿಂದ ಅರವತ್ತು ವರ್ಷಗಳ ಹಿಂದೆ ಸುಶಿಕ್ಷಿತ ಮಹಿಳೆಯರಿಗೆ ಉದ್ಯೋಗಕ್ಕೆ ಹೋಗುವುದು ಎಷ್ಟು ಕಠಿಣವಿತ್ತೆಂಬುದು ಕಲ್ಪನೆಗೆ ಬಿಟ್ಟ ವಿಚಾರ. ಈ ದೃಷ್ಟಿಯಿಂದ ಕಮಲಾದೇವಿಯ ನೆರವು ಮುಖ್ಯವಾಗುತ್ತದೆ.

ಮಹಿಳೆಯರ ಸಬಲೀಕರಣವೆನ್ನುವುದು ಇತ್ತೀಚಿಗಷ್ಟೇ ದೊಡ್ಡ ಘೋಷಣೆ ಆಗಿದೆ. ಕಮಲಾದೇವಿಯವರು ಈ ಪದವನ್ನು ಉಲ್ಲೇಖಿಸದಿದ್ದರೂ, ಇದೇ ವಿಚಾರವನ್ನು ಆಚರಣೆಗೆ ತರಲು ಎಪ್ಪತ್ತು ವರ್ಷಗಳಷ್ಟು ಹಿಂದೆಯೇ ಪ್ರಯತ್ನಿಸಿದ್ದಾರೆ.

ಅಧ್ಯಾಯ : ೮

# ವಿಶ್ವಸಂಚಾರ : ಅಸೀಮ ಸಾಹಸ

## (ಪಶ್ಚಿಮರಂಗ -1)

ಇಂದು ದೇಶ, ವಿದೇಶಗಳಿಗೆ ಪ್ರವಾಸ ಕೈಗೊಳ್ಳುವ ರಾಜಕಾರಣಿಗಳಿಗೆ, ಶ್ರೀಮಂತರಿಗೆ ಏನೂ ಕಡಿಮೆ ಇಲ್ಲ. ಸರಕಾರಿ ಕೆಲಸಗಳಿಗೆ, ಸರಕಾರೇತರ ಕೆಲಸಗಳಿಗೆ, ಪ್ರವಾಸಿಗಳಾಗಿ ಹೋಗುವವರಿಗೆ, ತಿರುಗಾಟವೆನ್ನುವುದು ಬದುಕಿನ ಅವಿಭಾಜ್ಯ ಅಂಗವೇ ಆಗಿದೆ. ಸುಮಾರು 70-80 ವರ್ಷಗಳ ಹಿಂದೆ ಪ್ರವಾಸವೆಂಬುದು ಸಂತೋಷದಾಯಕವಾಗಿ ಇರುತ್ತಿರಲಿಲ್ಲ. ಮುಖ್ಯವಾಗಿ ರೈಲು ಮತ್ತು ಹಡಗು ಸಂಚಾರವಿರುತ್ತಿತ್ತು. ದೂರಗಾಮಿ ವಿಮಾನವಿನ್ನೂ ಬಂದಿರಲಿಲ್ಲ. ಇಂತಹ ದಿನಗಳಲ್ಲಿ ಕಮಲಾದೇವಿ, ಎರಡನೆಯ ಮಹಾಯುದ್ಧ ಪ್ರಾರಂಭವಾದ ಸಂದರ್ಭದಲ್ಲಿ, ಬಾಂಬ್ ಬಂದೆರಗುತ್ತಿದ್ದ ಊರುಗಳಲ್ಲೆಲ್ಲಾ ಸುತ್ತಾಡಿದ್ದಾರೆ. ಪಾಸ್‌ಪೋರ್ಟ್ ತನಿಖೆಯಾಗದ ಊರುಗಳಲ್ಲಿ ನಿರ್ಬಂಧವಿರುತ್ತಿತ್ತು. ಹಿಮಪಾತವಾಗಿ ರಸ್ತೆ ಮುಚ್ಚಿಹೋಗಿದ್ದಾಗ ಸೈನಿಕರ ನಡುವೆ ಏಕಮಾತ್ರ ಮಹಿಳೆಯಾಗಿ ಸೂರ್ಯನ ಕೃಪೆಗೆ ಕಾಯುತ್ತಾ ನಿಲ್ಲುತ್ತಿದ್ದರು. ಯುದ್ಧ ನಡೆಯುತ್ತಿರುವಾಗ, ರೈಲಿನಲ್ಲಿ ತುಂಬಿಕೊಂಡಿರುವ ಚೀನಿ, ಜಪಾನಿ ಸೈನಿಕರೊಂದಿಗೆ ಹೋರಾಟ ನಡೆಯುತ್ತಿದ್ದ ಪ್ರದೇಶಗಳಿಂದ ಪಾರಾಗಿ ಬಂದಿದ್ದಾರೆ. ಇಂತಹ ಸಾಹಸಿ ಮಹಿಳೆಯರು ಎಷ್ಟು ಜನರಿರಬಹುದು? ಪ್ರವಾಸವೆಂದರೆ ಕಮಲಾದೇವಿಗೆ ತುಂಬಾ ಇಷ್ಟ. ಅವರದು ಸಾಹಸ ಪ್ರವೃತ್ತಿ. ಇದರೊಂದಿಗೆ ಸಮಾಜಸೇವೆ ಮತ್ತು ದೇಶಸೇವೆ ಕೂಡಿಕೊಂಡದ್ದು ಆಶ್ಚರ್ಯದ ಸಂಗತಿ!

ಅವರು ನಂತರದ ದಿನಗಳಲ್ಲಿ ವಿಮಾನದಲ್ಲಿ, ಹವಾನಿಯಂತ್ರಿತ ರೈಲು ಬೋಗಿಗಳಲ್ಲಿ ತಿರುಗಾಡಿದ್ದಾರೆ. ಆದರೆ ಕುಶಲಕರ್ಮಿಗಳ, ಶಿಲ್ಪಿಗಳ ಶೋಧನೆಯಲ್ಲಿದ್ದಾಗ, ರಸ್ತೆ ಸರಿಯಿಲ್ಲದೆಡೆಗಳಲ್ಲಿ ಎತ್ತಿನಬಂಡಿಗಳಲ್ಲಿ, ಮತ್ತು ಎತ್ತಿನಬಂಡಿಯ ಹಾಗೇ ಓಲಾಡುವ, ಮೈ ನೋಯಿಸುತ್ತಾ ಚಲಿಸುವ ಜೀಪುಗಳಲ್ಲಿ ಮತ್ತು ರಸ್ತೆಯೇ ಇಲ್ಲದೆಡೆಗಳಲ್ಲಿ ಕಾಲ್ನಡಿಗೆಯಲ್ಲಿ ದೂರದೂರದ ಹಳ್ಳಿಗೆ ಅವರು ಹೋಗುತ್ತಿದ್ದರು. ಅವರು ಸಂದರ್ಶಿಸದ ಊರು, ದೇಶ, ಪ್ರದೇಶಗಳು ಇರಲಿಲ್ಲವೆಂದರೆ ಅದು ಅತಿಶಯೋಕ್ತಿಯೇನಲ್ಲ. ಅಮೇರಿಕಾ ಖಂಡ, ಮಧ್ಯಪ್ರಾಚ್ಯ, ಪೂರ್ವ ಮತ್ತು ಆಫ್ರಿಕಾದ ಬಹಳಷ್ಟು ದೇಶಗಳಿಗೆ ಅವರು ಭೇಟಿ ನೀಡಿದ್ದಾರೆ. ಆಸ್ಟೇಲಿಯಾ, ರಷ್ಯಾವನ್ನು ಕೂಡಾ ತಲುಪಿದ್ದಾರೆ.

ಅವರ ಈ ತಿರುಗಾಟವು ಬಹಳ ಚಿಕ್ಕವಯಸ್ಸಿನಿಂದಲೇ ಪ್ರಾರಂಭವಾಗಿತ್ತು. ಅವರ ವಿವಾಹ ನಡೆದ (1919) ಕೆಲವೇ ದಿನಗಳಲ್ಲಿ ಪತಿ ಹರೀಂದ್ರನಾಥರು ಉಚ್ಚಶಿಕ್ಷಣಕ್ಕಾಗಿ ಇಂಗ್ಲೆಂಡಿಗೆ ಹೋದರು. ಆದರೆ ಅವರ ಜೊತೆ ಕಮಲಾದೇವಿಯನ್ನು ಕಳುಹಿಸಲು ಅವರ ಕುಟುಂಬ ಉತ್ಸಾಹ ತೋರಿಸಲಿಲ್ಲ. ನಂತರ ಕಮಲಾದೇವಿಯೊಬ್ಬರೇ ಇಂಗ್ಲೆಂಡಿಗೆ ಹೋಗಿ ಉಚ್ಚಶಿಕ್ಷಣ ಪಡೆದು ಮರಳಿ ಬಂದಿರುವುದನ್ನು ನಾವು ಕಂಡಿದ್ದೇವೆ.

ಅವರು ಎರಡನೇ ಬಾರಿ ವಿದೇಶಕ್ಕೆ ಹೊರಟದ್ದು 1929ನೇ ಇಸವಿಯಲ್ಲಿ. ಅಖಿಲಭಾರತ ಮಹಿಳಾ ಅಧಿವೇಶನದ ವತಿಯಿಂದ ಬೇರೆ ಬೇರೆ ದೇಶಗಳಲ್ಲಿ ನಡೆದ ಅಂತಾರಾಷ್ಟ್ರೀಯ

ಸಮ್ಮೇಳನಗಳಲ್ಲಿ ಅವರು ಹಾಜರಿದ್ದರು. ಬರ್ಲಿನ್‌ನಲ್ಲಿ ನಡೆದ ಮಹಿಳಾ ಸಮ್ಮೇಳನದಲ್ಲಿ ಭಾಗವಹಿಸಿದ ಪ್ರತಿನಿಧಿಗಳು ಯುರೋಪ್ ಮತ್ತು ಬ್ರಿಟಿಷ್ ವಸಾಹತುಗಳಿಂದ ಬಂದವರಾಗಿದ್ದರೂ, ಅವರ ಸಾರ್ವಭೌಮ ರಾಷ್ಟ್ರದ ಪರವಾಗಿ ಬಂದವರಾಗಿದ್ದರು. ಆದರೆ ಭಾರತ ಮತ್ತು ಈಜಿಪ್ಟ್ ದೇಶದ ಸ್ವತಂತ್ರ ಪ್ರತಿನಿಧಿಗಳಾಗಿ ಭಾಗವಹಿಸಿದವರು ಸರೋಜಿನಿ ನಾಯ್ಡು (ಆಗ ಎಐಡಬ್ಲುಸಿಯ ಅಧ್ಯಕ್ಷರಾಗಿದ್ದರು), ಕಮಲಾದೇವಿ (ಆ ಸಂಸ್ಥೆಯ ಕಾರ್ಯದರ್ಶಿ) ಮತ್ತು ಈಜಿಪ್ಟ್ ದೇಶದ ಮೇಡಂ ಚಾರೊಯೆನ್. ಬುರ್ಖಾ ತ್ಯಜಿಸಿದ್ದ ಈ ಮಹಿಳೆ ದೇಶದ ಸ್ವಾತಂತ್ರ್ಯ ಹೋರಾಟದಲ್ಲಿ ಪಾಲುಗೊಳ್ಳುತ್ತಿದ್ದವರು ಮತ್ತು ಮಹಿಳೆಯರ ಜನ್ಮಜಾತ ಹಕ್ಕುಗಳಿಗೆ ಹೋರಾಡುತ್ತಿದ್ದವರು.

ಕಮಲಾದೇವಿಯವರು ಇಂಗ್ಲೆಂಡ್ ಮತ್ತು ಜಿನೆವಾದಲ್ಲಿ ಪೆಸ್ಟಾಲಾಜಿ ಪ್ರಯೋಗದ ಶಾಲೆಯನ್ನು ನೋಡಿದ್ದರು. ಸಂಗೀತಕ್ಕೆ ತಾಳಬದ್ಧವಾಗಿ ನರ್ತಿಸುವುದು, ಅಭಿನಯಿಸುವುದು ಸಾಮೂಹಿಕ ರೂಪದಲ್ಲಿ ಇದ್ದಾಗ ಸುಂದರವಾದ ಮತ್ತು ಶಿಸ್ತಿನ ದೃಶ್ಯವಾಗಿ ಗೋಚರಿಸುತ್ತಿತ್ತು. ಈ ಕವಾಯತು ರೀತಿಯ ಅಭಿನಯವನ್ನು ಪ್ರಚಾರಕ್ಕಾಗಿ ಜರ್ಮನಿ (ಹಿಟ್ಲರನಿಂದ) ಮತ್ತು ಜಪಾನ್ ಅಳವಡಿಸಿಕೊಂಡಿತ್ತು. ಆನಂತರ ಚೀನಾ ಕೂಡಾ ಈ ಪದ್ಧತಿಯನ್ನು ಸ್ವೀಕರಿಸಿತು.

ಪ್ರಾಗ್ ನಗರದಲ್ಲಿ 1929ರಲ್ಲಿ ನಡೆದ ಸಂಘಟಿತ ಮಹಿಳೆಯರ ಸಮ್ಮೇಳನದಲ್ಲಿ ಕಮಲಾದೇವಿ ಭಾಗವಹಿಸಿದ್ದರು. ಅಲ್ಲಿಂದ ಅವರು ಫ್ರಾಂಕ್‌ಫರ್ಟ್ ತಲುಪಿದರು. ಅನೇಕ ಕ್ರಾಂತಿಕಾರಿಗಳನ್ನು ತಿಳಿದುಕೊಂಡಿದ್ದ ಅವರ ಭಾವ ವೀರೇಂದ್ರನಾಥರು, ಈ ಕ್ರಾಂತಿಕಾರಿ ಗಳನ್ನು ಕಮಲಾದೇವಿಗೆ ಪರಿಚಯಿಸಿದರು. ಅವರಲ್ಲಿ ಪ್ರಮುಖರೆಂದರೆ ಐನ್‌ಸ್ಟೀನ್, ರೊಮೆರೊಲಾ, ಮತ್ತು ಮೇಡಂ ಸನ್ಯತ್ ಸೇನ್. ಏಶಿಯಾದ ಇಂಡೋಚೀನಾ, ಜಾವಾ, ಅರಬ್ ದೇಶದ ಮತ್ತು ಆಫ್ರಿಕಾ ದೇಶದ ಪ್ರತಿನಿಧಿಗಳು ಕೂಡಾ ಇದ್ದರು. ದೇಶದ ಹೊರಗೆ ಹೋದಾಗ ಭಾರತೀಯರಿಗೆ ಹೆಚ್ಚಿನ ಗೌರವ ಪ್ರಾಪ್ತಿಯಾಗುತ್ತದೆ ಎಂಬ ಸತ್ಯ ಮೊದಲಬಾರಿ ಕಮಲಾದೇವಿಯ ಅನುಭವಕ್ಕೆ ಬಂತು.

ಕಮಲಾದೇವಿ ಭಾರತಕ್ಕೆ ಮರಳಿ ಬಂದ ಕೂಡಲೇ ಪಾಸ್‌ಪೋರ್ಟ್ ಒಪ್ಪಿಸುವಂತೆ ಬ್ರಿಟಿಷ್ ಸರಕಾರ ಅವರನ್ನು ಕೇಳಿತು. ಅವರು ಇದಕ್ಕೆ ವಿಧೇಯಪೂರ್ವಕವಾಗಿ ನಕಾರ ಸೂಚಿಸಿದರು. 'ನಾನು ಯಾವುದೇ ಕಾನೂನನ್ನು, ಅದು ದೇಶದ್ದಾಗಿರಬಹುದು ಅಥವಾ ಪರದೇಶದ್ದಾಗಿರಬಹುದು, ಭಂಗ ಮಾಡಿಲ್ಲ!' ಎಂದು ಅವರು ಉತ್ತರಿಸಿದರು. ಆದರೆ ಸರಕಾರ ಎಲ್ಲಾ ಹಡಗು ಸಂಸ್ಥೆಗಳಿಗೆ ಪತ್ರ ಬರೆದು ಕಮಲಾದೇವಿಗೆ ರಹದಾರಿ ನೀಡದಂತೆ ಪ್ರತಿಬಂಧಿಸಿತು. ಒಬ್ಬ ಯುವತಿ ಯಾವ ರೀತಿಯಿಂದ ಕ್ರಾಂತಿಗೆ ಕಾರಣಳಾಗಬಹುದು ? ಎಂದು ಯಾರೂ ಯೋಚಿಸಲು ಹೋಗಲಿಲ್ಲ. ವೀರೇಂದ್ರ ಚಟ್ಟೋಪಾಧ್ಯಾಯರೊಂದಿಗೆ ಅವರು ತಿರುಗಾಡಿದ್ದು, ವ್ಯವಹರಿಸಿದ್ದು ದೊಡ್ಡ ಅಪರಾಧದ ವಿಷಯವಾಗಿ ಉಳಿಯಿತು! 1931ರಲ್ಲಿ ಜೈಲಿನಿಂದ ಬಿಡುಗಡೆಯಾಗಿ ಬಂದ ನಂತರ ಕಮಲಾದೇವಿ ಶ್ರೀಲಂಕಾಗೆ ಹೊರಟು ನಿಂತರು. ಅಲ್ಲಿನ ಯೂತ್ ಕಾನ್‌ಫರೆನ್ಸ್‌ಗೆ ಅವರನ್ನು ಅಧ್ಯಕ್ಷರಾಗಿ ಆಮಂತ್ರಿಸ ಲಾಗಿತ್ತು. ಅವರ ಭಾಷಣದಿಂದ ಹದಿಹರೆಯದ ಎಷ್ಟೋ ಮಂದಿ ಪ್ರಭಾವಿತರಾದರು. ಅವರಿಗೆ ಗಾಂಧೀಜಿಯವರ ಸಂದೇಶವನ್ನು ಮನದಟ್ಟಾಗುವಂತೆ ಅವರು ತಿಳಿಸಿದ್ದರು. ಹೋದೆಡೆಗಳಲ್ಲಿ ಬ್ರಿಟಿಷ್ ವಿರೋಧಿ ಪ್ರಜ್ಞಾವಂತರು ಅವರನ್ನು ಭೇಟಿಯಾಗಲು ಬರುತ್ತಿದ್ದರು. ಬ್ರಿಟಿಷ್ ಸಾಮ್ರಾಜ್ಯದಿಂದ ಹೊರಬೀಳುವ ಪ್ರಯತ್ನ ಅಲ್ಲಿ ಕೂಡಾ ಜಾರಿಯಲ್ಲಿತ್ತು. ಇದರ

ನಂತರ ಎಷ್ಟೋ ಬಾರಿ ಭಾಷಣ ನೀಡಲೆಂದು ಅವರು ಶ್ರೀಲಂಕಾಗೆ ಹೋದದ್ದುಂಟು.

ಈ ಸಮಯದಲ್ಲಿ ಅವರ ಪಾಸ್‌ಪೋರ್ಟ್ ರದ್ದಾಗಿತ್ತು. ಅವರ ಹೆಸರನ್ನು ಕಪ್ಪುಪಟ್ಟಿಯಲ್ಲಿ ಸೇರಿಸಲಾಗಿತ್ತು. ಆದರೆ, ಕೆಲವು ರಾಜ್ಯಗಳಲ್ಲಿ ಸ್ವಾಯತ್ತ ಸರಕಾರ ಅಧಿಕಾರದಲ್ಲಿ ಇತ್ತು. ಮದ್ರಾಸ್ ಪ್ರಾಂತದ ಮುಖ್ಯಮಂತ್ರಿಯಾಗಿ ರಾಜಾಜಿ ಇದ್ದರು. ಅವರು ಕಮಲಾದೇವಿಯ ಕುಟುಂಬಕ್ಕೆ ಆಪ್ತರು. ಒಂದು ದಿನ ಬೆಳಗಿನ ಉಪಹಾರಕ್ಕೆ ಅವರ ಮನೆಗೆ ಹೋದಾಗ ಕಮಲಾದೇವಿ ತನ್ನ ಪಾಸ್‌ಪೋರ್ಟಿನ ಕತೆಯನ್ನು ಅವರಿಗೆ ಹೇಳಿದರು. ಕೆಲವೇ ದಿನಗಳಲ್ಲಿ ಅವರ ಹೊಸ ಪಾಸ್‌ಪೋರ್ಟ್ ಸಿದ್ಧವಾಯಿತು.

1929ನೇ ಇಸವಿಯ ಪ್ರಾರಂಭ. ಮಹಿಳೆಯರ ಶಿಕ್ಷಣದ ಕಡೆಗೆ ಗಮನ ನೀಡುವಂತೆ ಗಾಂಧೀಜಿಯವರು ಕಮಲಾದೇವಿಗೆ ಹೇಳಿದ್ದರು. ಜೈಲಿಗೆ ಹೋಗುವುದು, ಬರುವುದು, ತಿರುಗಾಡುತ್ತಾ ಸಂಘಟನೆ ನಡೆಸುವುದು, ಈ ಕಾರ್ಯದಿಂದಾಗಿ ಹೆಣ್ಣುಮಕ್ಕಳ ಕಡೆಗೆ ಗಮನ ಹರಿಸುವುದು ಆಗಿರಲೇ ಇಲ್ಲ.

ಭಾರತದ ಸ್ವಾತಂತ್ರ್ಯ ಚಳವಳಿಯ ಕುರಿತು ಬೇರೆ ಬೇರೆ ದೇಶಗಳ ಜನರಿಗೆ ಸ್ಪಷ್ಟ ಕಲ್ಪನೆ ನೀಡುವ ನಿರ್ಧಾರವನ್ನು ಅವರು ಕೈಗೊಂಡರು. ಇದರ ಮೊದಲ ಪ್ರವಾಸದಲ್ಲಿ ಅವರಿಗೆ ಬಹಳಷ್ಟು ಪ್ರದೇಶಗಳ ಮತ್ತು ವ್ಯಕ್ತಿಗಳ ಪರಿಚಯವಾಗಿತ್ತು. ಅವರ ಸಹಾಯ ಪಡೆಯುವುದರ ಕುರಿತು ಅವರು ಯೋಚಿಸಿದರು. ಮಗ ರಾಮುವಿಗೆ ತಾಂತ್ರಿಕ ಶಿಕ್ಷಣದ ಪರಿಚಯವಿತ್ತು. ಅವನು ಭಾರತದ ಕ್ಷೋಭೆಯ ವಾತಾವರಣದಿಂದ ಹೊರಗೆ ಉಳಿಯಲಿ ಎಂದು ಕಮಲಾದೇವಿ ಮಗನೊಡನೆ ವಿದೇಶಕ್ಕೆ ಹೊರಟು ನಿಂತರು. ತನಗಾಗಿ ಸೃಜನಾತ್ಮಕ ವಿಚಾರ ಗಳನ್ನು, ಮಹಿಳೆಯರ ಸುಧಾರಣೆಗೆ ಉಪಯುಕ್ತವೆನಿಸುವ ಬೇರೆ ಬೇರೆ ಮಾರ್ಗೋಪಾಯ ಗಳನ್ನು ತಿಳಿದುಕೊಳ್ಳುವುದು ಕೂಡಾ ಅವರ ಉದ್ದೇಶವಾಗಿತ್ತು. ಈಜಿಪ್ಟ್, ರೋಮ್ ಮಾರ್ಗವಾಗಿ ಅವರು ಲಂಡನ್ ತಲುಪಿದರು.

ಲಂಡನ್‌ನಿಂದ ಸ್ಕಾಂಡೆನೆವಿಯಾ ಮುಟ್ಟಿದರು. ಡೆನ್ಮಾರ್ಕಿನ ಕೋಪೆನ್‌ಹೆಗನ್ ನಗರದಲ್ಲಿ ಅಂತಾರಾಷ್ಟ್ರೀಯ ಮಹಿಳಾ ಸಮ್ಮೇಳನ ನಡೆಯಲಿತ್ತು. ಎರಡನೆಯ ಮಹಾಯುದ್ಧದ ಕರಾಳತೆ ಅಲ್ಲಲ್ಲಿ ಕಾಣಲು ಶುರುವಾಗಿತ್ತು. ಜರ್ಮನಿಯ ಫ್ಯಾಸಿಸ್ಟರ ವಿರುದ್ಧ ಪ್ರತಿಭಟನೆ ಬೇರೆ ಬೇರೆ ದೇಶಗಳಲ್ಲಿ ಕಂಡುಬರುತ್ತಿತ್ತು.

ಅಲ್ಲಿಂದ ಅವರು ಸ್ವೀಡನ್‌ಗೆ ಹೋದರು. ಅಲ್ಲಿಯ ಸಹಕಾರಿ ಸಂಘ ಮತ್ತು ಟ್ರೇಡ್ ಯೂನಿಯನ್ನಿನ ಸಂಘಟನೆಯನ್ನು ನೋಡಿ, ಭಾರತದಲ್ಲಿ ಅದೇ ರೀತಿಯ ಸಂಘಟನೆ ನಡೆಸುವ ಸಾಧ್ಯತೆ ಇದೆ ಎಂದು ಅವರಿಗೆ ಕಂಡಿತು. ಅಲ್ಲಿಯ ಯೂನಿಯನ್ ಬಲಿಷ್ಠವಾಗಿದ್ದು ಸರಕಾರದ ಮೇಲೆ ಅದು ಪ್ರಭಾವ ಬೀರುತ್ತಿತ್ತು. ಸರಕಾರ ಶ್ರೀಮಂತರ ಮೇಲೆ ಹೆಚ್ಚು ತೆರಿಗೆಯನ್ನು ವಿಧಿಸುತ್ತಿತ್ತು. ಆದ್ದರಿಂದ ಶ್ರೀಮಂತರ ಮತ್ತು ಬಡವರ ನಡುವಿನ ಅಂತರ ಅಗಾಧವಾಗಿ ಕಾಣಿಸುತ್ತಿರಲಿಲ್ಲ.

ಅಲ್ಲಿಂದ ತಾಯಿ, ಮಗ ಇಬ್ಬರೂ ಅರ್ಕ್‌ಟಿಕ ವರ್ತುಲವನ್ನು ಪ್ರವೇಶಿಸಿದರು. ಅವರು ನಡುರಾತ್ರಿ ಸೂರ್ಯನನ್ನು ವೀಕ್ಷಿಸಿದರು. ಟ್ರೆಕ್ಕಿಂಗ್ ಮಾಡಿದರು. ಕಮಲಾದೇವಿ ಅಪರೂಪದ ಕೆಲವು ರಜಾದಿನಗಳನ್ನು ತನ್ನ ಮಗನೊಡನೆ ಕಳೆದರು.

ಯುರೋಪಿನಲ್ಲಿ ಯುದ್ಧ ಪ್ರಾರಂಭವಾಯಿತು. ಭಾರತ ಪ್ರವಾಸದ ರಸ್ತೆ ಮುಚ್ಚಿ ಹೋಯಿತು ! ಕಮಲಾದೇವಿಗೆ ಮಗನನ್ನು ಲಂಡನ್‌ನಲ್ಲಿ ಬಿಟ್ಟು ಬರಲು ಧೈರ್ಯವಿರಲಿಲ್ಲ. ಅಮೇರಿಕೆಗೆ ಯುದ್ಧದ ಕಾವು ತಟ್ಟಿರಲಿಲ್ಲ. ರಾಮನಿಗೆ ಅಮೇರಿಕೆಯಲ್ಲಿ ಉಚ್ಚಶಿಕ್ಷಣದ

ವ್ಯವಸ್ಥೆ ನಡೆಸುವುದೆಂದು ನಿರ್ಧರಿಸಿ ಅವರು ಮಗನನ್ನು ಕರೆದುಕೊಂಡು ಹಡಗಿನಲ್ಲಿ ಅಮೇರಿಕೆಗೆ ಹೊರಟರು.

ಪಾಸ್‌ಪೋರ್ಟಿಗಾಗಿ ಮತ್ತೆ ರಗಳೆ ಪ್ರಾರಂಭವಾಯಿತು. ಬ್ರಿಟಿಷರು ಕಮಲಾದೇವಿಯ ಕ್ರಾಂತಿಕಾರಿ ಚಲನವಲನವನ್ನು ಅಮೇರಿಕೆಯ ದೂತವಾಸಕ್ಕೆ ತಿಳಿಸಿದ್ದರು. ಕಮಲಾದೇವಿ ಬಿಡಲಿಲ್ಲ. ಅವರಿವರನ್ನು ಭೇಟಿಯಾಗಿ ಸಾವಿರಗಟ್ಟಳೆ ಜನರಲ್ಲಿ ಒಬ್ಬರಾಗಿ ಕ್ಯೂನಲ್ಲಿ ನಿಂತುಕೊಂಡು ಕೊನೆಯಲ್ಲಿ ಒಂದು ಡಚ್ ಹಡಗಿನಲ್ಲಿ ಅವರು ಅಮೇರಿಕೆಗೆ ಹೊರಟರು. ಆಗ ವಿಮಾನಯಾನ ಇರಲಿಲ್ಲ.

ಡಚ್ಚರು ಬ್ರಿಟಿಷರಿಗಿಂತ ಹೆಚ್ಚು ಕಠೋರರು. ಕಮಲಾದೇವಿ ಹಡಗಿನಲ್ಲಿ ದಂಗೆಯೇನಾದರೂ ಮಾಡಿಸಬಹುದೇ ಎಂದು ಶಂಕೆಯಿಂದಲೇ ಅವರನ್ನು ಕಾಣುತ್ತಿದ್ದರು! ಅಮೇರಿಕಾ ತಲುಪಿದೊಡನೆ ಅವರಿಗೆ ಅಪ್ಪಟ ಪ್ರೀತಿಯ ಸ್ವಾಗತ ಮತ್ತು ಸತ್ಕಾರ ದೊರೆಯಿತು. ಅವರು ಅಲ್ಲಿಯ ಅಧ್ಯಕ್ಷರಾದ ರೂಸ್‌ವೆಲ್ಟ್ ಅವರ ಮಂತ್ರಿಮಂಡಲದ ಸಚಿವರನ್ನು ಭೇಟಿ ಯಾದರು. ಅವರ ವೀಸಾವನ್ನು ಆರು ತಿಂಗಳಿಗೊಮ್ಮೆ ನವೀಕರಿಸುವ ವ್ಯವಸ್ಥೆಯಾಯಿತು.

ಅಮೇರಿಕೆಯ ಬೇರೆ ಬೇರೆ ರಾಜ್ಯಗಳಲ್ಲಿ ತಿರುಗಾಡಿದರು. ಭಾರತದ ಸ್ವಾತಂತ್ರ್ಯ ಚಳವಳಿಯ ಸ್ವರೂಪವನ್ನು ಅಮೇರಿಕೆಯ ಜನರಿಗೆ ತಿಳಿಸುವ ಪ್ರಯತ್ನವನ್ನು ನಡೆಸಿದರು. 3–4 ರೇಡಿಯೋ ಭಾಷಣ ನೀಡಿದರು. ಮಿಸೆಸ್ ಎಲಿನಾರ್ ರೂಸ್‌ವೆಲ್ಟ್ ಅವರನ್ನು ಭೇಟಿಯಾದರು. ಈಕೆ ಅಮೇರಿಕೆಯ ಅಧ್ಯಕ್ಷರ ಪತ್ನಿ. ಸ್ವಂತ ಪ್ರತಿಭೆಯಿಂದ ಎಲ್ಲರಿಗೂ ಅವರು ಪರಿಚಿತರಾಗಿದ್ದರು. ಮಹಿಳೆಯರು ಮತ್ತು ಮಕ್ಕಳ ಉದ್ಧಾರಕ್ಕಾಗಿ ಬಹಳಷ್ಟು ಕಾರ್ಯಗಳನ್ನು ನಡೆಸುತ್ತಿದ್ದರು. ಕಮಲಾದೇವಿಯವರ ಮೂಲಕ ಭಾರತದ ಕುರಿತು ಅನೇಕ ವಿಚಾರಗಳನ್ನು ಅವರು ತಿಳಿದುಕೊಂಡರು. ಕಮಲಾದೇವಿಗೆ ಅಮೇರಿಕೆಯ ಅಧ್ಯಕ್ಷರೊಂದಿಗೆ ಶ್ವೇತಭವನದ ಚಹಾ ಪಾರ್ಟಿಗೆ ಆಮಂತ್ರಣ ಬಂತು!

ರೂಸ್‌ವೆಲ್ಟ್‌ಗೆ ಭಾರತ ಸ್ವತಂತ್ರ ದೇಶವಾಗಬೇಕೆಂದು ಮನಸ್ಸಿನಲ್ಲಿ ಇತ್ತು. ಆದರೆ ಈ ವಿಚಾರದಲ್ಲಿ ಬ್ರಿಟಿಷರಿಗೆ ತಿಳಿಹೇಳುವುದು ಸಾಧ್ಯವಾಗಿಲ್ಲವೆಂದು ಅವರು ಹೇಳಿದರು. ಅವರನ್ನು ಎಲಿನಾರ್ ಶ್ವೇತಭವನ ಸುತ್ತಾಡಿಸಿ ತಂದರು.

ರೂಸ್‌ವೆಲ್ಟ್ ಅವರು ಮೂರನೆಯ ಬಾರಿ ಅಧ್ಯಕ್ಷರಾಗಿ ವಚನ ಸ್ವೀಕರಿಸುವ ಕಾರ್ಯಕ್ರಮಕ್ಕೆ ಕಮಲಾದೇವಿಗೆ ಆಮಂತ್ರಣವಿತ್ತು. ಅವರು ಅಲ್ಲಿನ ಮಹಿಳಾ ಸಂಸ್ಥೆಗಳಿಗೆ ಭೇಟಿ ನೀಡಿದರು. ಪ್ರಸಿದ್ಧ ಸಿಂಗಾಸಿಂಗ್ ಜೈಲನ್ನು ಗಮನವಿಟ್ಟು ನೋಡಿದರು.

ವಾಶಿಂಗ್ಟನ್‌ನಲ್ಲಿ ಚೀನೀ ರಾಜಧೂತರನ್ನು ಭೇಟಿಯಾದರು. ಹುಯ್–ಶೀ, ದೊಡ್ಡ ವಿದ್ವಾಂಸರು. ಅವರಲ್ಲಿ ತನಗೆ ಪೀಕಿಂಗಿಗೆ ಹೋಗುವ ಮನಸ್ಸಿದೆ ಎಂದು ಕಮಲಾದೇವಿ ಹೇಳಿದರು. ಆಗ ಚೀನಾದಲ್ಲಿ ಅಂತರ್ಯುದ್ಧ ನಡೆಯುತ್ತಿತ್ತು. ಚಿಯಾಂಗ್–ಕೈ–ಶೇಖ್ ಅವರ ರಾಷ್ಟ್ರೀಯ ಚೀನಾ ಅಲ್ಲಿಂದಲೇ ರಾಜ್ಯಭಾರ ನಡೆಸುತ್ತಿತ್ತು. ನ್ಯೂಯಾರ್ಕಿನ ಚೀನೀ ದೂತವಾಸಕ್ಕೆ ಭೇಟಿ ನೀಡುವಂತೆ ಅವರು ಕಮಲಾದೇವಿಗೆ ತಿಳಿಸಿದರು. ಅವರ ಮಾತನ್ನು ಅನುಸರಿಸಿ, ಅಗತ್ಯವಿರುವ ಅನುಮತಿ ಪತ್ರ ಮತ್ತು ಚಿಯಾಂಗ್ ಕೈ ಶೇಖ್ ಅವರ ಆಮಂತ್ರಣವನ್ನು ತರಿಸಿಕೊಂಡರು.

ಮಗ ರಾಮಕೃಷ್ಣ ನ್ಯೂಯಾರ್ಕಿನ ರೇಡಿಯೋ ಟೆಕ್ನಾಲಾಜಿಕಲ್ ಸ್ಕೂಲಿನಲ್ಲಿ ಭರ್ತಿಯಾದನು. ಅವನು ರಕ್ತಗತವಾಗಿ ಬಂದಿದ್ದ ಸಂಗೀತ ಮತ್ತು ನಾಟಕ ಕಲೆಯಿಂದ

ಅನೇಕ ಜನರನ್ನು ಆಕರ್ಷಿಸಿದ. ಕೆಲವೇ ದಿನಗಳಲ್ಲಿ ಅವನು ನೀಡಿದ ಸಂಗೀತ ಕಾರ್ಯಕ್ರಮ ಅಲ್ಲಿ ಜನಪ್ರಿಯವಾಯಿತು.

ಅಮೇರಿಕೆಯಲ್ಲಿ ಪ್ರಕಟವಾದ ವರದಿಯ ಪ್ರಕಾರ ಕಮಲಾದೇವಿಯವರ ಅಮೇರಿಕೆಯ 18 ತಿಂಗಳ ವಾಸ್ತವ್ಯವು ವಿವಿಧ ಕಾರ್ಯಕ್ರಮಗಳಿಂದ ತುಂಬಿಕೊಂಡಿತ್ತು. ವಿಕಲಾಂಗರು ಮತ್ತು ಮಾನಸಿಕವಾಗಿ ಅಸ್ವಸ್ಥರಾಗಿರುವ ಮಕ್ಕಳಿಗೆ ವಿಶೇಷ ತರಬೇತಿಯನ್ನು (ನಂತರ ಇದು ಭಾರತಕ್ಕೆ ಬರಲು ಐವತ್ತು ವರ್ಷಗಳೇ ಹಿಡಿದವು!) ನೀಡುವ ಸಂಸ್ಥೆಗೆ ಅವರು ಭೇಟಿ ನೀಡಿದರು. ಅವರ ಲೇಖನಗಳು ಅಲ್ಲಿಯ ಪತ್ರಿಕೆಗಳಲ್ಲಿ ಪ್ರಕಟಗೊಂಡವು. ಅವರ ಅಮೇರಿಕೆ ವಾಸವು ಬಹಳ ಫಲಪ್ರದವಾಗಿತ್ತು. ಮಹಿಳೆಯರಿಗಾಗಿ ಇರುವಂತಹ ಅನೇಕ ಸಂಸ್ಥೆಗಳ ಕಾರ್ಯವೈಖರಿಯನ್ನು ಅವರು ಹತ್ತಿರದಿಂದ ನೋಡಿ ತಿಳಿದುಕೊಂಡರು. ಬೇರೆ ಬೇರೆ ದೇಶಗಳ ರಾಯಭಾರಿಗಳು ಮತ್ತು ಅಮೇರಿಕೆಯ ಕಾಂಗ್ರೆಸ್ (ಸಂಸತ್ತಿನ) ಸದಸ್ಯರು ಅವರನ್ನು ಊಟ, ಚಹಾ ಕಾರ್ಯಕ್ರಮಗಳಿಗೆ ಆಮಂತ್ರಣ ನೀಡಿದ್ದರು. ಸರ್ವೋನ್ನತ ನ್ಯಾಯಾಲಯದ ನ್ಯಾಯಾಧೀಶರಾದ ಮಿಸ್ಟರ್ ಹೂ ಬ್ಲಾಕ್ ಅವರಂತೂ ಇವರಿಗೆ ಮಧ್ಯಾಹ್ನದ ಊಟವನ್ನೇ ನೀಡಿದರು !

ಅಮೇರಿಕೆಯ ಕಾರ್ಮಿಕ ಮಂತ್ರಾಲಯವು ಭಾರತದ ಮಹಿಳಾ ಕಾರ್ಮಿಕರ ಕುರಿತು ಮಾತನಾಡಲು ಕರೆಯಿಸಿಕೊಂಡಿತು. ಅಲ್ಲಿಯ ಕೃಷಿ ಖಾತೆಯ ಅತ್ಯಂತ ಯಶಸ್ವೀ ನ್ಯೂ-ಡೀಲ್ ಯೋಜನೆಗೆ ಸಂಬಂಧಿಸಿದ ವಿಚಾರಗೋಷ್ಠಿಗೆ ಆಮಂತ್ರಣ ಬಂತು. ಕನ್ಸಾಸ್ ವಿಶ್ವವಿದ್ಯಾಲಯದ ಪದವಿ ಪ್ರದಾನ ಸಮಾರಂಭ ಅವರ ಕೈಯಿಂದಲೇ ನಡೆಯಿತು !

ಅವರು ಅಮೇರಿಕೆಯ ಕಪ್ಪು ಜನರ ದಕ್ಷಿಣ ಸಂಸ್ಥಾನಕ್ಕೆ ಕೂಡಾ ಭೇಟಿ ನೀಡಿದರು. ಆ ದಿನಗಳಲ್ಲಿ ಅಮೇರಿಕೆಗೆ ಹೋಗುತ್ತಿದ್ದ ಭಾರತೀಯ ಪ್ರವಾಸಿಗರು ಕಡಿಮೆ ಇದ್ದರು. ಅದರಲ್ಲಿಯೂ ದಕ್ಷಿಣದ ಯಾವುದೇ ರಾಜ್ಯಕ್ಕೆ ಹೋದವರಲ್ಲಿ ಅವರೇ ಪ್ರಥಮ ಮಹಿಳೆಯಾಗಿದ್ದರು. ನೀಗ್ರೋ (ಈಗಿನ ಬ್ಲಾಕ್ ಅಥವಾ ಆಫ್ರೋ-ಅಮೇರಿಕನ್) ಸಂಸ್ಥೆಯು ಸಂಘಟಿಸಿದ ಕಾರ್ಯಕ್ರಮವನ್ನು ಅವರು ವೀಕ್ಷಿಸಿದರು. ಅವರು ಭೇಟಿಯಾದ ಮೊದಲ ಭಾರತೀಯ ವ್ಯಕ್ತಿ ಕಮಲಾದೇವಿಯಾಗಿದ್ದರು! ಅಲ್ಲಿ ಸೇರಿದ ಜನರಿಗೆ ಇದು ಖುಶಿ ತಂದ ಸಂದರ್ಭವಾಯಿತು. ಆ ದಿನಗಳಲ್ಲಿ ಅಮೇರಿಕೆಯ ಬಿಳಿ ಮತ್ತು ಕಪ್ಪು ಜನರು ಪರಸ್ಪರ ಭೇಟಿಯಾಗಿ ವ್ಯವಹಾರ ನಡೆಸುವುದು, ತಿರುಗಾಡುವುದು ತೀರಾ ಅಪರೂಪವಾಗಿತ್ತು. ಕಮಲಾದೇವಿ ಕಪ್ಪು ಅಮೇರಿಕನರ ಜೊತೆ ಉಳಿದುಕೊಂಡರು. ಅವರ ಸುಖದುಃಖವನ್ನು ವಿಚಾರಿಸಿದರು. ಆಗ ಅಮೇರಿಕೆಯ ಕಪ್ಪು ಜನರು ಶೋಷಿತ ಜನಾಂಗವಾಗಿದ್ದರು. ಅವರಿಗೆ ಭಾರತದ ದಲಿತರಿಗಾಗಿ ನಡೆಯುತ್ತಿರುವ ಕಾರ್ಯಗಳ ಕುರಿತು ಕಮಲಾದೇವಿ ತಿಳಿಸಿದರು.

ಹಾಲಿವುಡ್‌ನಲ್ಲಿ ಪ್ರಿನ್ಸೆಸ್ ಶೆರಿಡ ಎಂಬವರು ಕಮಲಾದೇವಿಗಾಗಿ ನೀಡಿದ ಭೋಜನಕೂಟ ಐತಿಹಾಸಿಕ ಘಟನೆಯಾಯಿತು. ಭಾರತೀಯ ಪದ್ಧತಿಯಂತೆ ನೆಲದಲ್ಲಿ ಕುಳಿತು ಊಟ ಮಾಡಿದ್ದಲ್ಲದೆ ಅಲ್ಲಿಗೆ ಬಂದ ಹೆಚ್ಚಿನವರು ಸೀರೆ ಉಟ್ಟುಕೊಂಡಿದ್ದರು !

ಅಮೇರಿಕೆಯಲ್ಲಿದ್ದಾಗ ಕವನ ವಾಚನ, ಸಾಹಿತ್ಯಗೋಷ್ಠಿಯಂತಹ ಕಾರ್ಯಕ್ರಮಗಳಲ್ಲಿ ಕೂಡಾ ಅವರು ಭಾಗವಹಿಸಿದರು. ನಾಟಕಗಳನ್ನಂತೂ ತಪ್ಪದೆ ವೀಕ್ಷಿಸುತ್ತಿದ್ದರು. ನ್ಯೂಯಾರ್ಕಿನ ಜಗತ್ಪ್ರಸಿದ್ಧ ಸಿಂಗಸಿಂಗ ಕಾರಾಗೃಹವನ್ನು ಮಗನ ಜೊತೆ ನೋಡಿದರು. ಅಲ್ಲಿ ಮರಣದಂಡನೆ ಶಿಕ್ಷೆಯನ್ನು ವಿದ್ಯುತ್ ಕುರ್ಚಿಯ ಮೇಲೆ ನೀಡುವುದನ್ನು ಪ್ರತ್ಯಕ್ಷವಾಗಿ ಕಾಣಲು ರಾಮನ ಮೂಲಕ ಅಲ್ಲಿನ ಅಧಿಕಾರಿ ಗುಂಡಿಯೊತ್ತುವಂತೆ ಮಾಡಿದರಂತೆ !

ಅಮೇರಿಕೆಯಿಂದ ಅವರು ಕೆನಡಾ ತಲುಪಿದರು. ಒಟ್ಟೋವಾ, ಕ್ವಬೆಕ್, ಮಾಂಟ್ರಿಯಲ್ ಪ್ರವಾಸ ಸುಸೂತ್ರವಾಗಿ ನಡೆಯಿತು. ವ್ಯಾಂಕೋವರಿಗೆ ಹೋಗುವ ಸಮಯದಲ್ಲಿ ಕೆನಡಾದಲ್ಲಿ ನಡೆದ ಕರ್ಮಕಾಂಡವನ್ನು ಅವರು ತನ್ನ ಆತ್ಮಚರಿತ್ರೆಯಲ್ಲಿ ವರ್ಣಿಸಿದ್ದಾರೆ. ಅಲ್ಲಿ ಕಾಲೂರುವಷ್ಟರಲ್ಲಿ ವಲಸೆ ಅಧಿಕಾರಿಗಳು ಬಂದ ವಿಮಾನದಲ್ಲಿಯೇ ಹಿಂದೆ ಹೋಗುವಂತೆ ಕಮಲಾದೇವಿಗೆ ತಿಳಿಸಿದರು. ಕಾರಣವೇನೆಂದು ವಿಚಾರಿಸಿದಾಗ, ನಿಮಗೆ ಒಳಬರಲು ಅವಕಾಶ ನೀಡಲಾಗದು ಎಂದು ಮೇಲಿನವರಿಂದ ಅಪ್ಪಣೆಯಾಗಿದೆ ಎಂದು ತಿಳಿಸಲಾಯಿತು! ತಾನು ಮರಳಿ ಹೋಗಲಾರೆನೆಂದು ತಿಳಿಸಿದ ಕಮಲಾದೇವಿ ಅಲ್ಲಿದ್ದ ಬೆಂಚಿನ ಮೇಲೆ ಕುಳಿತು ಬಿಟ್ಟರು. ವಲಸೆ(ಇಮ್ಮಿಗ್ರೇಶನ್) ಅಧಿಕಾರಿ ಮತ್ತೆ ಇಬ್ಬರನ್ನು ಕರೆದುಕೊಂಡು ಬಂದನು. ಕಮಲಾದೇವಿ ತನ್ನ ಸತ್ಯಾಗ್ರಹವನ್ನು ಮುಂದುವರಿಸಿದರು.

ವಿಮಾನ ಬರುತ್ತಿತ್ತು, ಹೋಗುತ್ತಿತ್ತು, ಸಂಜೆಯಾಯಿತು, ರಾತ್ರಿ ಬಂತು. ಕಮಲಾದೇವಿಯದು ಒಂದೇ ಮಾತು: "ನಾನು ಕ್ರಿಮಿನಲ್ ಅಲ್ಲ! ನಾನು ಯಾವುದೇ ಅಪರಾಧ ಎಸಗಿಲ್ಲ! ನಾನು ಹಿಂದೆ ಹೋಗುವುದಿಲ್ಲ!" ಅಧಿಕಾರಿಗಳು ತಮ್ಮಲ್ಲೇ ಮಾತನಾಡಿಕೊಂಡರು. ಕೊನೆಯ ವಿಮಾನ ಕೂಡಾ ಬಂದು ಹೋಗಿಯಾಗಿತ್ತು. ಈಗ ತನ್ನ ಮಿತ್ರಮಂಡಳಿಗೆ ದೂರವಾಣಿಯ ಮೂಲಕ ಸಂಪರ್ಕಿಸುವಂತೆ ಕಮಲಾದೇವಿಗೆ ಅನುಮತಿ ದೊರೆಯಿತು! ಬೆಳಿಗ್ಗೆ ವಿಮಾನ ನಿಲ್ದಾಣಕ್ಕೆ ಬಂದು ಮರಳಿಹೋದ ಮಿತ್ರರು ಮತ್ತೆ ಬಂದರು. ಮೇಯರ್ ಮತ್ತು ಅವರ ಪತ್ನಿ, ದೊಡ್ಡ ದೊಡ್ಡ ಹೂಗೊಂಚಲುಗಳನ್ನು ಹಿಡಿದು ಅದಕ್ಕಿಂತ ದೊಡ್ಡದಾದ ಕ್ಷಮಾಪಣೆಯನ್ನು ಕೇಳುತ್ತಾ ಹಾಜರಾದರು! ಊಟ-ವಾಸದ ವ್ಯವಸ್ಥೆಯಾಯಿತು.

ಎರಡನೆಯ ದಿನ ಕಮಲಾದೇವಿಯ ಗೌರವಾರ್ಥವಾಗಿ ಮೇಯರ್ ರಾತ್ರಿ ಭೋಜನವನ್ನು ಆಯೋಜಿಸಿದರು. ವಲಸೆ ಅಧಿಕಾರಿಗೆ ಕೂಡಾ ಕರೆ ಹೋಯಿತು. ಅವರಿಗೆ ಕಮಲಾದೇವಿಯ ಹತ್ತಿರವೇ ಕುಳಿತುಕೊಳ್ಳುವ ವ್ಯವಸ್ಥೆಯೂ ಆಯಿತು. ಆ ಅಧಿಕಾರಿ ಗೌರವಪೂರ್ವಕವಾಗಿ ಮಾತುಕತೆ ನಡೆಸುತ್ತಾ, ಕೊನೆಗೆ "ಸ್ಕಾಟ್‌ಲ್ಯಾಂಡ್‌ಯಾರ್ಡ್ (ಇಂಗ್ಲೆಂಡ್)ನಿಂದ ಅವರ (ಕಮಲಾದೇವಿಯ) ವಿಚಾರದಲ್ಲಿ ಜಾಗ್ರತೆಯಾಗಿ ಇರುವಂತೆ ಎಚ್ಚರಿಕೆ ಬಂದಿತ್ತು" ಎಂದು ಹೇಳಿದರು. ಕೆನಡಾ ಆಗ ಇಂಗ್ಲೆಂಡಿನ ಅಧಿಕಾರದಲ್ಲಿ ಇತ್ತು. ದೇಶದ್ರೋಹಿ ಭಾವ ವೀರೇಂದ್ರ ನಾಥರ ಜೊತೆ ಯುರೋಪಿನಲ್ಲಿ ಅಡ್ಡಾಡಿದ ಅಪರಾಧ ಅವರನ್ನು ಬೆನ್ನಟ್ಟಿ ಇಲ್ಲಿವರೆಗೆ ಬಂದಿತ್ತು.

ಕಮಲಾದೇವಿ ಹೊನಲೂಲು ಮೇಲಿಂದ ಜಪಾನಿಗೆ ಹೋದರು.

# ವಿಶ್ವ ಸಂಚಾರ: ಅಸೀಮ ಸಾಹಸ

## (ಪೂರ್ವರಂಗ– 2)

ಕಮಲಾದೇವಿ ಅಮೇರಿಕೆಯಿಂದ ಜಪಾನ್ ತಲುಪಿದರು. ಅಲ್ಲಿಯೂ ಸುಖದ ಸಂಕ್ರಾಂತಿ ಇರಲಿಲ್ಲ! ಕೊರಿಯಾ ಮತ್ತು ಚೀನಾದ ಹಲವು ಪ್ರದೇಶಗಳನ್ನು ಜಪಾನ್ ಆಕ್ರಮಿಸಿ ಕೊಂಡಿತ್ತು. ಅವರ ವೈರತ್ವವು ಇಂಗ್ಲೆಂಡ್ ಮತ್ತು ಸಾಮ್ರಾಜ್ಯಶಾಹಿ ಯುರೋಪ್ ದೇಶಗಳ ವಿರುದ್ಧ ಇದ್ದ ಕಾರಣ ಅವರಿಗೆ ಭಾರತೀಯರ ಕುರಿತು ಸಹಾನುಭೂತಿ ಇತ್ತು. ಈ ಸಹಾನುಭೂತಿ ಪರಸ್ಪರ ಇರಬಹುದೆಂಬುದು ಜಪಾನ್ ಸರಕಾರದ ನಂಬಿಕೆಯಾಗಿತ್ತು. ಜಪಾನ್ ಆಕ್ರಮಣಶೀಲ ಸಾಮ್ರಾಜ್ಯಶಾಹಿಯಾಗಿದ್ದರೂ ಕೂಡಾ, ಅದು ತನ್ನ ಹೊಸ ಆಡಳಿತ ಅಥವಾ ನವೀನ ಸರಕಾರವೆಂದು ಪ್ರಚಾರ ನಡೆಸುತ್ತಿತ್ತು. ಕೆಲವೇ ವರ್ಷಗಳಲ್ಲಿ ಜಪಾನ್ ಏಷ್ಯಾದ ಬಲಶಾಲಿ ರಾಷ್ಟ್ರವಾಗಿ ಪಾಶ್ಚಾತ್ಯ ದೇಶಗಳಿಗೆ ಇದೇ ರೀತಿಯ ಕಂಪನವನ್ನು ತಂದಿತು! ಕ್ರಾಂತಿಕಾರಿ ಮತ್ತು ಕಲಾಪ್ರೇಮಿಯೆಂದು ಗುರುತಿಸಿಕೊಂಡ ಕಮಲಾದೇವಿಗೆ ಅವರಿಂದ ಹಾರ್ದಿಕ ಸ್ವಾಗತ ದೊರೆಯಿತು. ಕಮಲಾದೇವಿಯವರು ತಮ್ಮ ಸಾಧನೆಯನ್ನು ಪ್ರತ್ಯಕ್ಷವಾಗಿ ಕಂಡು ಅದರ ಪ್ರಚಾರ ಭಾರತದಲ್ಲಿ ಮಾಡಬಹುದೆಂಬ ಆಶೆ ಜಪಾನಿಯರದ್ದಾಗಿತ್ತು!

ಆದರೆ ಅಲ್ಲಿ ನಡೆದದ್ದೇ ಬೇರೆ! ಸ್ವತಂತ್ರ ವಿಚಾರವನ್ನು ಹೊಂದಿರುವ ಕಮಲಾದೇವಿಗೆ ಅಹಿಂಸೆಯಲ್ಲಿ ವಿಶ್ವಾಸವಿತ್ತು. ಗಾಂಧಿತತ್ವವಾದಿಯಾಗಿದ್ದ ಅವರು ಚೀನಾ ಮತ್ತು ಇತರ ದೇಶಗಳ ಮೇಲೆ ಜಪಾನ್ ನಡೆಸಿದ ಆಕ್ರಮಣವನ್ನು ಖಂಡಿಸಿದರು. ಪಶ್ಚಿಮದ ವಸಾಹತುವಾದದ ಮತ್ತೊಂದು ವೈರುಧ್ಯವಿದು ಎಂದು ಹೇಳಿದರು. "...ಜಪಾನಿನ ಈ ಹೊಸ ಕ್ರಮವು ತನ್ನನ್ನು ತಾಂತ್ರಿಕ ರೂಪದಲ್ಲಿ ಸಬಲ ಆಡಳಿತವಾಗಿ ಸ್ಥಾಪಿಸುವ ದಿಕ್ಕಿನಲ್ಲಿ ಇದೆ. ಪಶ್ಚಿಮದ ಬೇರೆ ಬೇರೆ ದೇಶಗಳಿಂದ ಕಚ್ಚಾಸಾಮಾಗ್ರಿಗಳನ್ನು ತಂದು, ಪಕ್ಕಾ ವಸ್ತುಗಳನ್ನು ತಯಾರಿಸಿ ಮತ್ತೆ ಅದೇ ದೇಶಕ್ಕೆ ಮಾರುವುದರಲ್ಲಿ ಮತ್ತು ಪ್ರಬಲ ಸೈನ್ಯವನ್ನು ಕಟ್ಟುವುದರಲ್ಲಿ ಜಪಾನ್ ಮಗ್ನವಾಗಿದೆ! ಇದು ಬ್ರಿಟಿಷರದೇ ಧೋರಣೆಯಾಗಿದೆ! ಯಾರಿಗೂ ಶೋಭಿಸುವಂತಹ ವಿಚಾರವಿದಲ್ಲ" ಎಂದು ಸಾರ್ವಜನಿಕ ಸಭೆಯಲ್ಲಿ ಅವರು ಸ್ಪಷ್ಟವಾಗಿ ಹೇಳಿದರು. ಅವರ ಮಾತು ಜಪಾನಿನ ಆಡಳಿತವ್ಯವಸ್ಥೆಗೆ ಇಷ್ಟವಾಗಲಿಲ್ಲವೆಂದು ಬೇರೆ ಹೇಳಬೇಕಿಲ್ಲ!

ಆದರೆ ಜಪಾನಿನ ಕಲಾಪ್ರೇಮಿಗಳು, ಮಹಿಳೆಯರು, ಮತ್ತು ಅಲ್ಲಿ ಖಾಯಂ ಆಗಿ ನೆಲೆಸಿರುವ ಭಾರತೀಯರಿಂದ ಅವರಿಗೆ ಹೃತ್ಪೂರ್ವಕ ಸ್ವಾಗತ ದೊರೆಯಿತು. ಅವರು ತಮ್ಮ ಭಾಷಣದಲ್ಲಿ ಭಾರತದ ಸ್ವಾತಂತ್ರ್ಯ ಚಳವಳಿಯ ಸ್ಪಷ್ಟ ಪರಿಚಯವನ್ನು ನೀಡುತ್ತಾ ಬಂದರು. ಜೊತೆಗೆ ಚೀನಾಕ್ಕೆ ಜಪಾನ್ ಮಾಡಿದ ಅನ್ಯಾಯದ ಉಲ್ಲೇಖವನ್ನು ಕೂಡಾ ಮಾಡುತ್ತಿದ್ದರು. ಅದರ ಪರಿಣಾಮ ಆಗಿಯೇಬಿಟ್ಟಿತು!

ಕಮಲಾದೇವಿ ಟೋಕಿಯೋದಿಂದ ಜಪಾನ್ ಆಕ್ರಮಿಸಿದ ಚೀನಿ ಪ್ರದೇಶಕ್ಕೆ ಹೊರಟುನಿಂತರು. ಅವರು ಹೊರಡುವ ನಾಲ್ಕು ಗಂಟೆಗಳಿಗಿಂತ ಮೊದಲು ಆಕ್ರಮಿತ ಚೀನಾದಲ್ಲಿ ಇದ್ದಂತಹ ಜಪಾನ್ ಮಿಲಿಟರಿ ಆಡಳಿತವು ಅವರ ಪ್ರವಾಸದ ಮೇಲೆ

ಪ್ರತಿಬಂಧವನ್ನು ಹೇರಿತು! ಅವರು ಟೋಕಿಯೋ ಕಚೇರಿಯನ್ನು ಸಂಪರ್ಕಿಸಿದರು. ಅವರು ಈ ವಿಚಾರದಲ್ಲಿ ತಮ್ಮ ಅಸಹಾಯಕತೆಯನ್ನು ವ್ಯಕ್ತಪಡಿಸಿದರು. ಚುಕಿಂಗಿಗೆ ಹೋಗುವುದು ಬೇಡವೆಂದು ಮಹಿಳಾ ಅಧಿಕಾರಿಯೊಬ್ಬರು ನಮ್ರತೆಯಿಂದ ಅವರಿಗೆ ಸೂಚಿಸಿದರು. ಯುದ್ಧದ ಸಮಯದಲ್ಲಿ ಜುಂಕಿಂಗ್ ನಗರ ಚೀನಾದ ರಾಜಧಾನಿಯಾಗಿತ್ತು. ಜಪಾನ್ ಸರಕಾರವು ತಾನು ಆಕ್ರಮಿಸಿದ ಪ್ರದೇಶಕ್ಕೆ ತನ್ನನ್ನು ಹೋಗದಂತೆ ತಡೆದದ್ದು ಸಹಜವೆಂದು ಕಮಲಾದೇವಿಗೆ ಕೂಡಾ ಅನಿಸಿತು. ಯಾಕೆಂದರೆ ಅವರ ಆಕ್ರಮಣವನ್ನು ಕಮಲಾದೇವಿ ವಿರೋಧಿಸುತ್ತಾ ಬಂದವರಾಗಿದ್ದರು.

ಚುಕಿಂಗಿಗೆ ಹೋಗುವುದು ಸಾಧ್ಯವಿಲ್ಲವೆಂದು ತಿಳಿದ ನಂತರ ಯೋಚನೆಗೀಡಾದ ಕಮಲಾದೇವಿ, ಶಾಂಗೈಗೆ ಹೋಗುವ ನಿರ್ಧಾರ ಕೈಗೊಂಡರು. ಅಲ್ಲಿ ಚಾಂಗ್-ಕೈ-ಶೇಕ್‌ರ ರಾಷ್ಟ್ರೀಯ ಚೀನಿ ಸರಕಾರದ ಸಮಾಜಕಲ್ಯಾಣ ಮಂತ್ರಿಗೆ ಮನವಿ ಸಲ್ಲಿಸಿದರು, "ನಾನು ವಿದೇಶಿಯಳಲ್ಲ! ನಾನು ಭಾರತೀಯಳು. ಪೂರ್ವದೇಶವೊಂದರ ನಾಗರಿಕಳು. ನನಗೆ ಪ್ರತಿಬಂಧವನ್ನು ಯಾಕೆ ಹಾಕುತ್ತೀರಿ?" ನಾನಕಿಂಗ್‌ಗೆ ಕರೆ ಮಾಡಿ ಅನುಮತಿಯನ್ನು ತರಿಸಿಕೊಟ್ಟ ಮಂತ್ರಿ, "ಯಾವಾಗ ಹೋಗುತ್ತೀರಿ?" ಎಂದು ವಿಚಾರಿಸಿದರು. "ನಾಳೆಯೇ" ಎಂಬ ಉತ್ತರ ಬಂತು. ತಡ ಮಾಡಿದರೆ ನಡೆಯಬೇಕಾದ ಕಾರ್ಯ ನಡೆಯುವುದಿಲ್ಲ! ಎನ್ನುವುದು ಅವರ ಅನುಭವ.

ಅಗತ್ಯವಿದ್ದ ಆ ಸರಕಾರಿ ಅನುಮತಿ ಪತ್ರವನ್ನು ತೆಗೆದುಕೊಂಡು ಶಾಂಗೈ ರೈಲ್ವೇ ನಿಲ್ದಾಣವನ್ನು ತಲುಪಿದರು. ಅಲ್ಲಿ ನೋಡಿದರೆ ನೂರಾರು ಜನರು ಕ್ಯೂನಲ್ಲಿ ನಿಂತಿದ್ದಾರೆ! ಚೀನಿಯರಲ್ಲದವರಿಗೆ ಬೇರೆ ದ್ವಾರವಿದೆಯೆಂದು ತಿಳಿದು ಅಲ್ಲಿಗೆ ಹೋದರು. ಅಲ್ಲಿ ನಾನ್‌ಕಿಂಗ್‌ಗೆ ಹೋಗುವ ಯಾವುದೇ ರೈಲು ಇಲ್ಲವೆಂದು ಗೊತ್ತಾಯಿತು. ಕೆಲವೇ ಸಮಯದ ಮೊದಲು ಚೀನೀ ಗೆರಿಲ್ಲಾಗಳು ಆ ದಾರಿಯ ರೈಲಿನ ಮೇಲೆ ಬಾಂಬ್ ಹಾಕಿ ಸ್ಫೋಟಿಸಿದ್ದರು. ಇಂತಹ ಘಟನೆ ಇಲ್ಲಿ ಸಾಮಾನ್ಯವೆಂದು ತಿಳಿಯಿತು. ಅವರು ಅಲ್ಲಿಯೇ ಕಾಯುತ್ತಾ ಕುಳಿತರು.

ಸಂಜೆ ಜಪಾನ್ ವಿನ್ಯಾಸದ ನಿಧಾನ ರೈಲೊಂದು ಬಂತು. ಅದರ ಬೋಗಿಗಳಲ್ಲಿ ಜಪಾನಿ ಸೈನಿಕರೇ ತುಂಬಿಕೊಂಡಿದ್ದರು. ಪ್ಲಾಟ್‌ಫಾರಂ ಮೇಲೆ ಸೈನಿಕರ ಕಾವಲು ಇತ್ತು. ಯುದ್ಧದಿಂದ ಹಾಳುಬಿದ್ದ ನಗರಗಳನ್ನು ನೋಡುತ್ತ ಅವರು ಕಾಲಕಳೆದರು. ನೀರು, ಹಸಿರುಭೂಮಿ ಕಣ್ಣಿಗೆ ಬಿದ್ದರೂ, ಜನವಸತಿ ಮಾತ್ರ ಇಲ್ಲ. ರೈಲು ನಾನ್‌ಕಿಂಗ್ ನಗರ ತಲುಪಿದಾಗ ಎದುರುಗೊಳ್ಳಲು ಯಾರೂ ಬಂದಿರಲಿಲ್ಲ. ಒಬ್ಬ ವ್ಯಕ್ತಿ ಕೂಡಾ ಭೇಟಿಯಾಗಲಿಲ್ಲ. ಅವರು ಲೋಕಲ್ ಬಸ್ ಹಿಡಿದು ಹೆಸರು ತಿಳಿದಿದ್ದ ಹೋಟೇಲೊಂದನ್ನು ತಲುಪಿದರು. ಬೆಳಿಗ್ಗೆ ನಗರ ಸ್ಮಶಾನ ಮೌನದಲ್ಲಿತ್ತು ಎಂದು ಕಮಲಾದೇವಿ ಬರೆದಿದ್ದಾರೆ. ಸ್ವತಂತ್ರ ಚೀನೀ ಸರಕಾರದ ಕಚೇರಿ ಎಲ್ಲಿದೆ? ಎಂದು ಹೋಟೇಲಿನ ಯಾರಿಗೂ ತಿಳಿದಿರಲಿಲ್ಲ. ಎಲ್ಲ ಕಡೆಗಳಲ್ಲಿ ಬಾಂಬ್ ದಾಳಿ ನಡೆದು ಕಟ್ಟಡಗಳು ಕುಸಿದು ಬಿದ್ದಿದ್ದವು. ಹದಿನೈದು ಲಕ್ಷದಷ್ಟು ಜನಸಂಖ್ಯೆಯಿದ್ದ ಊರಿನಲ್ಲಿ ಎರಡು ಲಕ್ಷದಷ್ಟು ಜನರು ಕೂಡ ಇರಲಿಲ್ಲ. ಇಲ್ಲಿಂದ ಚುಕಿಂಗಿಗೆ ಹೋಗುವ ಅವರ ಎಲ್ಲಾ ಪ್ರಯತ್ನಗಳು ನಿಷ್ಫಲಗೊಂಡವು.

ಹಾಂಕಾಂಗ್ ಮೇಲಿಂದ ಚುಕಿಂಗಿಗೆ ಹೋದರೆ ಹೇಗೆ? ಎಂಬ ಯೋಚನೆ ಅವರ ಮನಸ್ಸಿಗೆ ಬಂತು. ಹಾಂಕಾಂಗ್ ಬ್ರಿಟಿಷರ ವಶದಲ್ಲಿತ್ತು. ತಡಮಾಡದೆ ಅವರು ಹಾಂಕಾಂಗಿಗೆ ಹೋಗುವ ಹಡಗನ್ನೇರಿದರು. ಅಲ್ಲಿ ಅನೇಕ ಕಷ್ಟಗಳು ಎದುರಾದವು.

ಅವರ ಹಡಗು ಬಂದರಿನಿಂದ ಬಹಳ ದೂರ ನಿಂತಿತು. ಅಧಿಕಾರಿಯೊಬ್ಬನು ಬಂದು ಅವರಿಗೆ ಪ್ರವೇಶ ನಿಷೇಧಿಸಲಾಗಿದೆ ಎಂಬ ಪ್ರತಿಬಂಧಕ ಪತ್ರವನ್ನು ತೋರಿಸಿದ. "..ಇಂತಹ ಪ್ರತಿಬಂಧಕ ಆಜ್ಞೆಯನ್ನು ಸ್ವೀಕರಿಸುತ್ತಾ ಬಂದಿದ್ದೇನೆ.. ಇದರ ಉಪಯೋಗ ಇಷ್ಟೇ" ಎಂದು ಹೇಳಿ ಆ ಪತ್ರವನ್ನು ಅವರು ಹರಿದು ಬಿಸಾಡಿದರು.

ಅವರ ಪ್ರವೇಶವನ್ನು ನಿಷೇಧಿಸುವುದರಲ್ಲಿ ಬ್ರಿಟಿಷರ ಕೈವಾಡವಿದ್ದುದು ಸ್ಪಷ್ಟವಾಗಿತ್ತು! ಆದರೆ ಅವರು ಪಯಣಿಸಿದ ಹಡಗು ಯುದ್ಧ ಸೇವೆಯದ್ದಾಗಿತ್ತು. ಹಾಂಕಾಂಗ್ ಬಂದರಿಗೆ ಬಂದು ಪ್ರಯಾಣಿಕರನ್ನು ಮತ್ತು ವಸ್ತುಗಳನ್ನು ಕೆಳಗಿಳಿಸುವುದೇ ಅದರ ಕಾರ್ಯವಾಗಿತ್ತು.

ಆದರೆ ಕಮಲಾದೇವಿಗೆ ಹಾಂಕಾಂಗ್ ನಗರಕ್ಕೆ ಹೋಗಲು ಪ್ರತಿಬಂಧವಿತ್ತು. ಅವರು ತಮ್ಮ ಪರಿಚಯದವರಿಗೆ ಕರೆಮಾಡಿದರು. ಮೇಡಂ ಸನಯತ್‌ಸೇನರ ಚೀನೀ ಮತ್ತು ಭಾರತೀಯ ಪರಿಚಿತರು ಅವರನ್ನು ಸ್ವಾಗತಿಸಲು ಬಂದರು. ಕನಿಷ್ಠ ಹೊಟೇಲಿನಲ್ಲಿ ಇರುವುದಕ್ಕಾದರೂ ಕಮಲಾದೇವಿಗೆ ಅವಕಾಶ ಮಾಡಿಕೊಡುವಂತೆ ಕೇಳಿಕೊಂಡು, ಅವರನ್ನು ಹೊಟೇಲಿಗೆ ಕರೆದುಕೊಂಡು ಹೋದರು. ಅಲ್ಲಿ ಭಾರತೀಯ ಆಹಾರದ ವ್ಯವಸ್ಥೆ ಮಾಡಿಕೊಡಲಾಯಿತು. ಆದರೆ ಅವರು ಯಾರನ್ನೂ ಭೇಟಿಯಾಗುವಂತಿಲ್ಲ, ದೂರವಾಣಿ ಕರೆ ಮಾಡಿ ಸಂಪರ್ಕಿಸುವ ಹಾಗಿರಲಿಲ್ಲ.

ಮೇಡಂ ಸನಯತ್‌ಸೇನ್‌ರ ಸೋದರ ಚುಕಿಂಗಿಗೆ ಹೋಗುವ ವ್ಯವಸ್ಥೆ ನಡೆಸಲು ಪ್ರಯತ್ನಿಸಿದ. ಅದರೆ ಹೋಗಲು ಯಾವುದೇ ವಾಹನ ವ್ಯವಸ್ಥೆ ಇರಲಿಲ್ಲ. ರೈಲು ಪ್ರಯಾಣ ಸ್ಥಗಿತಗೊಂಡಿತ್ತು. ಜಪಾನಿನ ಬಾಂಬ್ ದಾಳಿಗೆ ಹೆದರಿ ಹಗಲು ಹೊತ್ತು ವಿಮಾನದ ಹಾರಾಟವಿರಲಿಲ್ಲ. ಹಾಗಾಗಿ ನಡುರಾತ್ರಿ ಹೋಗುವ ವಿಮಾನದಲ್ಲಿ ಚುಕಿಂಗಿಗೆ ತೆರಳಲು ಕಮಲಾದೇವಿ ಸಿದ್ಧರಾದರು. ಅವರ ಆತ್ಮೀಯ ಬಳಗದವರು ಹೋಗುವುದು ಬೇಡವೆಂದು ಕಣ್ಣೀರು ಸುರಿಸಿ ಆಗ್ರಹಪಡಿಸಿದರೂ ಅವರು ವಿಚಲಿತರಾಗಲಿಲ್ಲ! ಅವರು ಪ್ರಯಾಣಿಸುತ್ತಿದ್ದ ವಿಮಾನದ ಚಾಲಕ ಜಪಾನ್ ಎಸೆದ ಬಾಂಬನ್ನು ತಪ್ಪಿಸಿಕೊಂಡು ಅವರನ್ನು ಸುರಕ್ಷಿತವಾಗಿ ಚುಕಿಂಗಿಗೆ ತಲುಪಿಸಿದ.

ಅಲ್ಲಿ ಅವರು ಚಾಂಗ್-ಕೈ-ಶೇಕ್ ಮತ್ತು ಅವರ ಪತ್ನಿಯನ್ನು ಭೇಟಿ ಮಾಡಿದರು. ರಾಷ್ಟ್ರೀಯ ಚೀನಾ ಅಧ್ಯಕ್ಷರಾಗಿದ್ದ ಚಾಂಗ್-ಕೈ-ಶೇಕ್ ಸಾದಾ ಸೀದಾ ಮನುಷ್ಯ. ಅವರು ಚೀನೀ ಶೈಲಿಯ ಉಡುಪು ಧರಿಸಿದ್ದರು. ಅವರಿಗೆ ಇಂಗ್ಲಿಷ್ ಬರುತ್ತಿರಲಿಲ್ಲ. ಇಂಗ್ಲಿಷ್ ಕಲಿತಿದ್ದ ಅವರ ಪತ್ನಿ ಅವರ ಸಂಭಾಷಣೆಯನ್ನು ಭಾಷಾಂತರಿಸುತ್ತಿದ್ದರು. ಆದರೆ ಆಕೆ ಚಾಂಗ್-ಕೈ-ಶೇಖ್ ಹೇಳಿದ ಕೆಲವು ವಿಚಾರಗಳನ್ನು ತನ್ನ ದೃಷ್ಟಿಕೋನದಿಂದ ತಿಳಿಸುತ್ತಿದ್ದಾರೆ ಎನ್ನುವ ಸಂದೇಹ ಕಮಲಾದೇವಿಗೆ ಬಂತು !

ಆ ಪ್ರದೇಶದಲ್ಲಿ ಇಂಡಸ್ಕೋಸ್ ಎಂಬ 3000 ಸಹಕಾರಿ ಸಂಘಗಳು ಇದ್ದವು. ಬಾಂಬ್ ದಾಳಿ ಇದ್ದಾಗಲೂ ಈ ಸಂಘ ಕಾರ್ಯನಿರ್ವಹಿಸುತ್ತಿತ್ತು. ಚೀನಾದಲ್ಲಿ ಸಣ್ಣಪುಟ್ಟ ಉದ್ಯೋಗಗಳ, ಕರಕುಶಲ ಕೆಲಸಗಳ ಸಹಕಾರಿ ಸಂಘ ಕೆಲಸ ನಡೆಸುತ್ತಾ ಇದ್ದವು. ಕಮಲಾದೇವಿ ಚುಕಿಂಗ್ ವಿಶ್ವವಿದ್ಯಾಲಯಕ್ಕೆ ಕೂಡಾ ಭೇಟಿ ನೀಡಿದರು. ಊರಿನ ಹೊರಗೆ ಶೆಡ್ಡಿನಂತೆ ಕಂಡುಬರುತ್ತಿದ್ದ ಗುಡಿಸಲುಗಳಲ್ಲಿ ತರಗತಿಗಳು ನಡೆಯುತ್ತಿದ್ದವು. 'ನಮ್ಮ ಮೂರು ಶತಮಾನದ ಶಿಕ್ಷಣ ಸಂಪ್ರದಾಯವನ್ನು ನಾವು ಬಿಟ್ಟುಕೊಡುವುದಿಲ್ಲ!' ಎಂದು ಅದರ ಉಪಕುಲಪತಿ ತಿಳಿಸಿದರು. ಅದೇ ಸಮಯದಲ್ಲಿ ಜೋರಾಗಿ ಸೈರನ್ ಕೇಳಿಬಂತು. ಎಲ್ಲರೂ ತಳಮನೆ ಆಶ್ರಯಕ್ಕೆ ಓಡಿದರು. ಅಲ್ಲಿನ ತಳಮನೆಯಲ್ಲಿ ವಾಚನಾಲಯ ಮತ್ತು

ಪ್ರಯೋಗಶಾಲೆಗಳಿದ್ದವು. ಸಾಕಷ್ಟು ಬಾಂಬ್ ದಾಳಿ ನಡೆದವು. ಎರಡು ತಾಸಿನ ನಂತರ ಪ್ರತಿಯೊಬ್ಬರೂ ಹೊರಬಂದರು. ಕಟ್ಟಡ ಕುಸಿದು ಬಿದ್ದಿತ್ತು. ಆ ರಾಶಿಯಲ್ಲಿಯೇ ಜಾಗ ಮಾಡಿಕೊಂಡು ವಿದ್ಯಾರ್ಥಿಗಳು ಕುಳಿತುಕೊಂಡರು. ಮತ್ತೆ ತರಗತಿ ಪ್ರಾರಂಭವಾಯಿತು! ಇಬ್ಬರು ವ್ಯಕ್ತಿಗಳು ಮಾತ್ರ ಸಾವನ್ನಪ್ಪಿದ್ದರು. ಅವರು ಓಡಿಹೋಗಿ ಆಶ್ರಯ ಪಡೆದಿಲ್ಲವೆಂದು ಉಳಿದವರು ಮಾತನಾಡಿಕೊಂಡರು. ಈ ರೀತಿಯ ಬಾಂಬ್ ದಾಳಿ ಅಲ್ಲಿ ಪ್ರತಿನಿತ್ಯವೂ ನಡೆಯುತ್ತಿತ್ತು. ಮಾರಣಹೋಮ ನಿರಂತರವಾಗಿತ್ತು. ಚೀನಿ ಮಹಿಳೆಯರು ಬಹಳ ಕ್ಷೇತ್ರದಲ್ಲಿ ಮುಂದುವರಿದಿರುವುದು ಕಮಲಾದೇವಿಯ ಗಮನಕ್ಕೆ ಬಂತು. ಆ ಕಾಲದಲ್ಲಿಯೇ ಕಮಲಾದೇವಿಯ ಪತ್ರಿಕಾಗೋಷ್ಠಿಗೆ ಪುರುಷರಿಗಿಂತ ಮಹಿಳೆಯರೇ ಹೆಚ್ಚು ಸಂಖ್ಯೆಯಲ್ಲಿ ಬಂದಿದ್ದರು. ಚೀನಾದಲ್ಲಿ ಐವತ್ತಕ್ಕೂ ಹೆಚ್ಚು ಮಹಿಳಾ ಪತ್ರಿಕೆಗಳಿದ್ದವು! ಅಲ್ಲಿ ಪ್ರಸಿದ್ಧ ವ್ಯಾಪಾರಿ ಮತ್ತು ಉದ್ಯಮಿ ಮಹಿಳೆಯರಿದ್ದರು. ಒಂದೆಡೆ ಜಪಾನ್ ದಾಳಿ, ಇದನ್ನು ಅನುಸರಿಸಿ ಅಂತರ್ಯುದ್ಧ (ಚಾಂಗ್-ಕೈ-ಶೇಖ್ ಅವರ ರಾಷ್ಟ್ರೀಯ ಚೀನಾ ಮತ್ತು ಮಾವೋ-ತ್ಸೆ-ತುಂಗ್ ಅವರ ಕಮ್ಯುನಿಷ್ಟ ದಳ), ಇದರ ನಡುವೆ ನಾಲ್ಕೂ ದಿಕ್ಕಿನಲ್ಲಿ ನಡೆಯುತ್ತಿರುವ ವಿಧ್ವಂಸಕಾರಿ ಕೃತ್ಯಗಳು, ಇಂತಹ ಸಂದರ್ಭಗಳಲ್ಲಿ ಚೀನೀ ಮಹಿಳೆಯರು ತೋರಿದ ಧೀರ ಮತ್ತು ಸಹನಾಶೀಲ ಪ್ರವೃತ್ತಿಯನ್ನು ಕಮಲಾದೇವಿ ಪ್ರತ್ಯಕ್ಷವಾಗಿ ಕಂಡರು.

ನಂತರ ಅವರು ಚೌ-ಎನ್-ಲಾಯ್ ಅವರನ್ನು ಭೇಟಿಯಾದರು. "ರಷ್ಯಾದ ಮಾದರಿಯನ್ನು ಸ್ವೀಕರಿಸದೆ, ನಮ್ಮ ಕಮ್ಯುನಿಸ್ಟ್ ತತ್ತ್ವವನ್ನು ಆಧರಿಸಿ ಚೀನಾ ದೇಶವನ್ನು ಬೆಳೆಸುವ ಆಲೋಚನೆ ಇದೆ!" ಎಂದು ಅವರು ಸ್ಪಷ್ಟವಾಗಿ ತಿಳಿಸಿದರು. "ಚೀನಾದ ಕೃಷಿಕರೆಲ್ಲರೂ ನಮ್ಮ ಬೆಂಬಲಕ್ಕೆ ಇದ್ದಾರೆ" ಎಂದು ಹೇಳಿದರು. ನಂತರ ಚೀನೀ ಪದ್ಧತಿಯ ಕೃಷಿ, ಮಾರಾಟ, ಗೃಹ ಉದ್ಯೋಗದ ಸಹಕಾರಿ ಸಂಘದ ವೀಕ್ಷಣೆಯನ್ನು ಅವರು ನಡೆಸಿದರು. ನಂತರದ ವರ್ಷಗಳಲ್ಲಿ ಭಾರತೀಯ ಸಹಕಾರಿ ಸಂಘಟನೆಯನ್ನು (ಐ.ಸಿ.ಯು) ಕಟ್ಟುವ ಸಂದರ್ಭದಲ್ಲಿ ಕಮಲಾದೇವಿಗೆ ಇದರಿಂದ ಅಪಾರ ನೆರವು ಒದಗಿಬಂತು.

ಚುಕಿಂಗಿನಿಂದ ಅವರು ಮತ್ತೆ ಹಾಂಕಾಂಗಿಗೆ ಬಂದರು. ಭಾರತಕ್ಕೆ ಮರಳುವುದೆಂದು ನಿರ್ಧಾರವಾಯಿತು. ಅಲ್ಲಿ ಪ್ರತಿದಿನ ಪೊಲೀಸರಿಗೆ ವರದಿ ಮಾಡುವಂತೆ ಅವರಿಗೆ ತಿಳಿಸಲಾಯಿತು. ಆದರೆ ಅವರು ಅದಕ್ಕೆ ಗಮನವನ್ನೇ ಕೊಡಲಿಲ್ಲ. ಸ್ನೇಹಿತರನ್ನು ಮತ್ತು ಅಧಿಕಾರಿವರ್ಗವನ್ನು ಭೇಟಿ ಮಾಡುತ್ತಾ ಇದ್ದರು. "ನಾನು ಇಲ್ಲಿದ್ದೇನೆ, ನನ್ನ ದಾಖಲೆ ಪತ್ರಗಳು ಕೂಡಾ ಇಲ್ಲಿಯೇ ಇವೆ. ನಿಮಗೆ ಬೇಕಾದಹಾಗೆ ನೀವು ನಡೆದುಕೊಳ್ಳಿ" ಎಂದು ಪೊಲೀಸರಿಗೆ ತಿಳಿಸಲು ಅವರು ಮರೆಯಲಿಲ್ಲ!

ಹಾಂಕಾಂಗಿನಿಂದ ಭಾರತಕ್ಕೆ ತೆರಳುವ ದಾರಿಯಲ್ಲಿ ಅವರು ಮನಿಲಾಗೆ (ಫಿಲಿಪೈನ್ಸ್) ಭೇಟಿ ನೀಡಿದರು. ಅಲ್ಲಿಯ ಅಧ್ಯಕ್ಷರು ಕಮಲಾದೇವಿಗಾಗಿ ದೊಡ್ಡದೊಂದು ಸ್ವಾಗತ ಕಾರ್ಯಕ್ರಮವನ್ನು ಇಟ್ಟುಕೊಂಡಿದ್ದರು (1941). ಅಲ್ಲಿಯ ಕರಕುಶಲ ಕೇಂದ್ರಕ್ಕೆ ಅವರು ಭೇಟಿ ನೀಡಿದರು. ಭಾರತೀಯರನ್ನು ಸಂಪರ್ಕಿಸಿದರು. ಆದರೆ ಸಿಂಗಾಪುರ ಮತ್ತು ಪೆನಾಂಗಲ್ಲಿ ಇಳಿಯಲು ಅವರಿಗೆ ಅನುಮತಿ ದೊರೆಯಲಿಲ್ಲ. ಕೊಲೊಂಬೊದಲ್ಲಿ (ಶ್ರೀಲಂಕಾದಲ್ಲಿ) ಹಡಗಿನಲ್ಲಿಯೇ ಇರಬೇಕಾಗಿ ಬಂತು. ಅವರ ಸ್ನೇಹಬಳಗದವರು ಅವರಿಗಾಗಿ ಕಾಯುತ್ತಿದ್ದರು. ಆದರೆ ಊರು ಪ್ರವೇಶಕ್ಕೆ ಗವರ್ನರ್ ಅವರಿಂದ ಅನುಮತಿ ದೊರೆಯಲಿಲ್ಲ. ಆ ದೇಶದ ಪ್ರವಾಸ ಹಡಗಿನಲ್ಲಿಯೇ ಮುಕ್ತಾಯಗೊಂಡಿತು.

ಅಂತೂ ಎರಡು ವರ್ಷಗಳ ವಿಶ್ವಪರ್ಯಟನವನ್ನು ಮುಗಿಸಿ ಕಮಲಾದೇವಿ

ತಾಯ್ನಾಡಿಗೆ ಮರಳಿ ಬಂದರು. ಈ ಅವಧಿಯ ಅವರ ಅನುಭವವು ವೈವಿಧ್ಯಪೂರ್ಣವೂ, ಸಾಹಸಮಯವೂ ಆಗಿತ್ತು. ಅವರ ಬಹಳಷ್ಟು ಲೇಖನಗಳು ಪ್ರಕಟವಾದದ್ದು ಇದೇ ಅವಧಿಯಲ್ಲಿ. ಅವರ ಬರಹಗಳಿಂದ ಸಮಕಾಲೀನ ಜಗತ್ತಿನ ವಿದ್ಯಮಾನಗಳು ನಮಗೆ ಲಭಿಸುತ್ತವೆ. ಜಪಾನ್ ಮತ್ತು ಚೀನಾದ ಅನೇಕ ಘಟನೆಗಳಿಗೆ ಅವರು ಪ್ರತ್ಯಕ್ಷದರ್ಶಿಯಾಗಿದ್ದರು. ಅವರು ಪಕ್ಷ ಅಥವಾ ಸರಕಾರದ ಪ್ರತಿನಿಧಿಯಾಗಿರಲಿಲ್ಲ. ಈ ಕಾರಣದಿಂದ ರಾಜಕಾರಣಿಯಿಂದ ಹಿಡಿದು ಸಾಮಾನ್ಯ ನಾಗರಿಕರು ಕೂಡಾ ಅವರೊಂದಿಗೆ ಮುಕ್ತಮನಸ್ಸಿನಿಂದ ಮಾತನಾಡುತ್ತಿದ್ದರು. ಅವರು ಭೇಟಿಯಾದವರೆಲ್ಲಾ ಆ ಕಾಲದ ಮತ್ತು ನಂತರದ ಜಗತ್ಪ್ರಸಿದ್ಧ ವ್ಯಕ್ತಿಗಳೇ ಆಗಿದ್ದಾರೆ (ರೂಸ್‌ವೆಲ್ಟ್, ಎಲಿನಾರ್ ರೂಸ್‌ವೆಲ್ಟ್, ಮಾರ್ಗರೇಟ್ ಸ್ಯಾಂಗರ್, ಮೊಂಟೆಸರಿ, ಚಾಂಗ್-ಕೈ-ಶೇಕ್, ಐನಸ್ಟೀನ್, ರೊಮೆರೊಲಾ, ಮೇಡಂ ಸನಯತ್‌ಸೇನ್, ಚೌ ಎನ್ ಲಾಯ್, ಜೊಮೊ ಕೆನ್ಯಾಟ್ ಮೊದಲಾದವರು).

ಭಾರತಕ್ಕೆ ಸ್ವಾತಂತ್ರ್ಯ ಬರುವ ಮೊದಲು ಮತ್ತು ನಂತರ, ಕರಕುಶಲ ಮಂಡಳಿಯ ಅಧ್ಯಕ್ಷರಾಗಿದ್ದಾಗ, ತಮ್ಮ ಬಹುಮುಖ ಪ್ರತಿಭೆಯ ಕಾರ್ಯ ನಡೆಸುತ್ತಿದ್ದ ದಿನಗಳಲ್ಲಿ ಅವರು ತಿರುಗಾಡದ ಪ್ರದೇಶವೇ ಇರಲಿಲ್ಲ. ಆಸಕ್ತಿ ತೋರದ ಕ್ಷೇತ್ರವೇ ಇರಲಿಲ್ಲ. 1950-51ರಲ್ಲಿ ಅವರು ಮಧ್ಯಪ್ರಾಚ್ಯ ದೇಶಗಳಿಗೆ ಹೋಗಿಬಂದರು. ಈಗಿನ ಸ್ಪಷ್ಟ ರೂಪವನ್ನು ತಾಳಿರದ ಈಜಿಪ್ಟ್, ಇಸ್ರೇಲ್, ಇರಾಕ್, ಟ್ರಾನ್ಸ್ ಜೋರ್ಡನ್, ಪ್ಯಾಲೆಸ್ತೇನ್ ರಾಷ್ಟ್ರಗಳಿಗೆ ಭೇಟಿ ನೀಡಿ ಅಲ್ಲಿಯ ಗಣ್ಯ ವ್ಯಕ್ತಿಗಳನ್ನು ಭೇಟಿಯಾಗಿ ಸಂದರ್ಶನಗಳನ್ನು ನಡೆಸಿದ್ದೂ ಇದೆ. 1951ರಲ್ಲಿ ಪೂರ್ವ ಆಫ್ರಿಕಾಗೆ ಹೋದ ಸಂದರ್ಭದಲ್ಲಿ ಜೊಮೊ ಕೆನ್ಯಾಟ್ ಅವರನ್ನು ಭೇಟಿಯಾದರು. 1953ರಲ್ಲಿ ಅವರು ಪಶ್ಚಿಮ ಆಫ್ರಿಕಾಗೆ ಹೋದರು. ಅಲ್ಲಿನ ದೇಶೀ ಕರಕುಶಲ ಕಾರ್ಯದ ಅಧ್ಯಯನ ನಡೆಸಿದರು. ಮುಖ್ಯವಾಗಿ ಘಾನಾ ಮತ್ತು ನೈಜೀರಿಯಾ ದೇಶಗಳದು. ಆಗ ಅಧ್ಯಕ್ಷರಾಗಿದ್ದ ಎನ್ ಕುಮಾಲೆಯ ಸಂದರ್ಶನ ನಡೆಸಿದರು.

ಆಫ್ರಿಕಾದ ನೀಗ್ರೋ ಕಲಾ ಉತ್ಸವ ನಡೆದ ಸಂದರ್ಭದಲ್ಲಿ (1967) ಸೆನೆಗಲಿನ ರಾಜಧಾನಿಗೆ ವಿಶೇಷ ಆಮಂತ್ರಿತರಾಗಿ ಬಂದಿದ್ದ ಏಷ್ಯಾ ಖಂಡದ ಏಕೈಕ ಪ್ರತಿನಿಧಿ ಕಮಲಾದೇವಿಯಾಗಿದ್ದರು! ಅಲ್ಲಿ ಅವರಿಗೆ ರಾಷ್ಟ್ರಪತಿಯ ಆತಿಥ್ಯ ದೊರೆತಿತ್ತು.

ಅಫಘಾನಿಸ್ತಾನಕ್ಕೆ ಹೋಗಿ ಅಲ್ಲಿನ ಕರಕುಶಲ ಕಲೆ ಮತ್ತು ಮಣ್ಣಿನ ಕಲಾತ್ಮಕ ವಸ್ತುಗಳಿಗೆ ಅವರು ಪ್ರಚಾರ ನೀಡಿದರು. ಅವರ ಕುಶಲಕರ್ಮಿಗಳಿಗೆ ಭಾರತದಲ್ಲಿ ತರಬೇತಿ ನೀಡುವುದು ಮತ್ತು ಎರಡೂ ದೇಶಗಳ ಕರಕುಶಲ ವಸ್ತುಗಳ ವಿನಿಮಯದ ವ್ಯವಸ್ಥೆಯನ್ನು ಅವರು ಮಾಡಿದರು.

ಕಮಲಾದೇವಿ ತನ್ನ ನಿರ್ಭಯ ಸ್ವಭಾವ, ಸ್ಪಷ್ಟ ಉದ್ದೇಶ ಮತ್ತು ಪ್ರಾಮಾಣಿಕ ಮಾತಿನಿಂದ ಪ್ರಸಿದ್ಧರಾದರು. ಎಷ್ಟೋ ಕಷ್ಟಗಳ ನಡುವೆ, ಯುದ್ಧ ನಡೆಯುತ್ತಿರುವಾಗ, ತಿಳಿಯದಿರುವ, ಅತಿ ದೂರದ ಅನಿಶ್ಚಿತ ವಾತಾವರಣದಲ್ಲಿ ನಡೆಸಿದ ಅವರ ಸಂಚಾರ ಮಹತ್ವದ್ದಾಗಿ ಉಳಿಯಿತು. ಅವರು ಭಾರತದ ರಾಜಕೀಯ, ಸಾಮಾಜಿಕ, ಇತಿಹಾಸದ ಪ್ರತ್ಯಕ್ಷದರ್ಶಿಯಾಗಿದ್ದಾರೆ. ಮತ್ತು ಪ್ರಮುಖ ಘಟನೆಯಾಗಿದ್ದಾರೆ! ಅದೇ ರೀತಿ ಅಸೀಮ ಧೈರ್ಯ, ಸಾಹಸ, ಮತ್ತು ಪ್ರಸಂಗಾವಧಾನದ ಪ್ರತೀಕವಾಗಿದ್ದಾರೆ.

ಅವರ ಈ ತಿರುಗಾಟವು ಉತ್ತಮ ಮತ್ತು ರೋಚಕ, ರೋಮಾಂಚಕಾರಿ ಚಲನಚಿತ್ರವಾಗಲು ಅರ್ಹವಾಗಿದೆ. ಈ ರೀತಿಯ ಅನೇಕ ಘಟನೆಗಳನ್ನು ಅವರು ತಮ್ಮ ಆತ್ಮಕಥಾನಕದಲ್ಲಿ ಮತ್ತು ಬೇರೆ ಪತ್ರಿಕೆಗಳಲ್ಲಿ ಬರೆದದ್ದು ಇದೆ.

ಅಧ್ಯಾಯ : ೬

# ನಿರಾಶ್ರಿತರಿಗಾಗಿ ಸಹಕಾರಿ ಸಂಘಟನೆ

1947ನೇ ಇಸವಿ ಆಗಸ್ಟ್ ತಿಂಗಳ 15ನೇ ತಾರೀಖಿನ ದಿನ ಉದಯಿಸಿತು. ಸುಮಾರು ನೂರು ವರ್ಷಗಳ ಸ್ವಾತಂತ್ರ್ಯ ಹೋರಾಟ ಮುಕ್ತಾಯಗೊಂಡಿತು. ಭಾರತದೇಶ ಸ್ವತಂತ್ರ ವಾಯಿತು. ಆದರೆ ಅದರೊಂದಿಗೆ ನಡೆದ ದೇಶವಿಭಜನೆಯಿಂದ ಈ ಭೂಮಿ ವಾಸಿಯಾಗದ ಗಾಯದಿಂದ ಕತ್ತರಿಸಿಹೋಯಿತು! ಮಾರಣಹೋಮ, ಕೊಲೆ, ಲೂಟಿಗಳಿಂದ ಹೊಸ ದೇಶ ಪಾಕಿಸ್ತಾನದ ನಿರ್ಮಾಣವಾಯಿತು. ಹಳೇ ದೇಶ ಹಿಂದುಸ್ತಾನದ ರಾಜಧಾನಿ ದೆಹಲಿ ಇದುವರೆಗೆ ಕಂಡಿರದ ಘನಘೋರ ದೃಶ್ಯಗಳಿಂದ ತುಂಬಿಹೋಯಿತು. ದೆಹಲಿಗೆ ಮಹಾಭಾರತ ಯುದ್ಧ, ಮೂರು ಪಾಣಿಪತ ಯುದ್ಧಗಳು ಚಿರಪರಿಚಿತವಾಗಿರಬಹುದು. ಅದು ಪ್ರಾಚೀನ ಕಾಲದ ವಿಚಾರ. ಈ ಶತಮಾನದಲ್ಲಿಯೇ ಹತ್ತು ಲಕ್ಷ ಜನರು ಮನೆಮಠ, ಜಮೀನು, ಧನ-ಜನ-ಮಾನ-ಜೀವದಾನ ಎಲ್ಲಾ ರೀತಿಯಿಂದ ವಂಚಿತವಾಗಿ ಭಾರತಕ್ಕೆ ಬಂದರು. ದೆಹಲಿಯ ಸುತ್ತಮುತ್ತಲ ಹಳ್ಳಿಗಳು, ಖಾಲಿ ಪ್ರದೇಶಗಳು ನಿರಾಶ್ರಿತರ ಶಿಬಿರಗಳಿಂದ ತುಂಬಿಹೋದವು. ಹೊಸದಾಗಿ ಕಣ್ಣು ತೆರೆಯುತ್ತಿದ್ದ ಸ್ವತಂತ್ರ ಭಾರತ ಸರಕಾರಕ್ಕೆ 10 ಲಕ್ಷ ಜನರ ಪುನರ್ವಸತಿಯ ಅಗಾಧ ಸಮಸ್ಯೆಯನ್ನು ಎದುರಿಸುವ ಪ್ರಸಂಗ ಬಂತು.

ಸರಕಾರ ಈ ಮಹಾ ಸಂಕಟವನ್ನು ಕಡಿಮೆ ಮಾಡುವುದಕ್ಕಾಗಿ ಸರಕಾರೇತರ, ಖಾಸಗಿ ವಲಯದ ಜನರೊಂದಿಗೆ ಸೇರಿಕೊಂಡು ಕಾರ್ಯ ನಡೆಸಲು ಪ್ರಾರಂಭಿಸಿತು. ಸ್ವಯಂ ಸೇವಕರು, ವೈದ್ಯರು, ಸಮಾಜಸೇವಕರು ಕೆಲಸವನ್ನು ಹಂಚಿಕೊಂಡು ಜನರ ಮಹಾಪೂರದ ತಾತ್ಕಾಲಿಕ ವ್ಯವಸ್ಥೆಗಾಗಿ ಹಗಲು ರಾತ್ರಿ ಶ್ರಮಪಡುತ್ತಿದ್ದರು. ಕಮಲಾದೇವಿ ಮತ್ತು ಅವರಂತಹ ಕೆಲವು ನೇತಾರರು ಈ ಜನಸಮೂಹದ ಸಮರ್ಪಕ ನಿಯಂತ್ರಣ ನಡೆಸುವುದರಲ್ಲಿ ಮಗ್ನರಾಗಿದ್ದರು. ಸಾಧ್ಯವಿರುವಷ್ಟು ಜನರನ್ನು ಸೇರಿಸಿಕೊಂಡು ಈ ಘೋರ ಸಮಸ್ಯೆಗೆ ಪರಿಹಾರ ಕಂಡುಹಿಡಿಯುವ ವ್ಯವಸ್ಥೆ ನಡೆಸುವುದಕ್ಕಾಗಿ ಹಗಲು ರಾತ್ರಿ ಶ್ರಮಪಡುತ್ತಿದ್ದರು.

ಪ್ರತಿಯೊಬ್ಬರೂ ನಿರ್ದಿಷ್ಟ ಊರಿನ ಶಿಬಿರಗಳ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದರು. ಕಮಲಾದೇವಿಯವರು ದೆಹಲಿ ಸಮೀಪದ ಕಿಂಗ್ಸ್‌ವೇ ಶಿಬಿರಕ್ಕೆ ಪ್ರತಿದಿನ ಭೇಟಿ ನೀಡುತ್ತಿದ್ದರು. ಆಗ ಉತ್ಸಾಹಿ ತರುಣರಾಗಿದ್ದ ಲಕ್ಷ್ಮೀಚಂದ ಜೈನ್ (ನಂತರ ಅವರೊಂದಿಗೆ 40 ವರ್ಷ ಕೆಲಸ ಮಾಡಿದ ಕಾರ್ಯಕರ್ತ; ಸಮಾಜಸೇವಕ) ಅವರು ಈ ನಿರಾಶ್ರಿತರ ಶಿಬಿರವನ್ನು ನೋಡಿ ಕೊಳ್ಳುತ್ತಿದ್ದರು. ಆಹಾರ, ಬಟ್ಟೆ, ಉಚಿತ ವೈದ್ಯಕೀಯ ಸೌಲಭ್ಯ, ಶಿಕ್ಷಣ ಇತ್ಯಾದಿ ವ್ಯವಸ್ಥೆಯನ್ನು ಸರಕಾರ ಮಾಡಿತ್ತು. ಆದರೆ ಇದು ಇವತ್ತು ನಾಳೆಗೇನೋ ಸರಿ, ಆದರೆ ನಾಳೆಯಿಂದ ಮುಂದೆ ಹೇಗೆ? ಎಂದು ಯಾರೂ ಯೋಚಿಸಿರಲಿಲ್ಲ. ಶೂನ್ಯ ಭವಿಷ್ಯವಿರುವ ಲಕ್ಷಲಕ್ಷ ಜನರು ಮುಂದುವರಿಯುವುದು ಹೇಗೆ? ಎನ್ನುವ ವಿಚಾರ ಯಾರನ್ನೂ ಕಾಡಲಿಲ್ಲವೇನು?

ಕಮಲಾದೇವಿಗೆ ಮಾತ್ರ ಈ ಸಮಸ್ಯೆ ತೀವ್ರರೀತಿಯಿಂದ ಕಾಡುತ್ತಿತ್ತು. ಸಂಪದ್ಭರಿತ ಬಲಶಾಲಿ ರಾಷ್ಟ್ರಕ್ಕೆ ಕೂಡಾ ಪರಿಹರಿಸಿಕೊಳ್ಳಲಾಗದ ನಿರಾಶ್ರಿತರ ಸಮಸ್ಯೆ ಇದಾಗಿತ್ತು. ಧನಬಲವಿಲ್ಲ! ಇರುವ ಜನಬಲದಿಂದ ಸಮಂಜಸ ರೀತಿಯಿಂದ ಶ್ರಮ ಮತ್ತು ಫಲ ಬೆಳೆಸಿದರೆ ಮಾತ್ರ ಈ ಜನರ ಪುನರ್ನಿವೇಶನ ಸ್ಪಷ್ಟವಾಗಿ ನಿಶ್ಚಿತವಾಗುವುದು ಸಾಧ್ಯ! ಎಂದು

ಅವರಿಗೆ ಖಚಿತವಿತ್ತು, ಆದರೆ ಮುಂದುವರಿಯುವುದು ಹೇಗೆ?

ಈ ವೇಳೆಯಲ್ಲಿ ಅವರ ವಿಚಾರ ಮಂಥನವು ಸಮಾಜವಾದದಿಂದ ಪ್ರೇರಿತವಾಗಿತ್ತು. ಅವರ ಗಮನ ಜನರನ್ನು ಸಂಘಟಿಸಿ ಅವರಿಂದ ಕೆಲಸವನ್ನು ಮಾಡಿಸಿಕೊಂಡು, ಆ ಜನಶಕ್ತಿಗೆ ರಾಜಕಾರಣದಲ್ಲಿ ವರ್ಚಸ್ಸನ್ನು ತಂದುಕೊಡುವುದರ ದಿಕ್ಕಿನಲ್ಲಿತ್ತು. ಆಗ ಅವರು ಕಾಂಗ್ರೆಸ್ ಸಮಾಜವಾದಿ ಪಕ್ಷದ ಸಕ್ರಿಯ ಸದಸ್ಯರಾಗಿ ಕೂಡಾ ಇದ್ದರು. 1934ರಲ್ಲಿಯೇ ರಾಷ್ಟ್ರೀಯ ಕಾಂಗ್ರೆಸ್ ಪಕ್ಷದ ಕೆಲವು ಮುಖ್ಯ ಧುರೀಣರು, ಯುಸೂಫ್ ಮೆಹರಲ್ಲಿ, ಜಯಪ್ರಕಾಶ ನಾರಾಯಣ, ರಾಮಮನೋಹರ ಲೋಹಿಯಾ, ಅಶೋಕ ಮೆಹ್ತಾ, ಆಚಾರ್ಯ ನರೇಂದ್ರದೇವ್ ಮೊದಲಾದವರು ಪ್ರಮುಖ ಸಮಾಜವಾದಿಗಳಾಗಿದ್ದರು.

ದೇಶದಲ್ಲಿ ರಾಜಕೀಯ ಮತ್ತು ಸಾಮಾಜಿಕ ಸುಧಾರಣಾ ಕಾರ್ಯವು ಎಷ್ಟು ವೇಗವಾಗಿ ನಡೆಯಬೇಕು ಅಷ್ಟು ವೇಗದಲ್ಲಿ ನಡೆಯುತ್ತಿಲ್ಲ ಎಂಬ ಅಸಂತುಷ್ಟಿ ಕಮಲಾದೇವಿಯನ್ನೂ ಸೇರಿಸಿ, ಮೇಲೆ ಉಲ್ಲೇಖಿಸಿರುವ ಮುಖಂಡರಿಗೆ ಇತ್ತು. ಅವರ ಸಹಾನುಭೂತಿ ಸಹಜವಾಗಿ ಮಾರ್ಕ್ಸ್‌ವಾದದ ಕಡೆಗೆ ಹರಿದಿತ್ತು. ಆ ಕಾಲದಲ್ಲಿ ತಾತ್ವಿಕ ರೂಪದಲ್ಲಿ ಸಮತಾವಾದ ಮತ್ತು ಸಮಾಜವಾದದ ನಡುವೆ ಇವತ್ತಿನ ಹಾಗಿನ ಭಾರೀ ಅಂತರವಿರಲಿಲ್ಲ. ಜವಾಹರಲಾಲ್ ನೆಹರೂ ಅವರಿಗೆ ಕೂಡಾ ಸಮಾಜವಾದದ ಕಡೆಗೆ ಒಲವು ಇತ್ತು. ಮತ್ತು ಕೆಲವು ಅಂಶಗಳನ್ನು ಅವರು ಮುಂದೆ ಪ್ರಧಾನ ಮಂತ್ರಿಯಾದ ಬಳಿಕ ಸ್ಪಷ್ಟರೂಪದಿಂದ ವ್ಯಕ್ತಪಡಿಸಿದ್ದನ್ನು ನಾವು ಕಾಣುತ್ತೇವೆ. ಆದರೆ ಸ್ವಾತಂತ್ರ್ಯ ಚಳವಳಿ ತೀವ್ರವಾಗಿದ್ದಾಗ ಬಹುತೇಕ ಧುರೀಣರ ದೃಷ್ಟಿ ಸ್ವಾತಂತ್ರ್ಯ ಪ್ರಾಪ್ತಿಯ ಪ್ರಯತ್ನದಲ್ಲಿಯೇ ಕೇಂದ್ರೀಕೃತವಾಗಿತ್ತು.

ಸಾಮಾಜಿಕ ವಿಷಮತೆಯನ್ನು ಸಣ್ಣಂದಿನಲ್ಲಿಯೇ ಕಂಡವರು ಕಮಲಾದೇವಿ. ಆರ್ಥಿಕ ರೂಪದಲ್ಲಿ ಶೋಷಿತರಾಗಿ ಇದ್ದವರನ್ನು ಕೂಡಾ ಅವರು ತಿಳಿದುಕೊಂಡಿದ್ದರು. ಗಿರಿಜಾಬಾಯಿಯ ಮನಸ್ಸಿಗೆ ವಿರುದ್ಧವಾಗಿ ಕಾರಾಗೃಹದಲ್ಲಿದ್ದಾಗ, ಚಳವಳಿಯ ದಿನಗಳಲ್ಲಿ ಬಡವರ ಮತ್ತು ಮಹಿಳೆಯರ ದೀನಸ್ಥಿತಿಗೆ ಅವರು ಪ್ರತ್ಯಕ್ಷದರ್ಶಿಯಾಗಿದ್ದರು. ದೇಶೀ ಸಂಸ್ಥಾನದ ಬಡವರ ಸ್ಥಿತಿ ಇನ್ನೂ ಶೋಚನೀಯವಾಗಿ ಇದೆ ಎಂಬುದು ಅವರಿಗೆ ತಿಳಿದಿತ್ತು. ಗಾಂಧೀಜಿಯ (ನಂತರ ವಿನೋಬಾ ಅವರ) ಸರ್ವೋದಯದ ಅಥವಾ ಸಮಗ್ರ ಸಮಾಜದ ಜಾಗೃತಿ ಉಂಟಾಗುವ ಕಡೆಗೆ ಯಾವುದೇ ಪ್ರಯತ್ನ ನಡೆದಿಲ್ಲವೆಂದು ಕಮಲಾದೇವಿಗೆ ಬೇಸರವಿತ್ತು. ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ (ಕರ್ನಾಟಕ ಪ್ರದೇಶ) ಸದಸ್ಯರಾಗಿದ್ದರಿಂದ ಮೈಸೂರು ಮತ್ತು ಇತರ ದೇಶೀ ರಾಜರ ಅಧೀನವಿದ್ದ ಪ್ರದೇಶಗಳಲ್ಲಿ ತಿರುಗಾಡಿ ಅವರಿಗೆ ಗೊತ್ತಿತ್ತು. ಅವರು ಯುವ ಅಧಿವೇಶನದ ಸದಸ್ಯರಾಗಿದ್ದ ಹಾಗೇ ಕಾಂಗ್ರೆಸ್ ಸಮಾಜವಾದಿ ಪಕ್ಷದ ಸದಸ್ಯೆ ಕೂಡಾ ಆಗಿದ್ದರು.

ಈ ಸಮಾಜವಾದಿಗಳು ಎತ್ತಿಹಿಡಿದ ಅಂಶಗಳೆಂದರೆ 1. ಲಿಂಗಭೇದವನ್ನು ತೊಲಗಿಸುವುದು. ಎಲ್ಲಾ ಕ್ಷೇತ್ರಗಳಲ್ಲಿ ಪುರುಷರು ಮತ್ತು ಮಹಿಳೆಯರಿಗೆ ಸಮಾನ ಅಧಿಕಾರ, 2. ಕಾರ್ಮಿಕರಿಗೆ ಮತ್ತು ಕೃಷಿಕರಿಗೆ ಹೆಚ್ಚು ಪ್ರಾತಿನಿಧ್ಯ ಮತ್ತು ಅಧಿಕಾರ, 3. ಪ್ರಗತಿಪರ ಯೋಜನೆಗಳಲ್ಲಿ ಸರಕಾರದ ಪ್ರಧಾನ ಪಾತ್ರ, 4. ಸಹಕಾರಿ ರೂಪದಿಂದ ಜನರು ನಡೆಸುವ ಎಲ್ಲಾ ಕಾರ್ಯಗಳಿಗೆ ಸರಕಾರದ ಪ್ರೋತ್ಸಾಹ, 5. ಎಲ್ಲಾ ಕಾರ್ಮಿಕರಿಗೆ ಮತ್ತು ಕೃಷಿಕರಿಗೆ ವಿಮೆ ಮತ್ತು ಕ್ಷೇಮನಿಧಿಯ ಸೌಲಭ್ಯವನ್ನು ಒದಗಿಸುವುದು, 6. ಅವರಿಗೆ ಅಪಘಾತ ಮತ್ತು ಪ್ರಾಣಾಪಾಯ ಪ್ರಸಂಗಗಳಲ್ಲಿ ಆರ್ಥಿಕ ಸಹಾಯ ನೀಡುವಿಕೆ.

ಇದರಲ್ಲಿ ಕೆಲವು ಅಂಶಗಳು ದೇಶಕ್ಕೆ ಸ್ವಾತಂತ್ರ್ಯ ದೊರೆತ ನಂತರ ನಮಗೆ ಲಭ್ಯವಾಗಿವೆ.

ಆದರೆ ಅದಕ್ಕಿಂತ ಮೊದಲು ಇವುಗಳು ಕಿವಿಗೆ ಕೂಡಾ ಬೀಳುತ್ತಿರಲಿಲ್ಲ.

ಸರಕಾರದ ಬೆಂಬಲ ದೊರಕಿದರೆ ಸಾಕಷ್ಟು ಜೀವನೋಪಯೋಗಿ ಕಾರ್ಯಗಳನ್ನು ನಡೆಸಬಹುದೆಂದು ಕಮಲಾದೇವಿಗೆ ಕಂಡಿತು. ಅವರು ತಮ್ಮ ಯುರೋಪು ಪ್ರವಾಸದಲ್ಲಿ ನಾರ್ವೆ, ಸ್ವೀಡನ್, ಡೆನ್ಮಾರ್ಕಿನಲ್ಲಿದ್ದ ಜನರ ಸಹಕಾರಿ ಸಂಘಗಳನ್ನು ನೋಡಿದ್ದಾರೆ. ಜನರು ದೈನಂದಿನ ಕೆಲಸಗಳೊಂದಿಗೆ ಕೃಷಿ, ಡೈರಿ, ಚಿಕಿತ್ಸೆಯ ಕಾರ್ಯಗಳನ್ನು ಹಂಚಿಕೊಂಡು, ಅವರ ಕೆಲಸಗಳಿಗೆ ಅದೇ ಬಾಧ್ಯಸ್ಥವಾಗಿದ್ದು, ಉತ್ತಮ ರೀತಿಯಲ್ಲಿ ದಿನನಿತ್ಯದ ಬದುಕನ್ನು ಸಾಗಿಸುವುದನ್ನು ಕಂಡಿದ್ದಾರೆ. ಯಾದವೀ ಕಲಹ ಮತ್ತು ಜಪಾನಿನ ಆಕ್ರಮಣದಿಂದ ಕುಗ್ಗಿಹೋಗಿರುವ ಚೀನಾದೇಶದಲ್ಲಿ, ಸಣ್ಣಸಣ್ಣ ಸಹಕಾರಿ ಸಂಸ್ಥೆಗಳು ಒಟ್ಟುಗೂಡಿ ಕೆಲಸ ನಡೆಸುತ್ತಾ, ಪರಿಸ್ಥಿತಿ ಎಷ್ಟು ಕಠಿಣವಾದರೂ ಅದನ್ನು ಧೈರ್ಯದಿಂದ ಎದುರಿಸಿ ಮುಂದುವರಿಯುವುದನ್ನು ಗಮನಿಸಿದ್ದಾರೆ. ಅವರಿಗೆ ಸಹಕಾರದ ಬಲದಿಂದ ನಿರಾಶ್ರಿತರ ಸಂಕಟವನ್ನು ದೂರ ಮಾಡುವ ವಿಚಾರ ಹೊಳೆಯಿತು. ಆದರೆ ಭಾರತದಲ್ಲಿ, ಎಲ್ಲಿಯೂ ಸಹಕಾರಿ ರೂಪದಿಂದ ಆರ್ಥಿಕ ಸಮಸ್ಯೆಯನ್ನು ಪರಿಹರಿಸುವ ಪ್ರಯತ್ನ ಇರಲಿಲ್ಲ. ದೆಹಲಿಯಲ್ಲಿ ಹೆಸರಿಗಷ್ಟೇ ಇದ್ದಂತಹ ಸಹಕಾರಿ ಸಂಸ್ಥೆಯ ಕಚೇರಿಯು ಉಳಿದ ಸರಕಾರಿ ಖಾತೆ ರೀತಿಯಲ್ಲಿಯೇ, ಸರಕಾರಿ ಪೋಷಿತವಾಗಿ ನಿಷ್ಕ್ರಿಯವಾಗಿದ್ದು ಆಮೆನಡಿಗೆಯಲ್ಲಿ ಮುಂದುವರಿಯುತ್ತಿರುವ ಖಾತೆಯಾಗಿತ್ತು. ಈ ಕ್ಷೇತ್ರದ ಪರಿಣತ ಜನರನ್ನು ವಿಚಾರಿಸೋಣ ಎಂದುಕೊಂಡರೆ ಅವರ ಗಮನಕ್ಕೆ ಯಾರೂ ಬರಲಿಲ್ಲ. ಅವರ ದೃಷ್ಟಿಯಲ್ಲಿ ಜನರ ಆಂತರಿಕ ಸಮಸ್ಯೆಗೆ ಗಮನ ನೀಡಿ ಪರಿಹಾರ ಸೂಚಿಸಬಲ್ಲ ಏಕಮಾತ್ರ ವ್ಯಕ್ತಿ ಮಹಾತ್ಮಗಾಂಧಿ ಆಗಿದ್ದರು. ಅವರನ್ನೇ ಕೇಳುವುದೆಂದು ಕಮಲಾದೇವಿ ನಿಶ್ಚಯಿಸಿದರು.

ಅವರು ತಾನು ಅರ್ಥೈಸಿಕೊಂಡ ರೀತಿಯಲ್ಲಿ ಕೃಷಿಯ ಸಹಕಾರಿ ಸಂಘವನ್ನು ರೂಪಿಸುವ ನೀಲಿನಕ್ಷೆಯನ್ನು ತಯಾರಿಸಿದರು. ಕೃಷಿಗೆ ಪ್ರಾಧಾನ್ಯ ನೀಡಲು ಕಾರಣವೇನೆಂದರೆ, ಅವರ ಉಸ್ತುವಾರಿಯಲ್ಲಿದ್ದ ವಿಭಾಗದಲ್ಲಿ ಪ್ರಾಣ ಉಳಿಸುವ ಸಲುವಾಗಿ ಬಂದಂತಹ ಪಶ್ಚಿಮ ಪಂಜಾಬಿನ ಅಪ್ಪಟ ಕೃಷಿಕ ಜನಾಂಗ ಜಾಂಗ್ ಎಂಬವರು ಅಧಿಕ ಸಂಖ್ಯೆಯಲ್ಲಿದ್ದರು. ಅವರೊಂದಿಗೆ ಕಮಲಾದೇವಿ ವಿಚಾರ ವಿಮರ್ಶೆ ನಡೆಸಿದರು. ಅವರ ಮುಖಂಡರಾದ ಮುಲ್ಕರಾಜ್ ಎಂಬವರಿಂದ ವಿಷಯವನ್ನು ಮನಗಾಣಿಸಿಕೊಂಡ ಬಳಿಕ ಅವರು ಸಹಕಾರಿ ಬೇಸಾಯ ಮಾಡಲು ಸಿದ್ಧರಾದರು.

ಕಮಲಾದೇವಿ ತಾನು ತಯಾರಿಸಿದ ನೀಲಿ ನಕ್ಷೆಯನ್ನು ಹಿಡಿದು ಗಾಂಧೀಜಿಯ ಬಳಿ ಬಂದರು. ಅವರು ಅದನ್ನು ಲಕ್ಷ್ಯವಿಟ್ಟು ನೋಡಿದರು. ನಂತರ ಹೇಳಿದರು, "ನಿನ್ನ ಯೋಜನೆ ಚೆನ್ನಾಗಿದೆ. ಉಪಯುಕ್ತ ಮತ್ತು ವ್ಯಾವಹಾರಿಕವಾಗಿ ಇದೆ. ನಾಳೆ ಬಾ! ವಿವರವಾಗಿ ಮಾತನಾಡೋಣ". ಮರುದಿನ ಕಮಲಾದೇವಿ ಹೋದಾಗ ಬಾಪೂಜಿ ಚಿಂತೆ ಮತ್ತು ಹತಾಶ ಭಾವದಲ್ಲಿ ಇದ್ದರು. "ನಿನಗೆ ಸಹಾಯ ಮಾಡುವ ಪ್ರಯತ್ನ ಮಾಡುತ್ತೇನೆ. ಆದರೆ ಒಂದು ಷರತ್ತು, ನೀನು ಇದರ ಪೂರ್ಣ ಜವಾಬ್ದಾರಿಯನ್ನು ವಹಿಸಿಕೊಳ್ಳಬೇಕು. ಸರಕಾರದ ನೆರವು ಸಿಗದೇ ಹೋಗಬಹುದು. ಇದು ಸಾಧ್ಯವೆನಿಸಿದರೆ ಮುಂದುವರೆಯೋಣ! ನಿನಗೆ ನನ್ನ ಆಶೀರ್ವಾದ ಇದೆ."

ಕಮಲಾದೇವಿ ಸ್ತಂಭಿತರಾದರು. "ನಿರಾಶ್ರಿತರಾಗಿರುವವರು ಕೃಷಿಕರು! ಭೂಮಿಯಿಲ್ಲದೆ ಅವರೇನು ಮಾಡಬಲ್ಲರು? ಭೂಮಿ ಸರಕಾರದ ವಶದಲ್ಲಿ ಇದೆ. ಸರಕಾರ ಇಲ್ಲಿಂದ ಪಾಕಿಸ್ತಾನಕ್ಕೆ ಹೋದವರ ಮತ್ತು ಖಾಲಿ ಇರುವ ಜಮೀನನ್ನು ನೀಡಿದರೆ ಕೊಳ್ಳಬಹುದು"

ಎಂದು ಕಮಲಾದೇವಿ ಹೇಳಿದರು. ಆರು ತಿಂಗಳ ಕಾಲ ಅವರು ಓಡಾಡಿದರು. ಕೊನೆಗೆ ಸಾವಿರ ಜನರು ಹೋಗಿ ಅಲ್ಲಿ ಧರಣಿ ಹೂಡುವುದೆಂದು ನಿರ್ಧಾರವಾಯಿತು. ಅವರು (4000 ಜನರು!) ಧರಣಿ ಹೂಡುವ ಹಿಂದಿನ ದಿನ ಜಮೀನು ಹಂಚಿಕೆಯಾದ ಪತ್ರ ಕೈಸೇರಿತು !

ರಾಮಚಂದ್ರರಾವ್ ಎಂಬ ಗಾಂಧಿವಾದಿ ಕಮಲಾದೇವಿಯ ನೆರವಿಗೆ ಬಂದರು. ಅವರಿಬ್ಬರೂ ದಿನಗಟ್ಟಳೆ ಕುಳಿತು ಗುಂಪಾಗಿ ಕೆಲಸ ಮಾಡಲು ತಯಾರಿದ್ದ ನಿರಾಶ್ರಿತರ ಹೆಸರನ್ನು ನೋಂದಾಯಿಸಿದರು. ಶೀಘ್ರದಲ್ಲಿಯೇ ಏಳೆಂಟು ಸಹಕಾರಿ ಸಂಘಗಳು ಅಸ್ತಿತ್ವಕ್ಕೆ ಬಂದವು. ಅವರು ಸಹಕಾರಿ ಪದ್ಧತಿಯಿಂದ ಬೇಸಾಯ ಪ್ರಾರಂಭಿಸಿದರು.

ದೆಹಲಿಯಿಂದ ಹದಿನಾಲ್ಕು ಮೈಲಿ ದೂರದಲ್ಲಿ ನಿರಾಶ್ರಿತರ ದೊಡ್ಡದೊಂದು ಡೇರೆ ನಗರವೇ ತಲೆಯೆತ್ತಿತು. ಒಂದು ದಿನ ಕಮಲಾದೇವಿಗೆ ಬಂದ ಸುದ್ದಿ ಏನೆಂದರೆ, ಚಂಡ ಮಾರುತ ಬಂದು ಎಲ್ಲ ಡೇರೆಗಳನ್ನು ಹಾರಿಸಿಹೋಗಿದೆ! ಎಂದು. ಅಲ್ಲಿ ಹೋಗಿ ನೋಡಿದರೆ, ಅಸಂಖ್ಯಾತ ಕುಟುಂಬಗಳು ದೊಡ್ಡ ಡೇರೆಯೊಂದರ ಆಶ್ರಯದಲ್ಲಿ ಕುಳಿತಿವೆ. ಡೇರೆ ಹರಿದುಹೋಗಿದೆ. ಜನರು ರಸ್ತೆಯ ನಡುವೆ ಧೂಳಿನಲ್ಲಿ ಕುಳಿತುಕೊಂಡಿರುವ ಹೃದಯ ವಿದ್ರಾವಕ ದೃಶ್ಯ! ಅವರೆಲ್ಲರೂ ವಾಯುವ್ಯ ಸರಹದ್ದಿನ ಪ್ರಾಂತ್ಯದಿಂದ ಬಂದಂತಹ ನಿರಾಶ್ರಿತ ಪಠಾಣರು. ಕಮಲಾದೇವಿ ತಡ ಮಾಡಲಿಲ್ಲ. ನೇರವಾಗಿ ರಾಷ್ಟ್ರಾಧ್ಯಕ್ಷ ರಾಜೇಂದ್ರ ಪ್ರಸಾದರ ಬಳಿ ಹೋದರು. ಸ್ವಂತ ಶ್ರಮದಿಂದ ತಯಾರಿಸಿದ ಯೋಜಿತ ನಗರದ ನೀಲಿ ನಕ್ಷೆಯನ್ನು ಅವರ ಮುಂದೆ ಇಟ್ಟರು. ಸಹಕಾರಿ ಸಂಘ ಮತ್ತು ಈಗ ಸಹಕಾರಿ ನಗರದ ಕಲ್ಪನೆ ರಾಜೇಂದ್ರ ಬಾಬು ಅವರಿಗೆ ಹಿಡಿಸಿತು. ತಕ್ಷಣವೇ ಅವರು ಒಂದು ಮಂಡಳಿಯನ್ನು ಸ್ಥಾಪಿಸಿದರು. ಸ್ವತಃ ಆ ಮಂಡಳಿಯ ಅಧ್ಯಕ್ಷರಾಗಿ ಕೆಲಸ ಮಾಡುವುದಕ್ಕೆ ತಯಾರಾದರು!

ಆದರೆ ಈ ನಿರಾಶ್ರಿತರಿಂದ ಕೆಲಸ ತೆಗೆದುಕೊಳ್ಳುವುದು ಕಠಿಣವಿತ್ತು. ಅದರಲ್ಲಿ ಶೇಕಡಾ 99 ಮಂದಿ ಅಂಗಡಿದಾರರು, ವ್ಯಾಪಾರಿಗಳು, ಗುತ್ತಿಗೆದಾರರು ಆಗಿದ್ದವರು. ಅವರಿಗೆ ಬೇರೆ ಯಾವುದೇ ವೃತ್ತಿ ತಿಳಿದಿರಲಿಲ್ಲ. ಕರಕುಶಲ ಕಲೆಯ ಕಲ್ಪನೆ ಕೂಡಾ ಇರಲಿಲ್ಲ. ಅವರಿಗೆ ಮನೆ ಕಟ್ಟಿಸಿಕೊಡಲು ಗುತ್ತಿಗೆದಾರರು ಮತ್ತು ಕೂಲಿಗಳನ್ನು ತರಿಸಿಕೊಡುವುದಾಗಿ ಸರಕಾರ ತಿಳಿಸಿತು. ಇಲ್ಲಿ ಕಮಲಾದೇವಿಯ ಕರ್ತೃತ್ವ ಮತ್ತು ದಿಟ್ಟತನ ಎಷ್ಟು ಉನ್ನತವಾಗಿತ್ತು ಮತ್ತು ಅವರ ದೂರದೃಷ್ಟಿ ಎಷ್ಟು ಪ್ರಖರವಾಗಿತ್ತು ಎನ್ನುವುದು ತಿಳಿದುಬರುತ್ತದೆ. ಅವರು ನಿರಾಶ್ರಿತ ಮುಖಂಡರ ಸಭೆ ಕರೆದು ಅವರಿಗೆ ಸ್ಪಷ್ಟವಾಗಿ ತಿಳಿಸಿದ್ದೇನೆಂದರೆ, "ನೀವು ಸ್ವಾಭಿಮಾನಿ ಜನಾಂಗ! ನಿಮ್ಮದೆನ್ನುವ ಎಲ್ಲವನ್ನೂ ನೀವು ಕಳೆದುಕೊಂಡಿರುವುದು ಅಷ್ಟೇ ಸತ್ಯ! ಆದರೆ, ಆತ್ಮಾಭಿಮಾನ ಮತ್ತು ಧೈರ್ಯದ ಬಲದಿಂದ ಮತ್ತೊಮ್ಮೆ ನೀವು ನಿಮ್ಮ ಕಾಲಿನ ಮೇಲೆ ನಿಂತುಕೊಳ್ಳುವುದು ಸಾಧ್ಯವಿದೆ! ಡೇರೆಯ ಒಳಗೆ ಇದ್ದುಕೊಂಡು ಗುತ್ತಿಗೆದಾರರು ನಿಮಗೆ ಮನೆ ಕಟ್ಟಿಸಿಕೊಡುವುದನ್ನು ನೋಡುತ್ತಾ ನಿಂತುಕೊಳ್ಳುವಿರೇನು? ಬೇಡ ! ನಿಮ್ಮ ಮನೆಯನ್ನು ನೀವೇ ಕಟ್ಟಿಕೊಳ್ಳಿ ! ನಿಮಗೆ ಪುಕ್ಕಟೆ ಊಟ-ಉಪಹಾರ ಸಿಗಬಹುದು. ಇಂಜಿನಿಯರ್ ಮತ್ತು ತಾಂತ್ರಿಕ ಸಿಬ್ಬಂದಿಗಳ ನೆರವು ಲಭಿಸಬಹುದು. ನಿಮ್ಮ ಮನೆಯನ್ನು ನೀವೇ ಕಟ್ಟಿಕೊಳ್ಳಿ !" ಅವರ ಮಾತಿನ ಮೋಡಿ ಹೇಗಿತ್ತೆಂದರೆ ಅದೇ ಕ್ಷಣ 5000 ಪಠಾಣರು ಈ ಕೆಲಸಕ್ಕೆ ಸಿದ್ಧರಾಗಿ ನಿಂತರು! ಸಹಕಾರಿ ಪದ್ಧತಿಯ ಕೃಷಿ ಮಾತ್ರವಲ್ಲ ಅವರಿಗೆ ಕೈಯಿಂದ ಮಾಡುವ ಕೆಲಸಗಳೂ ಸಾಧ್ಯವಿದ್ದವು. ಇದನ್ನು ಕಮಲಾದೇವಿ ಬಾಪೂಜಿಗೆ ಸ್ಪಷ್ಟಪಡಿಸಿದರು. "ಹಾಗಿದ್ದರೆ ಭೂಮಿಯ ಹೊರಗಿನ ಕೆಲಸಕ್ಕೆ ನಿಮ್ಮ ಸರಕಾರಿ ಅವಲಂಬನ ಬಹಳ ಕಡಿಮೆ ಇರುವಂತೆ ನೋಡಿಕೊಳ್ಳಿ, ಇದು ಸಾಧ್ಯವೇ?" ಬಾಪೂಜಿ ವಿಚಾರಿಸಿದರು. 'ನಾನು ತಲೆಯಾಡಿಸಿದೆ.

ಬಹಳ ದೊಡ್ಡ ಆಹ್ವಾನ ನನ್ನ ಮುಂದೆ ನಿಂತಿತ್ತು!' ಎಂದು ಕಮಲಾದೇವಿ ಹೇಳಿದ್ದಾರೆ.

ಸರಕಾರದೊಂದಿಗೆ ಕುಸ್ತಿ ಮಾಡುವುದು ಸುಲಭದ ಕೆಲಸವಾಗಿರಲಿಲ್ಲ! ಪ್ರತಿಯೊಂದಕ್ಕೂ ಅಡ್ಡಕಾಲು ಹಾಕುವ ಅಧಿಕಾರಶಾಹಿ ಬ್ರಿಟಿಷ್ ಕಾಲದಿಂದ ಬೇರೂರಿಕೊಂಡು ಇತ್ತು. ಇವತ್ತು-ನಾಳೆ ಭೂಮಿ ಸಿಗುತ್ತದೆ ಎಂದುಕೊಂಡು ಆರು ತಿಂಗಳುಗಳು ಉರುಳಿದವು. ನಂತರ ಸಾಲದ ಬೇಡಿಕೆಗೆ ಅಸ್ತು ದೊರೆಯಲು ವೇಳೆ ಹಿಡಿಯಿತು. ಪಂಜಾಬಿಗೆ ತಾಗಿಕೊಂಡಿದ್ದ 4000 ಎಕರೆ ಜಮೀನು ಸಿಗಬಹುದೆಂಬ ಆಶೆಯನ್ನು ತೋರಿಸುತ್ತಾ ಸರಕಾರ ಕಾಲಹರಣ ಮಾಡಿತು. ಬಾಪೂಜಿಯವರು ಕರಡನ್ನು ಇಟ್ಟುಕೊಂಡು ಈ ಕುರಿತು ನೆಹರೂ ಬಳಿ ಮಾತನಾಡಿದರು. ನೆಹರೂ ಅದನ್ನು ಮನಸ್ಸಿಗೆ ತಂದುಕೊಳ್ಳಲಿಲ್ಲ. ಇದು ವ್ಯಾವಹಾರಿಕವಲ್ಲ! ಸಮಾಜವಾದಿಗಳ ಸ್ವಪ್ನಸೃಷ್ಟಿ ಎಂದು ವ್ಯಂಗ್ಯವಾಗಿ ಮಾತನಾಡಿದರು.

ಆದರೆ ಗಾಂಧೀಜಿ ಮಾತ್ರ ಕಮಲಾದೇವಿಗೆ ನಿರಾಶೆಯಾಗಲು ಬಿಡಲಿಲ್ಲ. "ನೀನು ಮತ್ತು ನಿನ್ನ ಸಹಕಾರಿ ಸಂಘ ಸರಕಾರದ ಮೇಲೆ ಅವಲಂಬಿಸಿ ಇರುವುದಿಲ್ಲ! ಎಂಬ ನಿರ್ಧಾರ ತಾಳಿದರೆ ದಾರಿ ತೋರುತ್ತದೆ! ಸಹಕಾರವೆಂದರೇ ಸ್ವಾವಲಂಬನದ ಧೀರಮಾರ್ಗ" ಎಂದು ಅವರು ಹೇಳಿದ್ದು ಕಮಲಾದೇವಿಯ ಮನಸ್ಸಿಗೆ ಹಿಡಿಸಿತು. ಸರಕಾರ ವಶಪಡಿಸಿಕೊಂಡ ಭೂಮಿಯ ಕುರಿತು ಅವರು ಗಾಂಧೀಜಿಯವರಿಗೆ ತಿಳಿಸಿದರು. "ನಾನು ಗೋವಿಂದವಲ್ಲಭಾಯಿ ಪಟೇಲರ ಬಳಿ ಮಾತನಾಡುತ್ತೇನೆ. ನೀನು ಕೆಲಸ ಪ್ರಾರಂಭಿಸು!" ಎಂದು ಗಾಂಧೀಜಿ ಹೇಳಿದರು. ಆ ಹೊತ್ತಿನಲ್ಲಿ ಗಾಂಧೀಜಿಯವರ ಸಮಯವೆಲ್ಲಾ ಸ್ವತಂತ್ರ ದೇಶದ ಸಾವಿರಾರು ಘಟನೆಗಳಿಂದ ತುಂಬಿಹೋಗಿತ್ತು. ಆದರೆ ಅವರು ನನಗೆ ಮತ್ತು ನನ್ನ ಏಕಾಂಗಿ ಸಾಹಸದ ಕಡೆಗೆ ಗಮನ ಹರಿಸಿದ್ದನ್ನು ನೋಡಿ ಕಮಲಾದೇವಿಯ ಕಣ್ಣು ತುಂಬಿಬಂತು.

ಕೆಲವೇ ದಿನಗಳಲ್ಲಿ ಗಾಂಧೀಜಿಯ ಹತ್ಯೆ ನಡೆಯಿತು.

ಸಹಕಾರಿ ಸಂಘದ ಉಪಕುಲಸಚಿವರ ಕಾರ್ಯಾಲಯವನ್ನು ಹುಡುಕಿಕೊಳ್ಳುವುದಕ್ಕೆ ಕೂಡಾ ಸಮಯ ಹಿಡಿಯಿತು. ಯಾರಿಗೂ ಈ ಕಚೇರಿಯ ಮತ್ತು ಅವರು ಮಾಡುವ ಕೆಲಸದ ಕಲ್ಪನೆ ಇರಲಿಲ್ಲ. ಸರಕಾರದ ವ್ಯಾಪ್ತಿಯ ಸಂಬಂಧವಿಲ್ಲದ ಸಹಕಾರಿ ಸಂಘದ ಕುರಿತು ಅವರಿಗೆ ಇದುವರೆಗೆ ಕೇಳಿ ಕೂಡಾ ಗೊತ್ತಿರಲಿಲ್ಲ. ಕಮಲಾದೇವಿಯವರು ಮುಂಬೈ ರಾಜ್ಯದಲ್ಲಿ ಪ್ರಚಲಿತವಿದ್ದ ಕಾಯಿದೆಯ ನಕಲನ್ನು ಅವರಿಗೆ ತೋರಿಸಿದರು. ಪ್ರಯೋಜನ ವಾಗಲಿಲ್ಲ. ಸಂಬಂಧಿಸಿದ ಕಾರ್ಯದರ್ಶಿಯನ್ನು ಮೂರು ನಾಲ್ಕು ಬಾರಿ ಭೇಟಿಯಾದ ನಂತರ ಇಂಡಿಯನ್ ಕೋ - ಆಪರೇಟಿವ್ ಯೂನಿಯನ್ (ಭಾರತೀಯ ಸಹಕಾರಿ ಸಂಘ) ಮಾಡಲು ಅನುಮತಿ ದೊರೆಯಿತು (1945). ಈ ಯೂನಿಯನ್‌ನಲ್ಲಿ ನಿರಾಶ್ರಿತರ ಪ್ರತಿನಿಧಿ, ಸರಕಾರದ ಸದಸ್ಯರು ಮತ್ತು ಸ್ವಯಂಸೇವಕರಿದ್ದರು. ದೆಹಲಿಯಿಂದ 12 ಮೈಲಿ ದೂರದಲ್ಲಿದ್ದ ಛತರಪುರ್ ಎನ್ನುವಲ್ಲಿ ಖಾಲಿ ಬಿದ್ದ ಜಮೀನನ್ನು ನೀಡುವ ಆಶ್ವಾಸನೆಯಲ್ಲಿಯೇ ದಿನ ಕಳೆಯಿತು. ಕಮಲಾದೇವಿಯ ಸಹನೆ ಮೀರಿತು. ಮೂರು ದಿನಗಳೊಳಗೆ ಈ ಜಮೀನನ್ನು ಬಿಡಿಸಿ ನಮ್ಮ ಕೈವಶಕ್ಕೆ ನೀಡದೇ ಇದ್ದರೆ ನಾವು ಸಾವಿರದಷ್ಟು ಮಂದಿ ಅಲ್ಲಿಗೆ ಬಂದು ಸ್ಥಾಪನೆಗೊಳ್ಳುತ್ತೇವೆ! ಎಂಬ ಪತ್ರದ ಕುದುರೆಯನ್ನು ಅವರು ಓಡಿಸಿದರು. ಕೆಲಸವಾಯಿತು. ಕೈಕೆಲಸದ ಕಲ್ಪನೆ ಇಲ್ಲದವರು ಕಲ್ಲು ಒಡೆಯುವುದು, ಕೂಲಿಕೆಲಸ ಮಾಡುವುದು, ಇಟ್ಟಿಗೆ ಹೊರುವುದು, ಮರಸಿಗಿಯುವುದು, ಲೆತ್ತ ನಡೆಸುವ ಕೆಲಸವನ್ನು ಪ್ರಾರಂಭಿಸಿದರು. ಪ್ರತಿದಿನ ಬಂದು ಕಮಲಾದೇವಿ ಅವರನ್ನು ಭೇಟಿಯಾಗುತ್ತಿದ್ದರು. ಅವರೊಂದಿಗೆ ಕೆಲವು ಉತ್ಸಾಹಿ ತರುಣರು ಬಂದು ಸಹಾಯ ಮಾಡುತ್ತಿದ್ದರು. ಸರಕಾರ ಐದು ವರ್ಷಗಳಿಗೆ ನಿಗದಿಪಡಿಸಿದ

ಕಾರ್ಯವನ್ನು ಅವರು ಒಂದೂವರೆ ವರ್ಷದೊಳಗೆ ಪೂರ್ಣಗೊಳಿಸಿದರು! ನಿರಾಶ್ರಿತರು ಒಟ್ಟು 30,000 ಜನರಿದ್ದರು. ಜಗಳ, ಆಕ್ರೋಶ, ರಾಗ ರೋಷವಿಲ್ಲದೆ ಅವರು ಕಲೆತು ಕೆಲಸ ಮಾಡುತ್ತಿದ್ದರು. ಅವರು 4000 ಮನೆಗಳನ್ನು ಕಟ್ಟಿದರು, 13 ಶಾಲಾ ಕಟ್ಟಡಗಳನ್ನು ನಿರ್ಮಿಸಿದರು. ಅಲ್ಲಿ 10 ಆರೋಗ್ಯಧಾಮಗಳು ತಲೆಯೆತ್ತಿದವು. ಇಡೀ ಊರಿಗೆ ನೀರಿನ ವ್ಯವಸ್ಥೆ ಮಾಡಲಾಯಿತು. ಒಂದು ಪವರ್ ಹೌಸನ್ನು ಕಟ್ಟಲಾಯಿತು. ಇವೆಲ್ಲವನ್ನೂ ಸಹಕಾರಿ ಪದ್ಧತಿಯಿಂದ ನಡೆಸಲಾಯಿತು!

ಫರೀದಾಬಾದ್ ಟೌನ್‌ಶಿಪ್ ರೂಪಿತವಾಯಿತು. ಸಹಕಾರಿ ಕಿರಾಣಿ, ಬಟ್ಟೆ, ಔಷಧಿಯ ಅಂಗಡಿಗಳು ಪ್ರಾರಂಭವಾದವು. ಬಸ್ ಸೌಕರ್ಯ ಬಂತು. ಬೆಳೆಯುತ್ತಿದ್ದಂತೆ ಸೆಕ್ಟರ್ ಬಂತು. ಅವರು ದೊಡ್ಡಾಸ್ಪತ್ರೆಗೆ ಗಡಿನಾಡ ಗಾಂಧಿಯ ಹೆಸರಿಟ್ಟರು. ಈಗ ರೈಲ್ವೇ ನಿಲ್ದಾಣ ಕೂಡಾ ಪ್ರಾರಂಭವಾಯಿತು. ಆಟದ ಮೈದಾನಿನ ನಿರ್ಮಾಣವಾಯಿತು.

ಪಂಡಿತ್ ನೆಹರೂ ಅವರ ಕಿವಿಗೆ ಸಹಕಾರಿಯಿಂದ ರೂಪಿತವಾದ ಹೊಸ ನಗರದ ಯಶಸ್ಸಿನ ಸುದ್ದಿ ತಲುಪಿತು! ಅವರು ಸ್ವತಃ ಬಂದು ಅಲ್ಲಿಯ ಕೆಲಸ ನೋಡುವ ಇಚ್ಛೆಯನ್ನು ವ್ಯಕ್ತಪಡಿಸಿದರು. ಛತರ್‌ಪುರದಲ್ಲಿ ಬೇಸಾಯದ ಕೆಲಸ ಸಹಕಾರಿ ರೂಪದಲ್ಲಿ ಯಶಸ್ವಿಯಾಗಿ ನಡೆಯುತ್ತಿತ್ತು. ತಮ್ಮ ಮೊದಲ ಫಸಲನ್ನು ನೆಹರೂ ಅವರಿಗೆ ನೀಡಲು 35 ಕೃಷಿಕರು ತೀನ್‌ಮೂರ್ತಿ ಭವನಕ್ಕೆ ಬಂದರು. ಈ ಕಾರ್ಯಕ್ರಮವನ್ನು ನಿಗದಿಪಡಿಸಿದವರು ಕಮಲಾ ದೇವಿಯವರೇ. ಅವರು ತಂದ ಹಣ್ಣುಗಳು ಮತ್ತು ತರಕಾರಿಗಳನ್ನು ನೋಡಿ ನೆಹರೂ ಸಂತೋಷಪಟ್ಟರು. ದೊಡ್ಡ ಗಾತ್ರದ ಸಿಹಿ ಮೂಲಂಗಿಯನ್ನು ನೋಡಿ ಆಶ್ಚರ್ಯಚಕಿತರಾದ ನೆಹರೂ, "ಇದನ್ನು ನೀವು ಹೇಗೆ ಬೆಳೆಸಿದಿರಿ?" ಎಂದು ಕೇಳಿದರು. "ಲಾಯಲಪುರದಿಂದ (ಪಾಕಿಸ್ತಾನದಲ್ಲಿರುವ ಅವರ ಊರು) ನಮಗೆ ಏನನ್ನೂ ತರಲು ಸಾಧ್ಯವಾಗಲಿಲ್ಲ. ಆದರೆ ಮುಂದೆ ಎಂದಾದರೂ ನಮಗೆ ಜಮೀನು ಸಿಕ್ಕಿದರೆ ಬಿತ್ತಬಹುದೆಂದು ಸ್ವಲ್ಪ ಬೀಜವನ್ನು ತುಂಡು ಬಟ್ಟೆಯಲ್ಲಿ ಕಟ್ಟಿಕೊಂಡು ತಂದಿದ್ದೆವು" ಎಂದು ಐ.ಎನ್.ಐ.ನಲ್ಲಿ (ಸುಭಾಷಚಂದ್ರ ಬೋಸರ ಸೈನ್ಯದಲ್ಲಿ) ಕೆಲಸ ಮಾಡಿಕೊಂಡಿದ್ದ ಪಠಾಣ ಸಿಂಗ್ ಹೇಳಿದರು. ನೆಹರೂ ಅವರಿಗೆ ಕಣ್ತುಂಬಿ ಬಂತು. ಅವರು ಅದೇ ಕ್ಷಣ ಅವರಿಗೆ ಮನೆ ಕಟ್ಟಲು ಪ್ರಧಾನ ಮಂತ್ರಿಯ ನಿಧಿಯಿಂದ ಹಣ ಮಂಜೂರು ಮಾಡಿದರು.

ಫರೀದಪುರಕ್ಕೆ (ಈಗಿನ ಫರೀದಾಬಾದ್) ಕೂಡಾ ಸ್ವತಃ ಆಮಂತ್ರಿತರಾಗಿ ಬಂದ ನೆಹರೂ, ಅಲ್ಲಿಯ ಕಟ್ಟಡಗಳು, ಕ್ರೀಡೆ, ಆರೋಗ್ಯ ವ್ಯವಸ್ಥೆಗಳನ್ನೆಲ್ಲಾ ನೋಡಿ ಖುಶಿ ಪಟ್ಟುಕೊಂಡರು. "ಹಿಂದೊಮ್ಮೆ ನೀವೇ ತಾನೇ 'ಸಮಾಜವಾದಿಗಳ ಸ್ವಪ್ನ ಸೃಷ್ಟಿ'ಯೆಂದು ಈ ಯೋಜನೆಯನ್ನು ತಳ್ಳಿಹಾಕಿದ್ದು! ಎಂದು ಹೇಳಿ ಅವರ ನೆನಪನ್ನು ಕೆದಕಿ ಈಗಿನ ಅವರ ಉತ್ಸಾಹಕ್ಕೆ ತಣ್ಣೀರು ಎರಚುವ ಪ್ರಯತ್ನ ನಾನು ಮಾಡಲಿಲ್ಲ!" ಎಂದು ಕಮಲಾದೇವಿ ಹೇಳಿದ್ದಾರೆ.

ಬರೀ ಮಾನವೀಯತೆಯ ದೃಷ್ಟಿಯಿಂದ ನೋಡಿದರೂ ಕೂಡಾ, ಕಮಲಾದೇವಿಯವರು ನಿರಾಶ್ರಿತರಿಗಾಗಿ ನೀಡಿದ ಸೇವೆ ಅಷ್ಟಿಷ್ಟು ಎಂದು ಹೇಳುವ ಹಾಗಿಲ್ಲ! ಸ್ವಂತ ಮನೆಗೆ ತೋರಿಸುವ ಪ್ರೀತಿ, ಆತ್ಮೀಯತೆಯನ್ನು ಅವರು ನಿರಾಶ್ರಿತರ ಕಾಲೊನಿಗೆ ನೀಡಿದ್ದಾರೆ. ಮೊದಲ ಬಾರಿ ಫಸಲು ಬಂದಾಗ ಚಕ್ಕಡಿ, ಎತ್ತು ಮತ್ತು ಕೃಷಿ ಉಪಕರಣಗಳನ್ನು ತೆಗೆದು ಕೊಂಡು ಬಂದು ನೆರವು ನೀಡುವಂತೆ ಪಕ್ಕದ ಊರಿನವರಲ್ಲಿ ಅವರು ವಿನಂತಿಸಿ ಕೊಂಡಿದ್ದರು. ನೀರು ಹರಿದುಹೋಗಲು ಕಾಲುವೆಯನ್ನು ಕಟ್ಟಿಸಿದರು. ಸಂಬಂಧಪಟ್ಟ ಅಧಿಕಾರಿಗಳಿಂದ ಪರವಾನಗಿ ಪತ್ರವನ್ನು ತರಿಸಿದರು. ಆ ಕಾಲದಲ್ಲಿ ರಾಸಾಯನಿಕವನ್ನು

ಅಷ್ಟೊಂದು ಬಳಸುತ್ತಿರಲಿಲ್ಲ. ಸಂಡಾಸಿನ ನೀರು ಮತ್ತು ಮನುಷ್ಯರ ಮಲ ಉತ್ತಮ ಗೊಬ್ಬರವಾಗುತ್ತದೆ ಎಂಬ ಗಾಂಧೀಜಿಯವರ ಮತ್ತು ಭಾರತೀಯ ಪುರಾತನ ತತ್ವವನ್ನು ಅವರು ಆಚರಣೆಗೆ ತಂದರು. ನೀರಿನ ತಾಪತ್ರಯವಿದ್ದ ಜಮೀನಿಗೆ ನೀರೂ ಸಿಕ್ಕಿತು ಗೊಬ್ಬರವೂ ಸಿಕ್ಕಿತು!

ಛತರ್‌ಪುರದಲ್ಲಿ ನೀರಿನ ತೊಂದರೆ ಬಹಳವಿತ್ತು. ಕಮಲಾದೇವಿಯವರು ಆಹಾರ ಮತ್ತು ಕೃಷಿ ಇಲಾಖೆಯ ಮೇಲೆ ಒತ್ತಡ ತಂದು ಕೊನೆಗೂ ನೀರಿನ ಕೊಳವೆ ಬಾವಿಯನ್ನು ತೋಡಿಸಿಕೊಟ್ಟರು. ಐವತ್ತು ವರ್ಷಗಳ ಹಿಂದೆ ಕೊಳವೆಬಾವಿ ಅಗೆಯುವುದು ಇಂದಿನ ಹಾಗೆ ಸಲೀಸಾಗಿ, ಅಗ್ಗವಾಗಿ ಇರಲಿಲ್ಲ. ಆ ಕೆಲಸಕ್ಕಾಗಿ ಕಮಲಾದೇವಿ ದಿನವೂ ಅಲ್ಲಿಗೆ ಹೋಗುತ್ತಿದ್ದರು. ಬಾವಿಯಲ್ಲಿ ನೀರು ಸಿಕ್ಕಿದ ಕೂಡಲೇ ಅವರು ಐದು ದೊಡ್ಡದೊಡ್ಡ ಶೇಖರಣಾ ತೊಟ್ಟಿಗಳನ್ನು ಕಟ್ಟಿಸಿದರು. 1979ರವರೆಗೆ ಅಲ್ಲಿಂದಲೇ ನೀರಾವರಿ ನಡೆಯುತ್ತಿತ್ತು.

ಪ್ರಾರಂಭದಲ್ಲಿ ವೈದ್ಯಕೀಯ ಸವಲತ್ತು ಇರಲಿಲ್ಲ. ಒಬ್ಬ ಕೃಷಿಕನ ಪತ್ನಿಯನ್ನು ದೆಹಲಿಗೆ ಕರೆದುಕೊಂಡು ಹೋಗಿ ಆಸ್ಪತ್ರೆಗೆ ಭರ್ತಿ ಮಾಡಿಕೊಳ್ಳುವಷ್ಟರಲ್ಲಿ ಅವಳು ತೀರಿಕೊಂಡಳು. ಅದರ ನಂತರ ಗ್ರಾಮೀಣ ಆರೋಗ್ಯ ಸೇವೆಗಾಗಿ ಕಮಲಾದೇವಿ ಪ್ರೋತ್ಸಾಹ ನೀಡಿದರು. ಪ್ರತಿದಿನ ವೈದ್ಯರು ಮತ್ತು ಅವರ ತಂಡ ವ್ಯಾನಿನಲ್ಲಿ ಹಳ್ಳಿಗೆ ಹೋಗಿ ಔಷಧಿ, ಚಿಕಿತ್ಸೆ ನೀಡುವ ಕ್ರಮ ಪ್ರಾರಂಭವಾಯಿತು. ತುರ್ತು ಪರಿಸ್ಥಿತಿಯಲ್ಲಿಯೂ ಇವರ ಸೇವೆ ಒದಗುವಂತೆ ಅವರು ನೋಡಿಕೊಂಡರು. ಭಾರತದಲ್ಲಿ ಸಂಚಾರಿ ವೈದ್ಯಕೀಯ ಘಟಕವನ್ನು ಪ್ರಥಮ ಬಾರಿ ಪ್ರಾರಂಭಿಸಿದ್ದು ಕಮಲಾದೇವಿ.

ಇಂಟಗ್ರೇಟೆಡ್ ಕ್ರೆಡಿಟ್ ಸ್ಕೀಮ್ ಕಮಲಾದೇವಿಯವರ ಯೋಜನೆಯಾಗಿದೆ. ಇಂಡಿಯನ್ ಕೋ-ಆಪರೇಟಿವ್ ಯೂನಿಯನ್ ಮೂಲಕ ಸಾಲವನ್ನು ಪಡೆಯುವ ಕೃಷಿಕರು ಯೂನಿಯನ್‌ನಿಂದಲೇ ತಾಂತ್ರಿಕ ಸಲಹೆ ಮತ್ತು ಗೊಬ್ಬರವನ್ನು ಪಡೆಯಬಹುದಿತ್ತು. ಬಡ ಮತ್ತು ನಿರಕ್ಷರಿ ಕೃಷಿಕರಿಗೆ ಈ ಯೋಜನೆಯಿಂದ ಉತ್ತಮ ಲಾಭ ದೊರೆಯಿತು. ಅವರು ಕೃಷಿಯೊಂದಿಗೆ ಹಣ್ಣು, ತರಕಾರಿ, ಡೇರಿ ಮತ್ತು ಕೋಳಿ ಸಾಕಣೆ(ಪೌಲ್ಟ್ರಿ)ಯನ್ನು ಸಹಕಾರಿ ರೂಪದಿಂದ ನಡೆಸಲು ತಳಹದಿಯನ್ನು ನಿರ್ಮಿಸಿದ್ದರು.

ನಾವು ಯಾವುದನ್ನು ಬಹಳ ಸಹಜ ಮತ್ತು ದೈನಂದಿನ ಬದುಕಿನ ಭಾಗವೆಂದು ತಿಳಿಯುತ್ತೇವೆಯೋ ಅದನ್ನು ಕೂಡಾ ಅರ್ಧ ಶತಮಾನದ ಹಿಂದೆಯೇ 'ಟ್ರಯಲ್ ಆಂಡ್ ಎರರ್' ವಿಧಾನದಿಂದ ರಿಸ್ಕ್ ತೆಗೆದುಕೊಂಡು ಪ್ರಥಮ ಬಾರಿ ಚಲಾವಣೆಗೆ ತಂದವರು ಕಮಲಾದೇವಿ. ಅವರು ತಾನು ಆಸಕ್ತಿ ತಾಳಿದ ಪ್ರತಿಯೊಂದು ಕ್ಷೇತ್ರದಲ್ಲಿ ತನ್ನ ಶಾಶ್ವತ ದೇಣಿಗೆಯನ್ನು ಬಿಟ್ಟುಹೋಗಿದ್ದಾರೆ.

ಅಧ್ಯಾಯ : ೧೦

# ಹಸ್ತಕಲೆಯ ಮಾತೆ : ಅಭಯದಾನ

ನಿರಾಶ್ರಿತರಿಗೆ ಪುನರ್ವಸತಿ ಒದಗಿಸುವ ಕಾರ್ಯಕ್ಕೆ ಚಾಲನೆ ನೀಡಿದ ನಂತರ ಅವರು ಯಶಸ್ಸಿನ ಪಥದಲ್ಲಿ ಮುಂದುವರಿಯತೊಡಗಿದರು. ಈಗ ಕಮಲಾದೇವಿಯವರ ಗಮನ ಅವರಿಗೆ ಆಪ್ತವೆನಿಸಿದ ಮತ್ತು ಮೆಚ್ಚುಗೆಗೆ ಪಾತ್ರವಾಗಿರುವ ಕರಕುಶಲ ಕಲೆಗಳ ಕಡೆಗೆ ಹರಿಯಿತು. ಅವರು ಸುಮಾರು 1952ರಲ್ಲಿ ಸ್ವಯಂಸ್ಫೂರ್ತಿಯಿಂದ ಸರಕಾರಕ್ಕೆ ಸೂಚನೆ ನೀಡಿ ಅಖಿಲ ಭಾರತ ಕರಕುಶಲ ಪ್ರದರ್ಶನವನ್ನು ದೆಹಲಿಯಲ್ಲಿ ಸಂಘಟಿಸಿದರು. ಕರಕುಶಲ ವಸ್ತುಗಳ ಮತ್ತು ಅದಕ್ಕೆ ಸಂಬಂಧಿಸಿದ ಸಣ್ಣಪುಟ್ಟ ಉದ್ಯೋಗಗಳ, ಪರಿಕರಗಳ ಪ್ರದರ್ಶನ ಇದಾಗಿತ್ತು. ಕಾಶ್ಮೀರದಿಂದ ಬಂದ ದೊಡ್ಡ ತಂಡವೊಂದು ಇದರಲ್ಲಿ ಭಾಗವಹಿಸಿತ್ತು. ಆಗ ಕಾಶ್ಮೀರದ ಮುಖ್ಯಮಂತ್ರಿಯಾಗಿದ್ದ ಶೇಖ್ ಅಬ್ದುಲ್ಲಾ ಅವರಿಂದ ಕಮಲಾದೇವಿಯವರು ಪ್ರದರ್ಶನದ ಉದ್ಘಾಟನೆಯನ್ನು ನಡೆಸಿದರು. ಕಾಶ್ಮೀರದ ಹಸ್ತಕಲೆಯು ಅಪರೂಪದ್ದಾಗಿದ್ದು, ಅತೀ ಸುಂದರತೆಯಿಂದ ತುಂಬಿತ್ತು. ಆದರೆ ಕಲಾವಿದರ ಸ್ಥಿತಿ ಮಾತ್ರ ಬಹಳ ದಯನೀಯ ವಾಗಿತ್ತು. ಅವರ ರತ್ನಗಂಬಳಿ ನೇಯ್ಗೆದಾರರಿಂದ ಹಿಡಿದು, ಕೇರಳದ ಚಾಪೆಯನ್ನು ಹೆಣೆಯುವವರು, ಗುಡಿಗಾರರು, ಶಿಲ್ಪಿಗಳು, ಮತ್ತು ಇತರ ಕಲಾವಿದರೆಲ್ಲರದೂ ಸಮಸ್ಯೆ ಒಂದೇ ಆಗಿತ್ತು. ಅದೇನೆಂದರೆ ಕೆಲಸಕ್ಕೆ ತಕ್ಕಂತಹ ಮಾರುಕಟ್ಟೆ ಇಲ್ಲ ! ಹಸಿದ ಹೊಟ್ಟೆಗೆ ಕಲ್ಲು ಬೀಳುವುದು ಸಾಮಾನ್ಯ. ಅವರ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವ ಕುರಿತು ಕಮಲಾದೇವಿ ಯೋಚಿಸತೊಡಗಿದರು. ಯೋಗ್ಯ ಸಂದರ್ಭ ತಾನಾಗಿ ಕೂಡಿಬಂತು !

ಅಖಿಲಭಾರತ ಕರಕುಶಲ ಮಂಡಳಿ ಅಸ್ತಿತ್ವಕ್ಕೆ ಬಂತು. ಈ ಮಂಡಳಿಯ ಅಧ್ಯಕ್ಷರಾಗುವಂತೆ ಕಮಲಾದೇವಿಗೆ ಪ್ರಧಾನ ಮಂತ್ರಿ ಜವಾಹರಲಾಲ್ ನೆಹರೂ ತಿಳಿಸಿದರು. ಅಲ್ಲಿವರೆಗೆ ಸರಕಾರದಲ್ಲಿ ಸಚಿವ ಸ್ಥಾನವನ್ನು ಪಡೆಯುವ, ರಾಜ್ಯಪಾಲರ ಹುದ್ದೆಯನ್ನು ನಿರ್ವಹಿಸುವ, ರಾಯಭಾರಿಯಾಗುವ, ಸರ್ವಪಕ್ಷಗಳ ಅನುಮತಿಯೊಂದಿಗೆ ಉಪರಾಷ್ಟ್ರಪತಿ ಯಾಗುವ ಉನ್ನತ ಅವಕಾಶಗಳನ್ನೆಲ್ಲಾ ಸ್ಪಷ್ಟವಾಗಿ ನಿರಾಕರಿಸುತ್ತಾ ಬಂದ ಕಮಲಾದೇವಿ ಯವರು ಈಗ ಕರಕುಶಲ ಮಂಡಳಿಯ ಅಧ್ಯಕ್ಷರಾಗಲು ಒಪ್ಪಿಕೊಂಡರು. ಜನ್ಮತಃ ಅವರಲ್ಲಿರುವ ಸೌಂದರ್ಯಪ್ರಜ್ಞೆ ಮತ್ತು ಅದಕ್ಕೆ ಮೂರ್ತರೂಪ ನೀಡುವಂತಹ ಉತ್ತಮ ಅವಕಾಶ ಸೇವಾರೂಪದಲ್ಲಿ ತನ್ನನ್ನು ಕೈಬೀಸಿ ಕರೆದಂತೆ ಅವರಿಗೆ ಭಾಸವಾಯಿತು. ಅವರು ಈ ಹೊಣೆಗಾರಿಕೆಗೆ ಅಧಿಕ ಉತ್ಸಾಹದಿಂದ ಸಿದ್ಧರಾದರು.

ಅವರು ವಹಿಸಿಕೊಂಡ ಜವಾಬ್ದಾರಿ ಎಷ್ಟು ಅಗಾಧ ಪ್ರಮಾಣದ್ದಾಗಿತ್ತು ಮತ್ತು ಈ ಸಮಸ್ಯೆ ಎಷ್ಟು ಜಟಿಲ ಹಾಗೂ ವ್ಯಾಪಕವಾಗಿತ್ತು ಎಂಬುದನ್ನು ತಿಳಿಯಲು ಈ ಕ್ಷೇತ್ರದ ಇತಿಹಾಸದ ಕಡೆಗೆ ಒಂದು ನೋಟವನ್ನು ಹರಿಸುವುದು ಒಳ್ಳೆಯದು.

ವ್ಯಾಪಾರಿ ಜನಾಂಗವೆಂದೇ ಪ್ರಸಿದ್ಧರಾಗಿರುವ ಬ್ರಿಟಿಷರು ತಮ್ಮ ಪ್ರಭುತ್ವವನ್ನು ಭಾರತದಲ್ಲಿ ಸ್ಥಾಪಿಸಿದ ಕೂಡಲೇ ತಮ್ಮ ಗಮನಕ್ಕೆ ತಂದುಕೊಂಡ ವಿಚಾರವೇನೆಂದರೆ, ತಮ್ಮ ದೇಶದಲ್ಲಿ ತಯಾರಾದ ಪ್ರತಿಯೊಂದು ವಸ್ತುವಿನ ಮಾರಾಟಕ್ಕೆ ಮತ್ತು ಅದರಿಂದ ತಮ್ಮ ಶ್ರೀಮಂತಿಕೆಯನ್ನು ಬೆಳೆಸಿಕೊಳ್ಳುವುದಕ್ಕೆ ಈ ದೇಶ ಅತ್ಯಂತ ಪ್ರಶಸ್ತವಾಗಿದೆ ಎನ್ನುವುದು !

ಬ್ರಿಟಿಷ್ ಕಾರ್ಖಾನೆಗಳಲ್ಲಿ ತಯಾರಾದ ವಸ್ತು, ಬಟ್ಟೆ, ಕೊನೆಗೆ ಮುಷ್ಟಿ ಉಪ್ಪಿನವರೆಗೆ ಬ್ರಿಟಿಷರು ಭಾರತಕ್ಕೆ ಮಾಡಿರುವ ಶೋಷಣೆಗೆ ಲೆಕ್ಕವೇ ಇಲ್ಲ. ಅವರು ಭಾರತದಲ್ಲಿ ಕಾಲಿಟ್ಟಾಗ, ಇಲ್ಲಿ ತಯಾರಾಗುತ್ತಿದ್ದ ಹತ್ತಿ ಮತ್ತು ರೇಷ್ಮೆ ಬಟ್ಟೆಗಳಿಗೆ ದೊಡ್ಡ ವಿದೇಶಿ ಮಾರುಕಟ್ಟೆ ಇತ್ತು. ಢಾಕಾ ಮಸಲೀನ್ ಮತ್ತು ಉಂಗುರದೊಳಗೆ ನುಸುಳಿಸಬಹುದಾದ ರೇಷ್ಮೆಯ, ಮಕಮಲ್‌ನ ಬಟ್ಟೆಗಳು, ಮತ್ತು ಇದನ್ನು ತಯಾರಿಸುತ್ತಿದ್ದ ನೇಕಾರರ ವೃತ್ತಿಕೌಶಲ್ಯವನ್ನು ಬ್ರಿಟಿಷರು ಅಪಹರಿಸಿದ ಸತ್ಯಕಥೆಯನ್ನು ನಾವು ಬಲ್ಲೆವು. ಕ್ರಮೇಣ ಈ ಸುಂದರಕಲೆಗೆ ಇದ್ದಂತಹ ರಾಜಾಶ್ರಯ, ಮತ್ತು ಸಾರ್ವಜನಿಕ ಪ್ರೋತ್ಸಾಹ ಕಡಿಮೆಯಾಗುತ್ತಾ ಹೋಯಿತು. ಕೊನೆಗೆ ಅವು ಅದೃಶ್ಯವಾಗಿ ಬಿಟ್ಟವು. ಹೆಚ್ಚಾಗಿ ಸಂಸ್ಥಾನಗಳ ರಾಜಮಹಾರಾಜರು ಮತ್ತು ಶ್ರೀಮಂತ ಜನರು ವಿದೇಶಕ್ಕೆ ಹೋಗಲು ಪ್ರಾರಂಭಿಸಿದರು. ಅಲ್ಲಿಯ ವಸ್ತುಗಳಿಗೆ ಮಾರುಹೋದರು. ಅವರನ್ನು ಆಶ್ರಯಿಸಿದವರು, ಅದರಲ್ಲಿಯೂ ಮುಖ್ಯವಾಗಿ ಕುಶಲಕರ್ಮಿಗಳು ಬಡವರಾಗುತ್ತಾ ಹೋದರು. ಅವರು ಹೊಟ್ಟೆ ಪಾಡಿಗಾಗಿ ಬೇರೆ ವೃತ್ತಿಯನ್ನು ಅವಲಂಬಿಸಿದರು. ಆನುವಂಶಿಕವಾಗಿ ಒಂದೇ ವೃತ್ತಿಯನ್ನು ನಡೆಸುತ್ತಾ ಬಂದವರು ದರಿದ್ರಾವಸ್ಥೆಯ ಕೊನೆಹಂತವನ್ನು ತಲುಪಿದರು.

ಸ್ವದೇಶಿ ಘೋಷಣೆಯ ಮೂಲಕ ಭಾರತೀಯರನ್ನು ಎಚ್ಚರಿಸಿದವರು ಗಾಂಧೀಜಿ. ಅವರು ವಿದೇಶಿ ವಸ್ತುಗಳನ್ನು ಬಹಿಷ್ಕರಿಸಿ, ಖಾದಿ ಹಾಗೂ ಕೈಯಿಂದ ತಯಾರಿಸಿದ ವಸ್ತುಗಳನ್ನು ಬಳಸುವಂತೆ ದೇಶವಾಸಿಗಳಲ್ಲಿ ವಿನಂತಿಸಿಕೊಂಡರು. ಅದೂ ಸ್ವಾವಲಂಬನೆಗಾಗಿ. ಬ್ರಿಟಿಷ್ ಗಿರಣಿಗಳಿಂದ ದೊಡ್ಡಪ್ರಮಾಣದಲ್ಲಿ ಬರುತ್ತಿದ್ದ ಬಟ್ಟೆಗಳನ್ನು ಬಳಸುವುದು ಕಡಿಮೆ ಯಾದರೆ, ನಮ್ಮ ವಿದೇಶಿ ಅವಲಂಬನ ಕಡಿಮೆಯಾಗಬಹುದು, ಸ್ವದ್ಯೋಗ ಹೆಚ್ಚಾಗಬಹುದು ಎಂಬುದು ಅವರ ಭಾವನೆಯಾಗಿತ್ತು. ಭಾರತದ ಸ್ವಾತಂತ್ರ್ಯ ಆಂದೋಲನದ ಬಹುಮುಖ್ಯ ಅಧ್ಯಾಯವಾಗಿರುವ ಈ ಆಂದೋಲನ(ಸ್ವದೇಶಿ)ವು ಅತ್ಯಂತ ಯಶಸ್ವಿಯಾಯಿತು.

ಬಾಪೂಜಿಗೆ ಖಾದಿ ಹೊಟ್ಟೆಪಾಡಿನ ವೃತ್ತಿಯಷ್ಟೇ ಆಗಿರಲಿಲ್ಲ. ಹಸ್ತಕೌಶಲ್ಯವು (ಕೈಕೆಲಸ) ಮಕ್ಕಳಿಗೆ ಶಿಕ್ಷಣ ಮಾಧ್ಯಮವಾಗಿದೆ, ಮಾಧ್ಯಮವಾಗಬೇಕು! ಇದು ಅವರ ಆಶಯವಾಗಿತ್ತು. ಬಟ್ಟೆ ತಯಾರಿಕೆಗೆ ಬೇಕಾಗಿರುವ ಸಾಮಾಗ್ರಿಗಳು ತಕಲಿ, ರಾಟೆ ಮತ್ತು ಮಗ್ಗ. ತರಕಾರಿ ಮತ್ತು ಹೂವಿನ ತೋಟ ಮಾಡಲು ಅಗತ್ಯವಿರುವುದು ಮಣ್ಣು ಮತ್ತು ನೀರು, ಸಲಾಕೆ, ಹಾರೆಗಳಂತಹ ಸಲಕರಣೆಗಳು. ಈ ವಸ್ತುಗಳೇನು? ಎಂದು ಕೇಳುವ ಮಕ್ಕಳಿಗೆ ಗಣಿತ, ಭೂಗೋಳದೊಂದಿಗೆ ಕೃಷಿಯ, ತೋಟಗಾರಿಕೆಯ ಕೆಲಸಗಳು ತಮ್ಮಷ್ಟಕ್ಕೆ ಕಲಿಯಲು ಸಹಾಯವನ್ನು ಒದಗಿಸುತ್ತದೆ ಎನ್ನುವುದು ಅವರ ಅಭಿಪ್ರಾಯ. ಕೈಕೆಲಸ ತನ್ನಷ್ಟಕ್ಕೆ ರೂಢಿಯಾಗುತ್ತದೆ ಎಂದು ಅವರು ಹೇಳುತ್ತಿದ್ದರು.

ಕಮಲಾದೇವಿಗೆ ಈ ವಿಚಾರ ತಿಳಿದಿತ್ತು. ಇನ್ನೂ ಮುಂದುವರಿದು ಹಸ್ತಕೌಶಲ್ಯದಲ್ಲಿ ಮನುಷ್ಯರ ಭಾವನಾತ್ಮಕ ಸಂಬಂಧ ಜೋಡಿಸಿಕೊಂಡಿರುತ್ತದೆ ಎಂದು ಅವರು ಹೇಳುತ್ತಿದ್ದರು. ಹಸ್ತಕಲೆಯು ದೇಶದ ಒಂದು ಅಂಗವಾಗಿದೆ. ಕರಕುಶಲತೆಯಲ್ಲಿ ಮನಸ್ಸು ಮತ್ತು ಕಣ್ಣಿಗೆ ಗೋಚರಿಸದ ಅಭಿವ್ಯಕ್ತಿಯ ಬೇರೆ ಬೇರೆ ಪ್ರಕಾರಗಳು ಸೇರಿವೆ ಎಂದು ಅವರ ಅಭಿಪ್ರಾಯ. ಯಾಂತ್ರಿಕ(ಯಂತ್ರದ) ಸಹಾಯ ಬೇಡವೆಂದು ಅವರು ಹೇಳುತ್ತಿದ್ದರು. ಆದಿಮಾನವನಿಂದ ಹಿಡಿದು ಇವತ್ತಿನವರೆಗೆ ಶೋಧಿಸಿದ ಎಷ್ಟೋ ಉಪಕರಣಗಳು ಮತ್ತು ಸಾಧನಗಳು, ಸಾದಾ ರೂಪದ ಸಲಕರಣೆಗಳು ಕೂಡಾ ಯಂತ್ರಗಳೇ ತಾನೇ? ಇವುಗಳ ಔಚಿತ್ಯಪೂರ್ಣ ಉಪಯೋಗ ಪಡೆದರೆ ಸಮಯ ಉಳಿಯುತ್ತದೆ. ಈ ಸಮಯವನ್ನು ಕುಶಲಕರ್ಮಿ ತನ್ನ

ಕೃತಿಗಾಗಿ ವಿನಿಯೋಗಿಸಬಹುದು. ಆಗ ಆ ಕೆಲಸ ಹೆಚ್ಚು ನಾಜೂಕಾಗಿ, ದೃಢವಾಗಿ ಮತ್ತು ಸುಂದರವಾಗಿರುತ್ತದೆ ಎಂದು ಕಮಲಾದೇವಿ ಹೇಳುತ್ತಿದ್ದರು.

ಭಾರತದಲ್ಲಿ ನಿತ್ಯಬಳಕೆ ವಸ್ತುಗಳು ಆವಶ್ಯಕತೆಗಾಗಿ ಇರುವ ಹಾಗೆ ಸುಂದರವಾಗಿ ಕೂಡಾ ಇರುತ್ತವೆ. ಕೃತಿಯಲ್ಲಿ ಸೌಂದರ್ಯ ತುಂಬುವುದು ಕುಶಲಕರ್ಮಿಗೆ ಎಷ್ಟು ಸ್ವಾಭಾವಿಕವೋ, ಅಷ್ಟೇ ಮಹತ್ವ ಗ್ರಾಹಕರು ಆ ಸೌಂದರ್ಯವನ್ನು ಆಸ್ವಾದಿಸುವುದರಲ್ಲಿ ಇರುತ್ತದೆ! ಕಲೆಗೆ, ಲಲಿತಕಲೆ ಅಥವಾ ಕುಶಲಕಲೆ ಎಂದು ಹೇಳಲು ಕಾರಣ ಕಲೆಯಲ್ಲಿ ಲಾಲಿತ್ಯ (ಸೌಂದರ್ಯ) ಮತ್ತು ಸಂತೋಷವನ್ನು ನೀಡುವ ಕುಶಲತೆ ಮುಖ್ಯವಾಗಿ ಇರುವುದಾಗಿದೆ. ನಾವು ದಿನನಿತ್ಯ ಬಳಸುವ ಸಾದಾ ವಸ್ತುಗಳು ಕೂಡಾ ರೇಖಾಬದ್ಧವಾಗಿ ಮತ್ತು ನಾಜೂಕಾಗಿ ಇರುತ್ತವೆ. ನಾವು ಉಪಯೋಗಿಸುವ ಮಜ್ಜಿಗೆ ಕಡೆಗೋಲು, ಹಿಂದೆ ಕುಳಿತುಕೊಳ್ಳಲು ಬಳಸುತ್ತಿದ್ದ ಮಣೆಗಳು, ಕಾಲುಮಣೆಗಳು, ಎಲೆಯಡಿಕೆ ಸಂಚಿ, ಹರಿವಾಣ, ಅಡಕತ್ತರಿ, ಸೌಟುಗಳು, ದೀಪಗಳು, ಆರತಿ–ತಟ್ಟೆ, ಪೂಜಾ ಸಲಕರಣೆಗಳು, ಎಷ್ಟು ಕ್ರಮಬದ್ಧ ಕುಸುರಿಯಿಂದ ಶೋಭಿಸುತ್ತವೆ ಎಂಬುದನ್ನು ಕಣ್ಣು ಬಿಟ್ಟು ನೋಡಿದರೆ, ಯೋಚಿಸಿದರೆ, ಕಮಲಾದೇವಿಯ ಮಾತು ನಮಗೆ ಅರ್ಥವಾಗುತ್ತದೆ.

ಕಾರ್ಖಾನೆಯಲ್ಲಿ ತಯಾರಾಗುವ ಅಗ್ಗದ ವಸ್ತುಗಳಿಂದಾಗಿ ಕರಕುಶಲ ವಸ್ತುಗಳಿಗೆ ಬೇಡಿಕೆ ಇಲ್ಲವಾಯಿತು. ಆದ್ದರಿಂದ ಕರಕುಶಲ ಮಂಡಳಿಯ ಅಧ್ಯಕ್ಷರಾದ ಕೂಡಲೇ ಕಮಲಾದೇವಿಯವರು ಅಳಿದುಹೋಗುತ್ತಿರುವ ಬಹುಪಾಲು ಹಸ್ತಕಲೆಗಳನ್ನು ಮತ್ತು ಕುಶಲಕರ್ಮಿಗಳನ್ನು ತಿಳಿದುಕೊಳ್ಳುವ ಕಾರ್ಯದಲ್ಲಿ ಮಗ್ನರಾದರು. ದೇಶವಿಡೀ ಸುತ್ತಾಡಿದರು. ಈ ಸಾಹಸ ಕಾರ್ಯವು ಅವರ ಬದುಕಿನ ಬಹುದೊಡ್ಡ ಅಧ್ಯಾಯವೆಂದೇ ಹೇಳಬಹುದು. ಪ್ರವಾಸಕ್ಕೆ ತಕ್ಕ ಸೌಕರ್ಯವಿಲ್ಲದ ದಿನಗಳು. ರಸ್ತೆ, ವಾಹನ, ಊರುಗಳು ಆತಂಕಭರಿತ ಭಯಾನಕ ಹೀನಸ್ಥಿತಿಯಲ್ಲಿ ಇದ್ದವು. ಸರಕಾರಿ ಸವಲತ್ತು ಇಲ್ಲದ ಕಡೆಗಳಲ್ಲಿ ಅಧಿಕಾರಿಗಳ ದಿವ್ಯ ನಿರ್ಲಕ್ಷ್ಯ ಬೇರೆ. ಕಮಲಾದೇವಿಯವರೊಡನೆ ದಶಕಗಳ ಅವಧಿಯಲ್ಲಿ ಕೆಲಸ ಮಾಡಿಕೊಂಡಿದ್ದ ಲಕ್ಷ್ಮೀಚಂದ್ರ ಜೈನ್(83) ಅವರು ನೆನಪಿಸಿಕೊಂಡು ಹೇಳುತ್ತಾರೆ, "ನಾವು ಉತ್ತರಪ್ರದೇಶದಲ್ಲಿ ತಿರುಗಾಡುತ್ತಾ ಗೋರಖಪುರ ತಲುಪಿದೆವು. ಕಮಲಾದೇವಿಯವರು ಅಲ್ಲಿನ ಜಿಲ್ಲಾಧಿಕಾರಿಯ ಬಳಿ ಈ ಪ್ರದೇಶದ ವಿಶಿಷ್ಟ ಹಸ್ತಕಲೆ ಯಾವುದೆಂದು ವಿಚಾರಿಸಿದಾಗ, 'ಈ ಪ್ರದೇಶ ತುಂಬಾ ಹಿಂದುಳಿದಿದೆ. ಇಲ್ಲಿ ಯಾವುದೇ ಹಸ್ತಕಲೆ ಇಲ್ಲ' ಎಂಬ ಉತ್ತರಬಂತು. ಆದರೆ ಕಮಲಾದೇವಿ ಇದಕ್ಕೆ ಲಕ್ಷ್ಯ ಕೊಡಲಿಲ್ಲ. ಮರುದಿನ ಸ್ವತಃ ಅದರ ಶೋಧಕ್ಕಾಗಿ ಹೊರಟರು. ಅವರು 'ಬಾಂಕುರ್ ಗೊಡೆ' ಎನ್ನುವ ಆ ಪ್ರದೇಶದಲ್ಲಿ ತಯಾರಾಗುತ್ತಿದ್ದ ಮರ ಮತ್ತು ಮಣ್ಣಿನ ಸುಂದರ ಕುದುರೆಗಳನ್ನು ಹುಡುಕಿ ತೆಗೆದರು. ನಂತರ ಈ ಕುದುರೆ ಭಾರತೀಯ ಕೇಂದ್ರ ಗೃಹ ಕರಕುಶಲಮಂಡಳಿಯ (ಸೆಂಟ್ರಲ್ ಕಾಟೇಜ್ ಇಂಡಸ್ಟ್ರೀಸ್ ಕಾರ್ಪೊರೇಶನ್ ಆಫ್ ಇಂಡಿಯಾ) ಲಾಂಛನವಾಗಿ, ಇವತ್ತಿಗೂ ಶೋಭಿಸುತ್ತಿದೆ."

ಬೇರೆಯವರ ಸಹಾಯಕ್ಕೆ ಕಾಯುವುದು, ಸಲಹೆಯ ದಾರಿ ನೋಡುವುದು ಇವೆಲ್ಲ ಕಮಲಾದೇವಿಗೆ ಇಷ್ಟವಾಗುತ್ತಿರಲಿಲ್ಲ. ಸರಕಾರದ ಸಹಾಯ ಸಿಕ್ಕಿತೇ ಒಳ್ಳೇದು ! ಇಲ್ಲದಿದ್ದರೆ ಸ್ವತಃ ವಾಹನ ಮಾಡಿ ಅವರು ಹೊರಡುತ್ತಿದ್ದರು. ಅವರು ಹೋಗಬೇಕೆನಿಸಿದ ಸ್ಥಳಕ್ಕೆ ವಾಹನ ಹೋಗದೇ ಇದ್ದರೆ ವಾಹನದಿಂದ ಇಳಿದು ನಡೆದೇ ಹೋಗಲು ಹಿಂದೆ ಮುಂದೆ ನೋಡುತ್ತಿರಲಿಲ್ಲ. ಅವರು ತಮ್ಮ ಹುದ್ದೆಗೆ, ವಯಸ್ಸಿಗೆ, ಕಷ್ಟಗಳಿಗೆ ಗಮನ ನೀಡುತ್ತಿರಲಿಲ್ಲ. ಆದರೆ ಕೇಂದ್ರ ಸಚಿವ ಸ್ಥಾನಕ್ಕೆ ಸಮಾನರಾಗಿದ್ದ ಕರಕುಶಲ ಮಂಡಳಿಯ ಅಧ್ಯಕ್ಷರನ್ನು

ಜಿಲ್ಲೆಯ ಮತ್ತು ರಾಜ್ಯದ ಅಧಿಕಾರಿಗಳು ನಿರ್ಲಕ್ಷವಾಗಿ ಕಾಣುವುದು ಸಾಧ್ಯವುಂಟೆ? ಆ ಗುಂಪು ಅವರ ಹಿಂದೆ ಹಿಂದೆ ಹೋಗಿ ಸುಸ್ತಾಗುತ್ತಿತ್ತು!

ಚಂಬಾ ಪ್ರದೇಶದಲ್ಲಿ ಕೈ ಕಸೂತಿಯ ರುಮಾಲು ಪ್ರಸಿದ್ಧವಾಗಿತ್ತು. ಈ ಸೂಕ್ಷ್ಮ ಕೆಲಸವನ್ನು ಸಾಧಿಸಿದ ಏಕಮಾತ್ರ ಮಹಿಳೆ ಇದ್ದಳು. ಅವಳನ್ನು ಭೇಟಿಯಾಗಲು ಸ್ವತಃ ಕಮಲಾದೇವಿಯೇ ಹೊರಟರು. ಅವಳ ವಾಸ ದೂರದ ಒಂದು ಸಣ್ಣಹಳ್ಳಿಯಲ್ಲಿ. ವಾಹನ ಸಂಚಾರವಿಲ್ಲ. ಕಾಲುದಾರಿ ಕೂಡಾ ಸರಿಯಾಗಿಲ್ಲ. ಬಹಳ ಕೊಳಕು ಜಾಗ. ಈ ಮಾಹಿತಿ ಯನ್ನು ಅಲ್ಲಿನ ಅಧಿಕಾರ ವರ್ಗದವರು ನೀಡಿದರು. ಆದರೆ ಕಮಲಾದೇವಿ ಕೇಳಲಿಲ್ಲ. ಅಲ್ಲಿಗೆ ಹೋಗಿ ತಲುಪಿದರು. ಅವಳ ಗುಡಿಸಲನ್ನು ಪ್ರವೇಶಿಸಿದರು. ಅಲ್ಲಿ ಕುಳಿತು ಆ ಮಹಿಳೆ ನೀಡಿದ ಕಪ್ಪು ಚಹ ಸೇವಿಸಿದರು. ತನ್ನ ಹಸ್ತಕೌಶಲ್ಯಕ್ಕೆ ಕಮಲಾದೇವಿ ಹೊಗಳಿಕೆಯ ಮಾತುಗಳನ್ನು ಆಡಿದ್ದು ಕೇಳಿ ಆ ಮಹಿಳೆಯ ಕಣ್ಣು ತುಂಬಿಬಂತು. ಒಂದು ವರ್ಷದ ಬಳಿಕ ಅದೇ ಮಹಿಳೆ ದೇಶದ ರಾಜಧಾನಿಯಲ್ಲಿ ನಡೆದ ಭವ್ಯ ಸಮಾರಂಭದಲ್ಲಿ ರಾಷ್ಟ್ರಪತಿಗಳ ಕೈಯಿಂದ ಕುಶಲಕಲಾ ಪ್ರಶಸ್ತಿಯನ್ನು ಸ್ವೀಕರಿಸಿದ ದೃಶ್ಯ ಕಾಣಲು ಸಿಕ್ಕಿತು. ಅಜ್ಞಾತ ಹಳ್ಳಿಯಿಂದ ದೂರದ ದೆಹಲಿ ತಲುಪಿದಳು ಆ ಮಹಿಳೆ. ಅದಕ್ಕೆ ಕಾರಣರಾದವರು ಕಮಲಾದೇವಿ.

ಕಲಮಕಾರಿ ಬಟ್ಟೆಯ ಮೇಲೆ ಕುಂಚದಿಂದ ಬಣ್ಣ ಬಳಿದು ವಿವಿಧ ಚಿತ್ರಾವಳಿಗಳನ್ನು ಮತ್ತು ದೃಶ್ಯವನ್ನು ಬಿಡಿಸುವ ನಮ್ಮ ದೇಶದ ಪ್ರಾಚೀನ ಕಲೆಯಾಗಿದೆ. ಆದರೆ ರಾಜಾಶ್ರಯ ಮತ್ತು ಬೇಡಿಕೆ ಇಲ್ಲದ್ದರಿಂದ ಇದು ಕ್ರಮೇಣ ನಶಿಸಿಹೋಗುವುದರಲ್ಲಿ ಇತ್ತು. ಈ ಕಲೆಯನ್ನು ತಿಳಿದುಕೊಂಡಿದ್ದ ಸಣ್ಣ ಕುಟುಂಬವೊಂದು ಕಾಳಹಸ್ತಿಯ ಸಮೀಪ ಒಂದು ಸಣ್ಣ ಊರಿನಲ್ಲಿ ಇರುವ ವಿಚಾರ ಕಮಲಾದೇವಿಗೆ ತಿಳಿಯಿತು. ಅವರು ಕಾಂಗ್ರೆಸ್ ಧುರೀಣ ಯು. ಶ್ರೀನಿವಾಸ ಮಲ್ಯ ಮತ್ತು ಸ್ಥಳೀಯ ಅಧಿಕಾರಿಗಳನ್ನು ಕರೆದುಕೊಂಡು, ತನಗೆ ಆಪ್ತರಾಗಿದ್ದ ಜಸಲೀನ್ ಧಮೀಜ ಅವರೊಂದಿಗೆ ಅಲ್ಲಿಗೆ ಹೊರಟರು. ಭೇಟಿ ನೀಡುವ ಸುದ್ದಿಯನ್ನು ಮೊದಲೇ ತಿಳಿಸಲಾಗಿತ್ತಾದರೂ ಊರಿನಲ್ಲಿ ಅವರನ್ನು ಸ್ವಾಗತಿಸಲು ಯಾರೂ ಬಂದಿರಲಿಲ್ಲ! ಒಮ್ಮೆ ಕುಶಲಕರ್ಮಿ ಜೊನ್ನಲಗಡ್ಡ ಲಕ್ಷ್ಮಯ್ಯನನ್ನು ಭೇಟಿಯಾದದ್ದೇ ಕಮಲಾದೇವಿಯ ಬೇಸರ ಕಳೆದು ಅವರು ಪ್ರಸನ್ನಚಿತ್ತರಾದರು. ಲಕ್ಷ್ಮಯ್ಯ ಮತ್ತು ಅವರ ಕುಟುಂಬವರ್ಗಕ್ಕೆ ಸರಕಾರ ತಮ್ಮ ಬಾಗಿಲಿನವರೆಗೆ ಬಂದಿದೆ ಎಂದು ನಂಬಿಕೆಯೇ ಬರಲಿಲ್ಲ! ಅವರು ಅನಾನಸಿನ ವಿಶೇಷ ರಸಂ ತಯಾರಿಸುವುದರಲ್ಲಿ ಮಗ್ನರಾಗಿದ್ದರಿಂದ ಕಮಲಾದೇವಿಯನ್ನು ಸ್ವಾಗತಿಸಲು ಅವರಿಗೆ ಹೋಗಲು ಆಗಲಿಲ್ಲವಂತೆ! ಕಮಲಾದೇವಿಯವರು ರುಚಿಯಾದ ಅನಾನಸನ್ನು ಬಹಳ ಚೆನ್ನಾಗಿ ಆಸ್ವಾದಿಸಿದರು. ಬಡತನದಿಂದ ಹಣ್ಣಾಗಿದ್ದ ಲಕ್ಷ್ಮಯ್ಯನಿಗೆ ಮತ್ತೆ ಕಲಮಕಾರಿ ಕೆಲಸವನ್ನು ಪ್ರಾರಂಭಿಸುವಂತೆ ಆಗ್ರಹ ಮಾಡಿದರು ಕಮಲಾದೇವಿ. ಆತ ಬಿಲ್‌ಕುಲ್ ತಯಾರಿರಲಿಲ್ಲ. ತನ್ನ ಮಗನಿಗೆ ಕೂಡಾ ಈ ಕೆಲಸವನ್ನು ಕಲಿಸಿರಲಿಲ್ಲ. ಕಮಲಾದೇವಿ ಬಹಳವಾಗಿ ಹೇಳಿದರು. ಆಶ್ವಾಸನೆ ನೀಡಿದರು. ಸ್ವತಃ ಕೈಯಿಂದ ಹತ್ತು ಸಾವಿರ ರೂಪಾಯಿ ನೀಡಿದರು. ತನ್ನ ಮಗನಿಗೆ ಮತ್ತು ತನ್ನ ಪರಿಚಯದ ಕಲಾವಿದರಿಗೆ ತರಬೇತಿ ನೀಡುವುದಕ್ಕೆ ಲಕ್ಷ್ಮಯ್ಯ ತಯಾರಾದ! ಕಮಲಾದೇವಿಯವರು ಅಗತ್ಯವಿರುವ ಬಟ್ಟೆ, ಬಣ್ಣ, ತಯಾರಿಕೆಯ ವಸ್ತುಗಳನ್ನು ಕೂಡ ತರಿಸಿಕೊಟ್ಟರು. 1958ರಲ್ಲಿ ಕಲಮಕಾರಿ ಕಲೆಯ ಕಾರ್ಯ ಮತ್ತೆ ಪ್ರಾರಂಭವಾಯಿತು.

* * *

ಮೊದಲ ತಂಡ ತಯಾರಿಸಿದ ಕಲಮಕಾರಿ ಕೆಲಸದ ಪ್ರದರ್ಶನ ಬಹಳ ಯಶಸ್ವಿಯಾಯಿತು. ನಂತರ ಆ ಊರಿನ ಪ್ರತಿಯೊಂದು ಮನೆಯವರು ಸ್ವಯಂಪ್ರೇರಣೆಯಿಂದ ಈ ಕಾರ್ಯದಲ್ಲಿ ತೊಡಗಿಕೊಂಡರು ! ಮತ್ತೆ ರಾಮಾಯಣ, ಮಹಾಭಾರತದ ದೃಶ್ಯಗಳು ಮಾತ್ರವಲ್ಲ ಕೆಲವು ನವೀನ ವಿಷಯಗಳನ್ನು (ಹೂವಿನ ತೋಟ, ಆಟ, ವೃತ್ತಿಗಳು, ನೃತ್ಯ) ಇತ್ಯಾದಿಗಳನ್ನು ಚಿತ್ರಿಸುವುದನ್ನು ಪ್ರಾರಂಭಿಸಿದರು. ಇಂದು ಆ ಊರಿನ ಸುತ್ತುಮುತ್ತಲಿನ ಪ್ರದೇಶದ ಒಂದು ಸಾವಿರಕ್ಕೂ ಅಧಿಕ ಜನರು ಕಲಮಕಾರಿ ಚಿತ್ರಣ ಕಾರ್ಯದಲ್ಲಿ ತೊಡಗಿಕೊಂಡಿದ್ದಾರೆ !

2003 ಕಮಲಾದೇವಿಯ ಜನ್ಮ ಶತಾಬ್ದಿ ವರ್ಷ. ಕಲಮಕಾರಿ ಮಾಸ್ಟರ್ ಕ್ರಾಫ್ಟ್ಸ್‌ಮನ್ ಎಂದು ಖ್ಯಾತರಾಗಿದ್ದ ಲಕ್ಷ್ಮಯ್ಯನವರ ಮೊಮ್ಮಗ, ಶಿಲ್ಪಿ ಗುರುಪ್ಪನವರಿಂದ ಕಮಲಾದೇವಿಯ ಸ್ಮರಣೆಯನ್ನು ಉತ್ಸವರೂಪದಲ್ಲಿ ಆಚರಿಸಲಾಯಿತು. ಬಹುಸಂಖ್ಯೆಯಲ್ಲಿ ಶಿಲ್ಪಿಗಳನ್ನು, ಕುಶಲಕರ್ಮಿಗಳನ್ನು ಕರೆಸಲಾಗಿತ್ತು. ಕಲಮಕಾರಿ ಕಲಾವಿದರಂತೂ ಇದ್ದೇ ಇದ್ದರು. ಕಮಲಾದೇವಿಯ ಮೊಮ್ಮಗ ನೀಲ್ ಚಟ್ಟೋಪಾಧ್ಯಾಯ ಅವರನ್ನು ವಿಶೇಷ ಅತಿಥಿಯಾಗಿ ಕರೆಸಲಾಗಿತ್ತು. ಒಂದು ಸ್ಮರಣೀಯ ಮತ್ತು ಕೃತಜ್ಞತಾಪೂರ್ವಕ ಕಾರ್ಯಕ್ರಮ ನಡೆಯಿತು.

ಕಮಲಾದೇವಿಯವರು ಅಲ್ಲಿ ಕಾಣಿಸಿಕೊಳ್ಳದೇ ಇದ್ದಿದ್ದರೆ ಬದುಕುಳಿದಿದ್ದ ಪ್ರತಿಯೊಂದು ಕಲಮಕಾರಿ ಕುಟುಂಬವೂ ನಾಮಶೇಷಗೊಳ್ಳುತ್ತಿತ್ತು. ಆದರೆ ಈ ಕಲೆಗೆ ಪುನಶ್ಚೇತನ ದೊರೆಯಿತು. ನಿರೀಕ್ಷೆಗಿಂತ ಹೆಚ್ಚು ಜನರು ಈ ಕರಕುಶಲ ಕಾರ್ಯದಲ್ಲಿ ತೊಡಗಿಸಿ ಕೊಂಡರು. ಸಾಂಪ್ರದಾಯಿಕ ಕಲೆಯನ್ನು ಆಧುನಿಕ ರೂಪದಿಂದ ಬೆಳೆಸಲಾಯಿತು. ಇಂದು ದೊಡ್ಡದೊಡ್ಡ ಮಹಲುಗಳಲ್ಲಿ, ಕಚೇರಿಯ ಸ್ವಾಗತ ಕೋಣೆಗಳಲ್ಲಿ, ದೇಶವಿದೇಶಗಳಲ್ಲಿ ಬಟ್ಟೆಯ ಮೇಲೆ ಬಿಡಿಸಿದ ಚಿತ್ರಗಳು ವಿರಾಜಮಾನವಾಗಿವೆ.

ಪೊಚಂಪಳ್ಳಿ ಸೀರೆಯ ಸೊಬಗು ಯಾರಿಗೆ ಇಷ್ಟವಾಗುವುದಿಲ್ಲ? ಈ ಕಲಾಪ್ರಕಾರ ಮೊದಲು ಸೀರೆರೂಪದಲ್ಲಿ ಪ್ರಚಲಿತವಿರಲಿಲ್ಲ. ಆ ಕಲಾಕಾರರು ಸೀರೆ ನೇಯ್ಗೆ ಪ್ರಾರಂಭಿಸಲು ಪ್ರೇರಣೆ ನೀಡಿದವರೇ ಕಮಲಾದೇವಿ. ಹೈದರಾಬಾದಿನ ಚಾರಮಿನಾರ್ ಪ್ರದೇಶದಲ್ಲಿ ಪಿಲಯ ಎಂಬ ಕೈಮಗ್ಗದಲ್ಲಿ ತಯಾರಾಗುವ ಮೃದುವಾದ ಮತ್ತು ಹಗುರವಾದ ರುಮಾಲನ್ನು ಮಾರುತ್ತಿದ್ದರು. ಅದು ಚಿರಾಲ ಎನ್ನುವ ಊರಿನಲ್ಲಿ ತಯಾರಾಗುತ್ತದೆ ಎಂಬ ಸಮಾಚಾರವನ್ನು ತಿಳಿದುಕೊಂಡ ಕಮಲಾದೇವಿ ಆ ನೇಕಾರರನ್ನು ಭೇಟಿಯಾಗಲು ತಯಾರಾದರು. ಹೈದ್ರಾಬಾದಿನ ಮೇ ತಿಂಗಳ ಉರಿಬಿಸಿಲು. ಅವರು ಒದ್ದೆಬಟ್ಟೆ ತಲೆಯ ಮೇಲೆ ಹಾಕಿಕೊಂಡು 'ತಲೆಯನ್ನು ತಣ್ಣಗೆ ಇಟ್ಟುಕೊಳ್ಳಲು ಬಾಪೂಜಿಯವರಿಂದ ಕಲಿತದ್ದು !' ಎಂದು ಹೇಳುತ್ತಾ, ಉಳಿದವರೊಂದಿಗೆ ಜೀಪಿನಲ್ಲಿ ಹೊರಟರು. ಹಾಳಾದ ರಸ್ತೆ. ಕೆಲವೇ ಅಂತರದಲ್ಲಿ ಎರಡೂ ಕಡೆ ಮುಳ್ಳು ತುಂಬಿದ ಹಾದಿ. ಜೀಪು ಓಲಾಡಿಕೊಂಡೇ ತಲುಪಬೇಕಾದ ಜಾಗ ಸೇರಿತು. ಅಲ್ಲಿ ಕುಡಿಯಲು ನೀರು ಕೂಡಾ ಇಲ್ಲ. ಸಹಕಾರಿ ಸಂಘದ ಕಚೇರಿಯವರು ಮರಹತ್ತಿಸಿ ಎಳೆನೀರು ಇಳಿಸಿ ಹಂಚಿದರು. ಆಗ ನೋಡಿದರೆ ಕಮಲಾದೇವಿಯ ಎಡತೋಳಿಗೆ ಮುಳ್ಳು ಚುಚ್ಚಿಕೊಂಡು ರಕ್ತ ಒಸರುತ್ತಿದೆ !

ಅಲ್ಲಿ ಸೇರಿದ ನೇಕಾರರು ತಮ್ಮ ಸಂಕಷ್ಟವನ್ನು ಹೇಳಲು ಪ್ರಾರಂಭಿಸಿದರು. ಅವರು ನೇಯುವ 60 ಕೌಂಟಿನ ಬಟ್ಟೆಗೆ ಬೇಡಿಕೆ ಇರಲಿಲ್ಲ. ಅವರಿಗೆ ಸೀರೆ ತಯಾರಿಸುವಂತೆ ಕಮಲಾದೇವಿ ತಿಳಿಸಿದರು. ಆದರೆ ಸೀರೆ ನೇಯ್ಗೆ ಅವರಿಗೆ ರೂಢಿ ಇರಲಿಲ್ಲ. ಮಗ್ಗದಲ್ಲಿ ಸುಧಾರಣೆ ಅಳವಡಿಸುವಂತೆ ಸೂಚನೆ ನೀಡಿ, ಆರು ಮಾರುದ್ದ ಸೀರೆಯನ್ನು ನೇಯುವಂತೆ

ಹೇಳಿದರು. ಪ್ರಾಯೋಗಿಕ ರೂಪದಲ್ಲಿ ಮೂರು ಸೀರೆಗಳನ್ನು ತಯಾರಿಸುವಂತೆ ತಿಳಿಸಿ ಅವರು ಹಿಂದಿರುಗಿದರು.

ಕಮಲಾದೇವಿ ತಿಳಿಸಿದಂತೆ ಕೆಲಸ ಪೂರ್ತಿಗೊಳಿಸಿದ ನೇಕಾರರು ಮೂರು ಸೀರೆಗಳನ್ನು ತೆಗೆದುಕೊಂಡು ಬಂದರು. ತಕ್ಷಣ ಅವರಿಗೆ ಕೂಲಿ ನೀಡುವ ವ್ಯವಸ್ಥೆ ಮಾಡಲಾಯಿತು. ಸೀರೆ ನೇಯುವ ವ್ಯವಸ್ಥೆಯಾದ ಬಳಿಕ ಕಮಲಾದೇವಿಯವರು ಇಬ್ಬರು ನೇಕಾರರನ್ನು ಬನಾರಸಿಗೆ ಕಳುಹಿಸಿಕೊಟ್ಟರು. ಅಲ್ಲಿಂದ ಅವರು ರೇಷ್ಮೆ ವಿನ್ಯಾಸ ಕಲಿತು ಬಂದರು. ಹತ್ತು ವರ್ಷಗಳೊಳಗೆ ಪೊಚಂಪಳ್ಳಿ ಸೀರೆ ಇತಿಹಾಸವನ್ನೇ ನಿರ್ಮಿಸಿತು! ಇಂದು ಆ ಊರು ಮಾತ್ರವಲ್ಲ, ಇಡೀ ನಾಲ್ಗೊಂಡ ಜಿಲ್ಲೆಯೇ ಈ ಅಪರೂಪದ ಕಲಾತ್ಮಕ ಸೀರೆ ತಯಾರಿಕೆಯ ಕೇಂದ್ರಸ್ಥಾನವಾಗಿ ಹೆಸರುವಾಸಿಯಾಗಿದೆ!

ಪೈಠಣಿ ಸೀರೆಯದು ಇದೇ ಕಥೆ! ಮಹಾರಾಷ್ಟ್ರದ ಸಂತ ಜ್ಞಾನೇಶ್ವರನಿಂದಾಗಿ ಆಧ್ಯಾತ್ಮಿಕತೆ, ಭಕ್ತಿ, ಮತ್ತು ಸಂಸ್ಕೃತಿಯ ಸುಂದರ ಪ್ರತೀಕವಾಗಿ ಇರುವಂತಹ ಊರು ಪೈಠಣ. ಇದು ಅಪೂರ್ವ ಪಕ್ಷಿ-ಹೂಗಳನ್ನು ಜರಿಯಲ್ಲಿ ನೇಯ್ದ ಅದೇ ಹೆಸರಿನ ಸೀರೆಗಳಿಗಾಗಿ ಕೂಡಾ ಪ್ರಸಿದ್ಧವಾಗಿದೆ. ಕಮಲಾದೇವಿಯವರು ಊರೂರು ಅಲೆದು ಅಲ್ಲಿಗೆ ಬಂದು ತಲುಪಿದಾಗ ಬರೀ ಎರಡು ನೇಕಾರ ಕುಟುಂಬಗಳು ಅವರಿಗೆ ಕಾಣಸಿಕ್ಕಿದವು. ಉಳಿದ ಗಂಡಸರು ಹೊಟ್ಟೆಪಾಡಿಗಾಗಿ ಕೂಲಿ ಕೆಲಸ ಹುಡುಕಿಕೊಂಡು ಪುಣೆಗೆ ಹೋಗಿದ್ದರು. ಎಂದಿನಂತೆ ಕಮಲಾದೇವಿ ಅವರನ್ನು ಮತ್ತೆ ಊರಿಗೆ ಕರೆಯಿಸಿಕೊಂಡರು. ಅಗತ್ಯವಿರುವ ಆರ್ಥಿಕ ನೆರವು ನೀಡಿ ಮತ್ತೆ ಸೀರೆ ನೇಯುವ ಕೆಲಸಕ್ಕೆ ಹಚ್ಚಿದರು.

ಇವತ್ತು ಸಾವಿರಾರು ರೂಪಾಯಿ ಬೆಲೆಬಾಳುವ ಪಟೋಲಾ, ಪೊಚಂಪಳ್ಳಿ, ಪೈಠಣಿ ಸೀರೆ ಮರುಜನ್ಮತಾಳಿ ಮಹಿಳೆಯರ ಮೈಮೇಲೆ ಶೋಭಿಸುವುದಕ್ಕೆ ಯಾರು ಕಾರಣವೆಂದು ಯೋಚಿಸಿದಾಗ, ಕಮಲಾದೇವಿ ಅವರ ಕಲಾಪ್ರೇಮ, ದೂರದೃಷ್ಟಿತ್ವ ಮತ್ತು ಕುಶಲಕರ್ಮಿಗಳ ಕುರಿತು ಅವರಿಗಿದ್ದ ಅನುಕಂಪ ನೆನಪಿಗೆ ಬರುತ್ತದೆ. ವಿವಾಹ ಇರಬಹುದು ಅಥವಾ ಬದುಕಿನ ಅತ್ಯಂತ ಸ್ಮರಣೀಯ ಪ್ರಸಂಗ, ಮೇಲೆ ಉಲ್ಲೇಖಿಸಿದ ಪ್ರಕಾರದ ಒಂದಾದರೂ ಸೀರೆಯನ್ನು ಕೊಂಡುಕೊಳ್ಳಬೇಕು ಎನ್ನುವ ಆಶಯ ಮಧ್ಯಮ ವರ್ಗದ ಮಹಿಳೆಯರಲ್ಲಿ ಇರುತ್ತದೆ! ಇವತ್ತಿಗೂ ಅವರ ಪರ್ಸಿಗೆ ಎಟಕುವ ರೀತಿಯ ಸೀರೆ ತಯಾರಾಗುತ್ತಿರುವುದು ಕಮಲಮ್ಮನ ವಿಶೇಷ ಪ್ರಯತ್ನದಿಂದಾಗಿ.

ಪಶ್ಮಿಮಿನ್ ಅತ್ಯಂತ ಹಗುರವಾಗಿರುವ ಮತ್ತು ಅತೀ ಬೆಚ್ಚಗೆ ಇರಿಸುವ ಶಾಲು. ಹಿಮಾಲಯದ ಅತಿ ಎತ್ತರದ ಶಿಖರಗಳಲ್ಲಿ ಕಾಣಸಿಗುವ ಕುರಿಗಳ ಅತ್ಯಂತ ಮೃದುವಾದ ರೋಮಗಳಿಂದ ಪಶ್ಮಿಮಿನ್ ಶಾಲು ತಯಾರಾಗುತ್ತಿತ್ತು. ಇದನ್ನು ತಯಾರಿಸುವುದು ಬಹಳ ಕಷ್ಟಕರವಾದುದು. ಜೊತೆಗೆ ಮಾರುಕಟ್ಟೆಯೂ ಸರಿಯಾಗಿ ಇಲ್ಲದ ಕಾರಣ ಈ ಕುಶಲಕರ್ಮಿಗಳು ಅತ್ಯಂತ ಬಡತನದಲ್ಲಿ ದಿನ ಕಳೆಯುತ್ತಿದ್ದರು. ಅವರ ಪರಿಸ್ಥಿತಿಯ ನಿಖರ ಮಾಹಿತಿಗಾಗಿ ಕಮಲಾದೇವಿ ಸ್ವತಃ ಲಡಾಕ್ ಪ್ರದೇಶ ತಲುಪಿದರು. ಆ ಕಾಲದಲ್ಲಿ ಲಡಾಕಿಗೆ ಹೋಗಲು ರಸ್ತೆ ಸೌಲಭ್ಯ ಇರಲಿಲ್ಲ. ನಿಶ್ಚಿತ ಸಮಯದಲ್ಲಿ ವಿಮಾನವೂ ಹೊರಡುತ್ತಿರಲಿಲ್ಲ. ಯಾವಾಗ ಹಿಮಪಾತವಾಗುತ್ತದೆ, ಯಾವಾಗ ಮಳೆ ಬರುತ್ತದೆ ಎಂದು ಹೇಳಲು ಸಾಧ್ಯವಿರಲಿಲ್ಲ. ಕಮಲಾದೇವಿಯವರು ಮಿಲಿಟರಿ ಹೆಲಿಕಾಪ್ಟರಿನಲ್ಲಿ ಹಿಮಶಿಖರವನ್ನು ಸ್ಪರ್ಶಿಸದೆ, ಓಲಾಡುತ್ತಾ ತೀರಾ ಅಪಾಯಕಾರಿಯಾದ ಆ ದುರ್ಗಮ ಪ್ರದೇಶಕ್ಕೆ ಹೋಗಿ ತಲುಪಿದರು. ಅಲ್ಲಿ ಭೇಟಿ ನೀಡಿದ ಪ್ರಪ್ರಥಮ ಮಹಿಳೆ ಅವರು! ಸುಖದುಃಖ

ವಿಚಾರಿಸಿಕೊಳ್ಳಲು ಬಂದ ಮಾತಾಜಿ ಸರಕಾರಿ ಪ್ರತಿನಿಧಿ ಎಂದು ನಂಬಲು ಆ ನೇಕಾರರಿಗೆ ಸಾಧ್ಯವೇ ಆಗಲಿಲ್ಲ. ಕಮಲಾದೇವಿಯವರು ತಕ್ಷಣ ಅವರಿಗೆ ಆರ್ಥಿಕ ಸಹಾಯ, ಮತ್ತು ಶಾಲುಗಳ ಮಾರಾಟ ವ್ಯವಸ್ಥೆಯನ್ನು ಮಾಡಿದರು. ಜಮ್ಮು ಕಾಶ್ಮೀರ ಸರಕಾರದಿಂದ ಸಿಗಬೇಕಾಗಿದ್ದ ಸಹಾಯದ ವಿಳಂಬವನ್ನು ತಪ್ಪಿಸಿದರು. (ಇಂದು ಪಶ್ಮಿಮಿನ್ ಶಾಲು ಅಪರೂಪವಾಗಿದೆ. ಕುರಿಗಳ ರೋಮ ದುರ್ಲಭವಾಗಿದೆ. ಕುಶಲಕರ್ಮಿಗಳು ಕೂಡಾ ಇಲ್ಲವಾಗಿದ್ದಾರೆ. ಈ ಶಾಲಿನ ತಯಾರಿ ಮತ್ತು ಮಾರಾಟದ ಮೇಲೆ ಸರಕಾರ ನಿಷೇಧ ಹೇರಿದೆ.)

ಕಮಲಾದೇವಿಯವರು ಪಿಂಗಾಣಿ (ಚೀನೀ) ಮತ್ತು ಮಣ್ಣಿನ (ಪೋರ್ಸಲೀನ್) ಕೈಕೆಲಸಕ್ಕೆ ಬಹಳ ಪ್ರೋತ್ಸಾಹ ನೀಡಿದ್ದಾರೆ. ಜೈಪುರದ ಪಿಂಗಾಣಿಯ ನೀಲಿವರ್ಣದ ಹೂ ಕುಂಡ, ತಟ್ಟೆಗಳು ಮತ್ತು ಕಲಾವಸ್ತುಗಳಿಗೆ ಒಳ್ಳೆಯ ಹೆಸರಿತ್ತು. ಇದನ್ನು ಆರ್ಥಿಕವಾಗಿ ಲಾಭದಾಯಕವಾಗಿ ಮಾಡುವ ವಿಚಾರ ಕಮಲಾದೇವಿಗೆ ಹೊಳೆಯಿತು. ಅವರು ಅಲ್ಲಿಯ ಕರ್ಪಾಲ್‌ಸಿಂಗ್ ಶೇಖಾವತ್ ಎಂಬ ಯುವಕನನ್ನು ಜಪಾನಿಗೆ ಕಳುಹಿಸಿ ಚಿತ್ರಕಲೆಯಲ್ಲಿ ತರಬೇತಿ ಕೊಡಿಸಿದರು. ಅವನು ಮರಳಿ ಬಂದ ನಂತರ ಜೈಪುರದಲ್ಲಿ ಪ್ರಾರಂಭಿಸಿದ ಕೇಂದ್ರದಲ್ಲಿ ಅನೇಕರಿಗೆ ಈ ಕಲೆಯಲ್ಲಿ ತರಬೇತಿ ನೀಡಿದ. ಅವರು ತಯಾರಿಸಿದ ವಸ್ತುಗಳಿಗೆ ವಿದೇಶದಿಂದ ಭಾರೀ ಬೇಡಿಕೆ ಬಂತು. ಒಮ್ಮೆ ಅಲ್ಲಿ ಭೇಟಿ ನೀಡಿದ ಕಮಲಾದೇವಿಯನ್ನು ಕರ್ತಾರ್ ಸಿಂಗ್ ಒತ್ತಾಯಪೂರ್ವಕವಾಗಿ ಮನೆಗೆ ಕರೆದುಕೊಂಡು ಹೋಗಿ ತನ್ನ ತಾಯಿಯನ್ನು ಪರಿಚಯಿಸಿದ. ಅವನ ತಾಯಿ ಕಮಲಾದೇವಿಯವರೊಡನೆ, "ನನ್ನ ಉಚ್ಚ ಕುಲದ ರಜಪೂತ ಹುಡುಗನಿಗೆ ನೀವು ಕುಂಬಾರನ ಕೆಲಸಕ್ಕೆ ಹಚ್ಚಿ ಮರ್ಯಾದೆ ಹೋಗುವಂತೆ ಮಾಡಿದಿರಿ !" ಎಂದು ಆಕ್ಷೇಪ ವ್ಯಕ್ತಪಡಿಸಿದರು. ಆ ಮಾತಿಗೆ ನಗುತ್ತಾ, "ರಜಪೂತರು ಖಡ್ಗ ಚಲಾಯಿಸುವ ದಿನಗಳು ಯಾವಾಗಲೋ ಮಾಯವಾಗಿಬಿಟ್ಟಿವೆ ! ನಿನ್ನ ಮಗ ಕುಂಚವನ್ನು ಬಳಸಿ ಜಗತ್ತನ್ನೇ ಗೆದ್ದುಬಿಟ್ಟಿದ್ದಾನೆ ಮಾತಾಜಿ !" ಎಂದು ಕಮಲಾದೇವಿ ಉತ್ತರಿಸಿದರು. ಮುದುಕಿ ಶಾಂತಳಾದಳು. ಕರ್ಪಾಲಸಿಂಗನಂತಹ ಅನೇಕ ಪ್ರತಿಭಾವಂತರನ್ನು ಕಮಲಾದೇವಿಯವರು ಮುಂದೆ ತಂದಿದ್ದಾರೆ.

ಊಟಿ ಅಥವಾ ಉದಕಮಂಡಲದ ಸುತ್ತುಮುತ್ತಲಿನ ಕಾಡಿನಲ್ಲಿ ತೋಡರೆಂಬ ಆದಿವಾಸಿಗಳ ಜನವಸತಿಗಳು ಇವೆ. ಅವರು ಎಮ್ಮೆ ಸಾಕಿ ಹಾಲು ಮತ್ತು ಅದರ ಉತ್ಪನ್ನಗಳನ್ನು ಮಾರಾಟ ಮಾಡಿ ದಿನಕಳೆಯುತ್ತಿದ್ದರು. ಆ ಶೀತ ಪ್ರದೇಶದಲ್ಲಿ ಅವರು ಹೆಗಲ ಮೇಲೆ ಹೊದ್ದುಕೊಳ್ಳುತ್ತಿದ್ದ ಶಾಲಿನ ಮೇಲೆ ಸುಂದರವಾದ ಕಸೂತಿ ಇರುತ್ತಿತ್ತು. ಅಲ್ಲಿ ಮೊದಲು ಮಿಶನರಿಗಳಿದ್ದರು. ಅವರಿಂದಾಗಿ ತೋಡರ ಸಾಂಪ್ರದಾಯಿಕ ಕಸೂತಿಯಲ್ಲಿ ಬದಲಾವಣೆ ಬಂದಿತ್ತು. ಇದು ಕಮಲಾದೇವಿಯವರ ಗಮನಕ್ಕೆ ಬಂತು. ಅವರು ತೋಡ ಜನಾಂಗದವರಿಗೆ ಅವರ ಧಾರ್ಮಿಕ ವಿಧಿವಿಧಾನಗಳಿಗೆ ಸಂಬಂಧಿಸಿದ ವಿನ್ಯಾಸಗಳನ್ನು ಮತ್ತೆ ನೇಯ್ಗೆಯಲ್ಲಿ ಅಳವಡಿಸಿಕೊಳ್ಳುವಂತೆ ಮನವೊಲಿಸಿದರು. ಶಾಲು, ಪರದೆ, ಹಾಸುಬಟ್ಟೆ ಇತ್ಯಾದಿ ತಯಾರಿಸಿದರೆ ಮಾರಾಟ ಸುಲಭವೆಂದು ತಿಳಿಹೇಳಿದರು. ಈ ಪ್ರೋತ್ಸಾಹದಿಂದ ಕಸೂತಿ ಬಟ್ಟೆ ನೇಯ್ಗೆ ಕಾರ್ಯ ನಡೆಸಲು ಅನೇಕ ತೋಡ ಮಹಿಳೆಯರು ಮುಂದೆ ಬಂದರು. ಊಟಿಯ ಸುತ್ತಮುತ್ತಲಿನ ಪ್ರದೇಶದಲ್ಲಿ ಹಲವು ಮಂದಿ ಸುಶಿಕ್ಷಿತ ಮಹಿಳೆಯರು ಈ ವೃತ್ತಿಯನ್ನು ಅನುಸರಿಸಿರುವುದು ಕಂಡುಬರುತ್ತದೆ.

ಭಾರತದೇಶದಲ್ಲಿ ಶಿಲ್ಪಕಲೆಯು ಬಹಳ ಪ್ರಾಚೀನ ಕಾಲದಿಂದಲೇ ಅತ್ಯುನ್ನತ ಸ್ಥಾನವನ್ನು ತಲುಪಿತ್ತು. ದೇಶದ ಉತ್ತರ, ದಕ್ಷಿಣ, ಪೂರ್ವ, ಪಶ್ಚಿಮ ಭಾಗಗಳಲ್ಲಿ ಬೇರೆ ಬೇರೆ ಶೈಲಿಯ

ಶಿಲ್ಪಕಲೆ ಅಸ್ತಿತ್ವಕ್ಕೆ ಬಂದಿದ್ದು, ಹಲವೆಡೆ ನಾಶವಾಗಿ ಕೂಡಾ ಹೋಗಿದೆ. ದಕ್ಷಿಣ ಭಾರತದ ಕೆಲವು ಕಡೆಗಳಲ್ಲಿ ಮಾತ್ರ ಅದು ಜೀವ ಹಿಡಿದು ಉಳಿದುಕೊಂಡಿದೆ. ಪಲ್ಲವ, ಚಾಲುಕ್ಯ, ಹೊಯ್ಸಳ ಮತ್ತು ಚೋಳ ಅರಸರ ಆಶ್ರಯದಲ್ಲಿ ಅದ್ಭುತ ದೇವಾಲಯಗಳು ನಿರ್ಮಾಣ ಗೊಂಡವು. ರಾಜಾಶ್ರಯ ಮಾಯವಾದೊಡನೆಯೇ ಒಳ್ಳೊಳ್ಳೆಯ ಶಿಲ್ಪಿಗಳು ಕೂಡಾ ಅದೃಶ್ಯರಾಗಿಬಿಟ್ಟರು. ಆದರೆ ದಕ್ಷಿಣ ಭಾರತದಲ್ಲಿ, ಅದರಲ್ಲಿ ತಮಿಳುನಾಡಿನಲ್ಲಿ ಮಾತ್ರ ಶಿಲ್ಪಕಲೆಯ ಭವ್ಯ ಸಂಪ್ರದಾಯವನ್ನು ರಕ್ಷಿಸುತ್ತಾ ಬಂದಿರುವ ಕುಟುಂಬಗಳು ಇದ್ದವು. ಈ ಕುಟುಂಬಗಳನ್ನು ಪರಿಚಯಿಸಿಕೊಂಡ ಕಮಲಾದೇವಿ ಅವರನ್ನು ಕೆಲಸಕ್ಕೆ ಹಚ್ಚಿದರು. ಮಹಾಬಲಿಪುರಂನಲ್ಲಿ ಪ್ರಯೋಗಶಾಲೆಯೊಂದನ್ನು ಸ್ಥಾಪಿಸಿದರು. ವೈದ್ಯನಾಥನ್ ಸ್ಥಪತಿ ಎಂಬ ಶಿಲ್ಪಾಚಾರ್ಯ ಅದರ ಮುಖ್ಯಸ್ಥರಾದರು. ಕೈಚಳಕವಿರುವ ಉಮೇದುವಾರರನ್ನು ಹುಡುಕಿ ತೆಗೆದು ಅವರಿಗೆ ಏಳು ವರ್ಷ ದೇವಾಲಯ ವಾಸ್ತು ಶಾಸ್ತ್ರ, ಪ್ರತಿಮಾ ಶಾಸ್ತ್ರ, ಮತ್ತು ಶಿಲೆಯಲ್ಲಿ ಕೊರೆಯುವುದು (ಕಾರ್ವಿಂಗ್) ಇತ್ಯಾದಿ ಎಲ್ಲಾ ಪ್ರಕಾರಗಳಲ್ಲಿ ತರಬೇತಿ ನೀಡುವುದನ್ನು ಪ್ರಾರಂಭಿಸಲಾಯಿತು. ರಾಜಾಶ್ರಯವಿಲ್ಲದಿದ್ದರೂ, ದೇವಾಲಯ ನಿರ್ಮಿಸುವ ಪದ್ಧತಿ ಚಲಾವಣೆಯಲ್ಲಿ ಇದ್ದುದರಿಂದ ಸಣ್ಣಪುಟ್ಟ ಶಿಲ್ಪಿಗಳು ಬೇರೆ ರಾಜ್ಯಗಳಲ್ಲಿ ಇದ್ದರು. ಆದರೆ ಶಾಸ್ತ್ರಬದ್ಧ ದೇವಾಲಯ ಮತ್ತು ಪ್ರಾಂಗಣ ಇವೆರಡೂ ಪ್ರಕಾರಗಳ ಶಿಲ್ಪಕಲೆಯನ್ನು ಪೂರ್ಣರೀತಿಯಲ್ಲಿ ತಿಳಿದುಕೊಂಡು ಪ್ರಚಾರಕ್ಕೆ ತರುವುದು ಅವರಿಗೆ ಸಾಧ್ಯವಾಗಿರಲಿಲ್ಲ. ಕಮಲಾದೇವಿಯ ಪ್ರಯತ್ನದಿಂದ ಈಗ ಅದು ಸಾಧ್ಯವಾಯಿತು. ಇವತ್ತು ದೇಶವಿದೇಶಗಳಲ್ಲಿ ದೊಡ್ಡ ದೇವಾಲಯಗಳ ನಿರ್ಮಾಣ, ಮೂರ್ತಿಗಳ ಕೆತ್ತನೆ, ದುರಸ್ತಿ ಕಾರ್ಯ ಇತ್ಯಾದಿಗಳಿಗೆ ಮಹಾಬಲಿಪುರಂದಲ್ಲಿ ತರಬೇತಿ ಪಡೆದ ತಜ್ಞರ ಅವಶ್ಯಕತೆ ಇರುತ್ತದೆ!

ನಾನಾಕಾರಣಗಳಿಂದ ವಿನಾಶದ ತುತ್ತತುದಿಗೆ ಬಂದು ತಲುಪಿದ ಬಹಳಷ್ಟು ಹಸ್ತಕಲೆಗಳನ್ನು ಕಮಲಾದೇವಿ ತಿಳಿದುಕೊಂಡಿದ್ದರು. ಅವುಗಳಿಗೆ ಅವರು ಜೀವದಾನ ನೀಡಿದರು. ಅವುಗಳಲ್ಲಿ ಚೈತನ್ಯ ತುಂಬಿದರು. ಇಲ್ಲಿ ನೀಡಿರುವುದು ಕೆಲವು ಪ್ರಾತಿನಿಧಿಕ ಉದಾಹರಣೆಗಳು ಮಾತ್ರ! ಭಾರತದ ವಿವಿಧ ಪ್ರದೇಶಗಳಿಗೆ ವಿಶಿಷ್ಟವೆನಿಸುವ ಅನೇಕ ಹಸ್ತಕಲಾ ಪ್ರಕಾರಗಳು ಇವೆ. ಅವುಗಳ ಸಂರಕ್ಷಣೆ ಮಾಡುವುದು ಅತೀ ಮುಖ್ಯವಾಗಿತ್ತು. ಅಷ್ಟೇ ಮುಖ್ಯವಾದುದು ಸಂಘಟನೆ ಮತ್ತು ಭವಿಷ್ಯದ ಭರವಸೆ. ಮಾರುಕಟ್ಟೆಯ ಜೊತೆಗೇ ಈ ಎಲ್ಲಾ ಪರಿಶ್ರಮಿಗಳನ್ನು, ಕುಶಲಕರ್ಮಿಗಳನ್ನು ಗುರುತಿಸಿ, ತಿಳಿದು ಅವರಿಗೆ ಯೋಗ್ಯ ಸ್ಥಾನಮಾನ ದೊರೆಯುವಂತಾಗಬೇಕು! ಎನ್ನುವುದು ಅವರ ಮನೋಗತವಾಗಿತ್ತು. ಆ ದೃಷ್ಟಿಯಿಂದ ಅವರು ಬಹಳಷ್ಟು ಪ್ರಯೋಗಗಳನ್ನು ಕಾರ್ಯರೂಪಕ್ಕೆ ತಂದಿದ್ದಾರೆ. ಆ ದಿಕ್ಕಿನಲ್ಲಿ ನೋಟ ಹರಿಸುವುದು ಉತ್ತಮ!

## ಹಸ್ತಕಲೆ : ಪುನಶ್ಚೇತನದ ಪ್ರಯೋಗ

ಭಾರತ ಸ್ವತಂತ್ರವಾದ ಕೂಡಲೇ ನೆಹರೂ ಸರಕಾರ ದೇಶದ ಬೆಳವಣಿಗೆಯ ದೃಷ್ಟಿಯಿಂದ ದೊಡ್ಡದೊಡ್ಡ ಉದ್ದಿಮೆಗಳನ್ನು ಪ್ರಾರಂಭಿಸುವ ಕಡೆಗೆ ಗಮನ ಹರಿಸಿತ್ತು. ದೊಡ್ಡ ನದಿಯೋಜನೆ (ದಾಮೋದರ್, ಹಿರಾಕುಡ್) ಕೂಡಾ ಜಾರಿಗೆ ಬಂತು. ಆದರೆ ದೇಶದ ಆರ್ಥಿಕ ಪ್ರಗತಿಯಲ್ಲಿ ಪಾತ್ರ ನಿರ್ವಹಿಸುತ್ತಿದ್ದ ಅನೇಕ ಪರಂಪರಾಗತ ಕಲಾಪ್ರಕಾರಗಳು ಬೆಳೆಯುವ ಅವಕಾಶ ದೊರೆಯದೆ ನಾಶದ ಅಂಚಿನಲ್ಲಿ ಇದ್ದವು. ಹಳ್ಳಿಹಳ್ಳಿಗಳಲ್ಲಿ ಕರಕುಶಲ ಕಾರ್ಯಗಳನ್ನು ನಡೆಸುತ್ತಿದ್ದ ಹತ್ತುಲಕ್ಷಕ್ಕೂ ಅಧಿಕ ಕುಟುಂಬಗಳು ಇದ್ದವು. ಈ

ಕಲಾಪ್ರಕಾರಗಳ ಮತ್ತು ಕುಶಲಕರ್ಮಿಗಳ ರಕ್ಷಣೆ ಮತ್ತು ಸ್ಥಿರತೆಯ ಜವಾಬ್ದಾರಿಯನ್ನು ಹೆಗಲಿಗೇರಿಸಿಕೊಂಡ ಕಮಲಾದೇವಿ ಅವುಗಳ ಪುನಶ್ಚೇತನ ಕಾರ್ಯವನ್ನು ಪ್ರಾರಂಭಿಸಿದರು.

1952ರಲ್ಲಿ ಅಖಿಲಭಾರತ ಕರಕುಶಲ ಮಂಡಳಿ ರೂಪುಗೊಂಡಿತು. ಇದರ ಅಧ್ಯಕ್ಷರಾದ ಕಮಲಾದೇವಿಯವರು ಮೊದಲ 18 ತಿಂಗಳುಗಳ ಕಾಲ ದೇಶದಾದ್ಯಂತ ಸಾಧ್ಯವಿರುವಷ್ಟು ಊರುಗಳಲ್ಲಿ ತಿರುಗಾಡಿ ಕರಕುಶಲ ಕಲಾಪ್ರಕಾರಗಳ ಸಮೀಕ್ಷೆ ನಡೆಸಿದರು. ಅದರ ನಂತರ ಕಾರ್ಯಯೋಜನೆ ತಯಾರಾಯಿತು. ಈ ಯೋಜನೆಯಲ್ಲಿ ಕುಶಲಕರ್ಮಿ, ಅಧಿಕಾರಿ ಮತ್ತು ಈ ವಿಷಯದಲ್ಲಿ ಉತ್ತಮ ಮಾಹಿತಿ ಇರುವ ತಜ್ಞರ ಸಮಿತಿಯನ್ನು ರಚಿಸಲಾಯಿತು. ನಂತರ ಆಡಳಿತ ಮಂಡಳಿ, ಪ್ರದರ್ಶನದ ಕಕ್ಷೆ, ಮತ್ತು ಮಾರಾಟದ ಕಡೆಗೆ ಗಮನ ನೀಡುವ ಕಕ್ಷೆ ಆಗಬೇಕೆಂಬ ನಿರ್ಧಾರ ಕೈಗೊಳ್ಳಲಾಯಿತು. ಮಾರಾಟದ ಕಡೆಗೆ ವಿಶೇಷ ಗಮನವನ್ನು ಹರಿಸಲಾಯಿತು.

ಆಯಾಯ ಪ್ರದೇಶಕ್ಕೆ ಅನುಕೂಲವಾಗುವ ಮತ್ತು ಸಾಧ್ಯವಿರುವ ವಾಣಿಜ್ಯಕೇಂದ್ರ (ಎಂಪೋರಿಯಂ) ಅಥವಾ ದೊಡ್ಡ ವ್ಯಾಪಾರ ಮಳಿಗೆ ಇರುವುದು ಒಳ್ಳೆಯದೆಂಬ ವಿಚಾರಕ್ಕೆ ಸರಕಾರದಿಂದ ಸಹಮತ ಕೂಡಾ ದೊರೆಯಿತು. ಪ್ರದರ್ಶನದ ಜೊತೆ ಮಾರಾಟವನ್ನು ನಡೆಸುವ ಜವಾಬ್ದಾರಿ ಕೂಡಾ ಮಂಡಳಿಯ ಪಾಲಿಗೆ ಬಂತು. ಈ ಕಾರ್ಯವನ್ನು ಸಾಧ್ಯವಾದಷ್ಟು ಸಹಕಾರಿ ಸಂಸ್ಥೆಗಳಿಗೆ ವಹಿಸಿಕೊಡಲಾಯಿತು. ಆ ದಿನಗಳಲ್ಲಿ ಸಹಕಾರಿ ಸಂಸ್ಥೆಗಳು ಇಂದಿನ ಹಾಗೆ ಹೆಸರು ಕೆಡಿಸಿಕೊಂಡಿರಲಿಲ್ಲ. ಸರಕಾರದ ಮಧ್ಯಸ್ಥಿಕೆ ಕನಿಷ್ಠ ಮಿತಿಯಲ್ಲಿ ಇದ್ದುದರಿಂದ, ಆಡಳಿತ ಮಂಡಳಿ ಹೆಚ್ಚು ಜವಾಬ್ದಾರಿಯಿಂದ ಕಾರ್ಯ ನಿರ್ವಹಿಸುತ್ತಿತ್ತು. ಇಂತಹ ಸಂಸ್ಥೆಗಳನ್ನು ನಡೆಸುವ ಪ್ರಾಮಾಣಿಕ ಸ್ವಾತಂತ್ರ್ಯಯೋಧರು ಮತ್ತು ಸ್ಥಳೀಯ ರಾಜಕಾರಣಿಗಳು ಕೂಡಾ ಇದ್ದರು. ಸರಕಾರದ ಮಧ್ಯಪ್ರವೇಶ ಬೇಡವೆಂಬ ಗಾಂಧೀ ತತ್ವದಲ್ಲಿ ಕಮಲಾದೇವಿಗೆ ಕೂಡಾ ಅಪಾರ ವಿಶ್ವಾಸವಿತ್ತು.

ಕ್ರಮೇಣ ಕರಕುಶಲ ಮಂಡಲಿ ಸಂಶೋಧನೆ, ಮಾರುಕಟ್ಟೆ ವ್ಯವಹಾರ, ಹೊಸ ವಿನ್ಯಾಸ, ಮತ್ತು ತಾಂತ್ರಿಕ ಪ್ರಗತಿಯ ಕಡೆಗೆ ಗಮನ ಹರಿಸತೊಡಗಿತು. ನಿರಾಶ್ರಿತರ ಪುನರ್ನಿವೇಶನದಲ್ಲಿ ಬಹಳ ಸಹಾಯ ಮಾಡಿದ ಎಲ್. ಸಿ. ಜೈನ್ ಅವರನ್ನು ಈ ಮಂಡಳಿಯ ಕಾರ್ಯದರ್ಶಿಯಾಗಿ ಕಮಲಾದೇವಿ ನೇಮಕ ಮಾಡಿದ್ದರು. ಇವರಿಬ್ಬರೂ ಕೂಡಿ ನಡೆಸಿದ ಸರ್ವೇಕ್ಷಣೆಯಲ್ಲಿ ಆನುವಂಶಿಕವಾಗಿ ಮುಂದುವರಿದ ಕರಕೌಶಲ್ಯ ಪ್ರಸಂಗಗಳೇ ಜಾಸ್ತಿ ಕಂಡುಬರುತ್ತವೆ. ಅದೇ ಕುಟುಂಬದ ಸದಸ್ಯರಿಗೆ ಮತ್ತು ಆ ರೀತಿಯ ಕೆಲಸಗಳು ರೂಢಿಯಿದ್ದ ಯುವಜನರಿಗೆ ಕ್ರಮಬದ್ಧ ತರಬೇತಿ ನೀಡುವ ಉದ್ದೇಶದಿಂದ ಗುರುಕುಲ ಪದ್ಧತಿಯಿಂದ ಮುಖ್ಯ ಕುಶಲಕರ್ಮಿಯ ಮನೆಯ ಹತ್ತಿರವೇ ಕೇಂದ್ರ ಸ್ಥಾಪಿಸುವ ವ್ಯವಸ್ಥೆಯನ್ನು ಮಾಡಲಾಯಿತು. ಪ್ರಾರಂಭಿಕ ವರ್ಷದಲ್ಲಿ ಹಣದ ತೊಂದರೆ ಬಹಳವಿತ್ತು. ಕಮಲಾದೇವಿ, ಸರೋಜಿನಿ ನಾಯ್ಡು ಅವರನ್ನು ಕರೆದುಕೊಂಡು ನೆಹರೂ ಅವರನ್ನು ಭೇಟಿ ಮಾಡುತ್ತಿದ್ದರು. ನೆಹರೂ ಸಣ್ಣವರಿರುವಾಗಲೇ ನೋಡಿ ತಿಳಿದುಕೊಂಡಿದ್ದ ಹಿರಿಯ ವ್ಯಕ್ತಿ ಸರೋಜಿನಿಗೆ ಅವರ ಜೊತೆ ಬಹಳ ಸಲಿಗೆ ಇತ್ತು. "ಏನು ಜವಾಹರ್ ? ಹಣ ಬಿಡುಗಡೆ ಮಾಡಲು ಏನಡ್ಡಿ ನಿನಗೆ ?" ಎಂದು ಅವರ ಎರಡೂ ಭುಜಗಳನ್ನು ಹಿಡಿದು ಸರೋಜಿನಿ ನಾಯ್ಡು ವಿಚಾರಿಸತೊಡಗಿದರಂತೆ !

ಕಮಲಾದೇವಿಗೆ ಕೂಡಾ ನೆಹರೂ, ಜಯಪ್ರಕಾಶ ನಾರಾಯಣ, ಲೋಹಿಯಾ ಅವರೊಂದಿಗೆ ಸಮಾನ ರೀತಿಯಲ್ಲಿ ದಶಕಗಟ್ಟಳೆ ಕೆಲಸ ಮಾಡಿ ಅನುಭವವಿದ್ದದ್ದರಿಂದ, ಅವರನ್ನು ಹೆಸರು ಹಿಡಿದು ಕರೆಯುವ, ಏಕವಚನದಲ್ಲಿ ಸಂಬೋಧಿಸುವ ಸಲಿಗೆ ಇತ್ತು. ಈ

ಸಲಿಗೆಯನ್ನು ತಪ್ಪಾಗಿ ಭಾವಿಸಿದವರು ಎಷ್ಟೋ ಮಂದಿ. ಬಾಸ್‌ನ್ನು ಸಹೋದ್ಯೋಗಿ ರೂಪದಲ್ಲಿ ಕಂಡರೆ ಆರಾಧನಾಭಾವ ಬರುವುದಿಲ್ಲ! ಒಮ್ಮೆ ಇಂದಿರಾಗಾಂಧಿಯವರು ಕರಕುಶಲ ಮಂಡಳಿಯ ಕಾರ್ಯವೈಖರಿಯಲ್ಲಿ ಹಸ್ತಕ್ಷೇಪ ಮಾಡಿದರು. ಅದು ಕಮಲಾದೇವಿಗೆ ಒಪ್ಪಿಗೆಯಾಗಲಿಲ್ಲ! ಅವರು ತಕ್ಷಣ ನೆಹರೂ ಅವರಿಗೆ ಅಧಿಕೃತ ಪತ್ರವನ್ನು ಬರೆದರು, 'ನಿಮ್ಮ ಮಗಳು ತನ್ನ ಸೀಮೆಯನ್ನು ಮೀರಿ ಹಸ್ತಕ್ಷೇಪ ಮಾಡುತ್ತಿದ್ದಾರೆ. ನನ್ನ ಕಾರ್ಯಕ್ಷೇತ್ರದಿಂದ ಹೊರಗುಳಿಯುವುದಕ್ಕೆ ಅವರಿಗೆ ಹೇಳಿ! ಅದು ಅವರ ಉಸಾಬರಿಯಲ್ಲ! (ಇಟ್ ಇಸ್ ನನ್ ಆಫ್ ಹರ್ ಬಿಸಿನೆಸ್)'.

ಮರುದಿನ, ನೆಹರೂ ಅವರ ಕಾರ್ಯದರ್ಶಿ ಒ.ಎಂ. ಮಥಾಯ್ ಕಮಲಾದೇವಿಯವರನ್ನು ಭೇಟಿಯಾಗಲು ಬಂದರು. "ನಿಮ್ಮ ಪತ್ರ ನೋಡಿ ನೆಹರೂ ಸಾಹೇಬರಿಗೆ ಬಹಳ ಬೇಸರವಾಗಿದೆ!" ಎನ್ನುತ್ತಾ ಮುಂದುವರಿಯಲಿದ್ದಾಗ, ಕಮಲಾದೇವಿ ಮತ್ತಷ್ಟು ಸ್ಪಷ್ಟರೂಪದಿಂದ ತನ್ನ ಅಭಿಪ್ರಾಯವನ್ನು ತಿಳಿಸಿ, "ನೀವು ನಿಮ್ಮ ದಾರಿ ನೋಡಿಕೊಳ್ಳಿ!" ಎನ್ನುತ್ತಾ ಅವರಿಗೆ ಹೊರಡುವಂತೆ ಸೂಚಿಸಿದರು. ಈ ಘಟನೆಗೆ ಪ್ರತ್ಯಕ್ಷದರ್ಶಿಯಾಗಿದ್ದವರು ಕಮಲಾದೇವಿಯ ಸಹೋದ್ಯೋಗಿ ಎಲ್. ಸಿ. ಜೈನ್. ಗಾಂಧೀಜಿ ಒಬ್ಬರನ್ನು ಬಿಟ್ಟು ಬೇರೆ ಯಾರಿಗೂ ತಲೆಬಾಗಿದವರಲ್ಲ ಕಮಲಾದೇವಿ! ಈ ಭಿನ್ನಾಭಿಪ್ರಾಯ ವಿಕೋಪಕ್ಕೆ ಹೋದಾಗ ಗಾಂಧೀಜಿಯವರು ಮಧ್ಯ ಪ್ರವೇಶಿಸಬೇಕಾಯಿತು. ಗಾಂಧೀಜಿಯವರಿಗೆ ಕಮಲಾದೇವಿಯ ಸಾಮರ್ಥ್ಯ ಮತ್ತು ಸ್ವಭಾವದ ಪರಿಚಯ ಚೆನ್ನಾಗಿಯೇ ಇತ್ತು.

ಕರಕುಶಲಕಲೆಯ ಪುನಶ್ಚೇತನ ಕಮಲಾದೇವಿಯ ಬದುಕಿನ ಧ್ಯೇಯವೇ ಆಯಿತು. ಇದರ ಸ್ವರೂಪ ಹೇಗಿರಬೇಕು? ಎಂಬ ವಿಚಾರವಾಗಿ ಭಾರತದಲ್ಲಿ, ಅಥವಾ ಜಗತ್ತಿನ ಯಾವುದೇ ದೇಶಗಳಲ್ಲಿ ಮಾರ್ಗದರ್ಶಕವಾಗುವಂತಹ ಒಂದೇ ಒಂದು ನಿದರ್ಶನ ಕೂಡಾ ಇರಲಿಲ್ಲ. ಸ್ವಾರಸ್ಯಕರ ಸಂಗತಿಯೇನೆಂದರೆ, ಭಾರತದ ಕರಕುಶಲ ಮಂಡಳಿಯೇ ಜಗತ್ತಿನ ಬೇರೆ ಬೇರೆ ದೇಶಗಳಿಗೆ ಆದರ್ಶಪ್ರಾಯವಾಯಿತು! 1952ರಲ್ಲಿ ಅಸ್ತಿತ್ವಕ್ಕೆ ಬಂದ ಮಂಡಳಿಗೆ ಐದು ವರ್ಷಗಳೊಳಗೆ ಅಂತಾರಾಷ್ಟ್ರೀಯ ಖ್ಯಾತಿ ದೊರೆಯಿತು. ಫಿಲಿಪೈನ್ಸ್, ಇಂಡೋನೇಶಿಯಾ, ಪಾಕಿಸ್ತಾನ, ಶ್ರೀಲಂಕಾ, ಇಸ್ರೇಲ್ ಮತ್ತು ಆಫ್ರಿಕಾ ಖಂಡದ ಪ್ರತಿನಿಧಿಗಳು, ಹೊಸದಾಗಿ ಸ್ವತಂತ್ರವಾದ ದೇಶಗಳ ಪ್ರತಿನಿಧಿಗಳು, ತಮ್ಮ ದೇಶದ ಕರಕುಶಲ ಕಲೆಗಳ ಅಭಿವೃದ್ಧಿಯ ಕುರಿತು ತಿಳಿದುಕೊಳ್ಳಲು ದೆಹಲಿಗೆ ಬರಲು ಪ್ರಾರಂಭಿಸಿದರು! ಕರಕುಶಲ ಮಂಡಳಿಯ ಅಧ್ಯಯನ ನಡೆಸಲು ಪ್ರಾರಂಭಿಸಿದರು. ಬಹಳ ಹಿಂದೆ ಕಮಲಾದೇವಿ ತನ್ನ ವಿಶ್ವಸಂಚಾರದಲ್ಲಿ ಇದರಲ್ಲಿನ ಬಹುತೇಕ ರಾಷ್ಟ್ರಗಳಿಗೆ ಭೇಟಿ ನೀಡಿದ್ದರು. ಇಂದು ಯುನೆಸ್ಕೋ ಪರವಾಗಿ ಕಮಲಾದೇವಿಯ ಮಾರ್ಗದರ್ಶನದ ಪೂರ್ಣ ಲಾಭ ಅವರಿಗೆ ದೊರೆಯಲು ಪ್ರಾರಂಭವಾಯಿತು.

ಸೆಂಟ್ರಲ್ ಕಾಟೇಜ್ ಇಂಡಸ್ಟ್ರೀಸ್ ಎಂಪೋರಿಯಂ ಎನ್ನುವ ವಾಣಿಜ್ಯ ಮಂತ್ರಾಲಯದ ಮಳಿಗೆ (ಸಿ.ಸಿ.ಐ) 1948ರಲ್ಲಿ ದೆಹಲಿಯಲ್ಲಿ ಪ್ರಾರಂಭವಾಗಿತ್ತು. ಉಳಿದ ಸರಕಾರಿ ಕಚೇರಿಗಳ ಹಾಗೆ ನಡೆದುಬಂದ ಈ ಸಂಸ್ಥೆ ಪದೇಪದೇ ನಷ್ಟವನ್ನೇ ತೋರಿಸುತ್ತಿತ್ತು! ಅದರ ಪಕ್ಕದಲ್ಲಿ ಅದೇ ಕಟ್ಟಡದಲ್ಲಿ ನಿರಾಶ್ರಿತರು ನಡೆಸಿಕೊಂಡು ಬಂದಿದ್ದ ಸಹಕಾರಿ ಸಂಘದ ಮಳಿಗೆಯು ಜನರಿಂದ ತುಂಬಿಕೊಂಡಿದ್ದು ಲಾಭದಾಯಕವಾಗಿ ಮುಂದುವರಿಯುತ್ತಿತ್ತು. ಈ ಮಳಿಗೆಯ ಉಸ್ತುವಾರಿ ಕಮಲಾದೇವಿ ಸ್ಥಾಪಿಸಿದ ಐ.ಸಿ.ಯು. ವಿನದ್ದಾಗಿತ್ತು. ನಷ್ಟದಲ್ಲಿರುವ ಸಿ.ಸಿ.ಐ.ಯ ವಹಿವಾಟಿನಿಂದ ಬೇಸರಗೊಂಡ ನೆಹರೂ ಅವರು ಭಾರತೀಯ ಸಹಕಾರಿ ಸಂಘಕ್ಕೆ ಅದನ್ನು

ವಹಿಸಿಕೊಡುವಂತೆ ಸೂಚಿಸಿದರು. ಹಣ ದೊರೆಯಿತು. ಉತ್ಸಾಹಿ ಕಾರ್ಯಕರ್ತರು ಅದನ್ನು ಉತ್ತಮ ರೀತಿಯಲ್ಲಿ ನಡೆಸಿಕೊಂಡು ಬಂದರು. ಸಹಕಾರಿ ರೀತಿಯಲ್ಲಿ ನಡೆಸಿದ್ದರಿಂದ ಸಾಮೂಹಿಕ ಜವಾಬ್ದಾರಿ ಇತ್ತು. ತರಬೇತಿಯ ಕೋರ್ಸ್ ಪ್ರಾರಂಭವಾಯಿತು. ಹೊಸಹೊಸ ವಿನ್ಯಾಸಗಳನ್ನು ಹೆಸರುವಾಸಿ ಕಲಾವಿದರ ಕೈಯಲ್ಲಿ ಮಾಡಿಸಿ ಚಲಾವಣೆಗೆ ತರಲಾಯಿತು. ಕಕ್ಷೆ(ಸೆಲ್) ಬೆಳೆಸುವುದಕ್ಕೆ ಕೂಡಾ ತರಬೇತಿ ನೀಡಲಾಯಿತು. ಕೆಲವೇ ಸಮಯದಲ್ಲಿ ಸಿ.ಸಿ.ಐ. ಎಂಪೋರಿಯಂ ದೊಡ್ಡ ಆಕರ್ಷಣೆಯ ಕೇಂದ್ರವಾಯಿತು. 'ಸಿ.ಸಿ.ಐ. ಎಂಪೋರಿಯಂ ಆಧುನಿಕ ದೆಹಲಿಯ ಸ್ಮಾರಕ, ಕುತುಬ್ ಮಿನಾರ್ ಹಳೆದೆಹಲಿಯ ಸ್ಮಾರಕ!' ಎಂದು ನೆಹರೂ ಹೆಮ್ಮೆಪಟ್ಟುಕೊಳ್ಳುತ್ತಿದ್ದರು.

ಕರಕುಶಲ ಮಂಡಳಿಯ ಚೇರ್‌ಮನ್ ಆಗಿದ್ದ ಕಮಲಾದೇವಿಗೆ ಈ ಸಿ.ಸಿ.ಐ.ನ ನಿಕಟ ಸಂಪರ್ಕವಿದ್ದುದರಿಂದ, ಅದರಲ್ಲಿ ತೊಡಗಿಸಿಕೊಂಡಿದ್ದ ಕಲಾವಿದರು ಮತ್ತು ಸಲಹಾ ಸಮಿತಿಯವರ ನೆರವನ್ನು ರಾಷ್ಟ್ರ ನಿರ್ಮಾಣದಲ್ಲಿ ತೊಡಗಿಸಿಕೊಂಡಿರುವ ತಮ್ಮ ಸಂಸ್ಥೆಗಾಗಿ ಅವರು ಪೂರ್ಣ ಪ್ರಮಾಣದಿಂದ ಬಳಸಿಕೊಂಡರು. ಪ್ರಾದೇಶಿಕ ವಿನ್ಯಾಸ ಕೇಂದ್ರಗಳು (ರೀಜನಲ್ ಡಿಸೈನಿಂಗ್ ಸೆಂಟರ್ಸ್) ದೆಹಲಿ, ಬಾಂಬೆ, ಬೆಂಗಳೂರು ಮತ್ತು ಕಲ್ಕತ್ತಾದಲ್ಲಿ ಪ್ರಾರಂಭಗೊಂಡವು. ಹೊಸ ಸಲಕರಣೆಗಳನ್ನು ತರಿಸಿ, ಕುಶಲಕರ್ಮಿಗಳ ಶ್ರಮವನ್ನು ಕಡಿಮೆ ಮಾಡಿ, ಅವರು ಕಲಾತ್ಮಕತೆಗೆ ಹೆಚ್ಚಿನ ಗಮನವನ್ನು ಹರಿಸುವ ವ್ಯವಸ್ಥೆ ಮಾಡಲಾಯಿತು. ಬಿದಿರು ಸೀಳುವ, ಮರ ಸಿಗಿಯುವ ಯಂತ್ರವನ್ನು ತಯಾರಿಸಲು ಜಪಾನಿಗೆ ಕಳುಹಿಸಿದ ಹರಿಹರನ್ ಮತ್ತು ಆತನ ಜಪಾನಿ ಪತ್ನಿಯಿಂದ ಬಹಳ ಸಹಾಯ ದೊರೆಯಿತು.

ಮಾರ್ಕೆಟಿಂಗ್ ಕ್ಲಿನಿಕ್ ಎಂಬ ಕಕ್ಷೆ ಪ್ರಾರಂಭವಾಯಿತು. ಕುಶಲಕರ್ಮಿ ಮತ್ತು ಅವರ ಸ್ಥಳೀಯ ಸಹಕಾರಿ ಸಂಘದ (ಈ ಸಮಯದಲ್ಲಿ ದೇಶದಾದ್ಯಂತ ಕುಶಲಕರ್ಮಿಗಳ ಸಹಕಾರಿ ಸಂಘ ಅಸ್ತಿತ್ವಕ್ಕೆ ಬಂದು ಕೆಲಸ ನಿರ್ವಹಿಸುವ ವ್ಯವಸ್ಥೆಯನ್ನು ಕಮಲಾದೇವಿ ಮಾಡಿದ್ದರು)ವರು ತಯಾರಿಸಿದ ವಸ್ತುಗಳನ್ನು ತರಿಸುತ್ತಿದ್ದರು. ಕ್ಷೇತ್ರಾಧಿಕಾರಿಯನ್ನು ಭೇಟಿಯಾಗಿ ಅವರೊಡನೆ ಉತ್ಪಾದನೆ ಮತ್ತು ಮಾರಾಟ ಕಾರ್ಯದ ಕುರಿತು ವಿಚಾರ ವಿಮರ್ಶೆ ನಡೆಸುತ್ತಿದ್ದರು. ಅಗತ್ಯವಿರುವ ಕಚ್ಚಾ ಸಾಮಗ್ರಿಗಳ ಪೂರೈಕೆ ಸರಿಯಾಗಿದೆಯೇ ? ವಿನ್ಯಾಸ ಸರಿಯಾಗಿದ್ದು ಜನಪ್ರಿಯವಾಗಿದೆಯೇ ? ತಾಂತ್ರಿಕ ತೊಂದರೆಗಳು ಇರುವುದೇ ? ದರ ಇತ್ಯಾದಿ ಸೂಕ್ತವಾಗಿ, ತೃಪ್ತಿಕರವಾಗಿ ಇದೆಯೇ ? ಕುಶಲಕರ್ಮಿಗಳ ಮಜೂರಿ(ಕೂಲಿ) ಸಮಯಕ್ಕೆ ಸರಿಯಾಗಿ ಪಾವತಿಯಾಗುತ್ತದೆಯೇ ? ಸಂಪರ್ಕ ವ್ಯವಸ್ಥೆ–ತರುವುದು, ಕೊಂಡೊಯ್ಯುವುದು ಸಮರ್ಪಕವಿದೆಯೇ ? ಇತ್ಯಾದಿ ಚರ್ಚೆ ನಡೆಯುತ್ತಿತ್ತು. ಮಾರ್ಕೆಟಿಂಗ್ ಕ್ಲಿನಿಕ್‌ನಿಂದ ಕರಕುಶಲ ವಸ್ತುಗಳ ಗುಣಮಟ್ಟದ ನಿಯಂತ್ರಣ, ಉಪಕರಣಗಳ ಸಂಯೋಜನೆ, ಹೊಸ ಸಾಮಗ್ರಿಗಳ ಲಭ್ಯತೆ ಸುಲಭಸಾಧ್ಯವಾಯಿತು.

ಕಮಲಾದೇವಿ ಅವರಿಂದಲೇ ಪುನರಪಿ ಪ್ರದರ್ಶನಗಳು ಮತ್ತು ಮಾರಾಟದ ಪರಂಪರೆ ಪ್ರಾರಂಭವಾಯಿತು ! ಅವರು ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದಾಗಲೇ ಕಾಂಗ್ರೆಸಿನ ವಾರ್ಷಿಕ ಅಧಿವೇಶನದ ಸಮಯದಲ್ಲಿ ಈ ರೀತಿಯ ಹಸ್ತಕಲೆಗಳ, ಅದರಲ್ಲಿಯೂ ಮುಖ್ಯವಾಗಿ ಖಾದಿ ಪ್ರದರ್ಶನವನ್ನು ಸಂಘಟಿಸಿ ಒಳಹೊರಗಿನ ಅನುಭವವನ್ನು ಸಂಪಾದಿಸಿದ್ದರು. ಇವತ್ತಿಗೂ ಚಲಾವಣೆಯಲ್ಲಿರುವ ಪ್ರದರ್ಶನ ಮತ್ತು ಮಾರಾಟ ವ್ಯವಸ್ಥೆಯಿಂದಾಗಿ ಕಲಾವಿದರಿಗೆ ಎಷ್ಟೊಂದು ಪ್ರೋತ್ಸಾಹ ದೊರೆಯುತ್ತದೆ ಮತ್ತು ಜನರಿಗೆ ಅವರ ಸ್ವಂತ ಊರಿನಲ್ಲಿಯೇ ಬೇರೆ ಬೇರೆ ಪ್ರದೇಶಗಳ ಸುಂದರ ಕಲಾತ್ಮಕ ವಸ್ತುಗಳು

ದೊರೆಯುತ್ತವೆ ಎಂಬುದನ್ನು ನಾವು ಕಳೆದ ಐವತ್ತು ಅರವತ್ತು ವರ್ಷಗಳಿಂದ ಪ್ರತ್ಯಕ್ಷವಾಗಿ ಕಾಣುತ್ತಾ ಬಂದಿದ್ದೇವೆ.

ಇವತ್ತು ನಮಗೆ, ನಗರವಾಸಿ ಜನರಿಗೆ, ಅಗತ್ಯವಿರುವಾಗಲೆಲ್ಲಾ ಊರಿನಲ್ಲಿರುವ ದೊಡ್ಡ ಮಳಿಗೆ ಅಥವಾ ಎಂಪೋರಿಯಮ್‌ಗೆ ಹೋಗಿ, ಬೇಕಾದ ವಸ್ತುಗಳನ್ನು ಖರೀದಿಸುವುದು ಅಭ್ಯಾಸವಾಗಿದೆ. ಕಾಶ್ಮೀರಿ ಶಾಲು ಬೆಂಗಳೂರಿನಲ್ಲಿ ಸಿಗುತ್ತದೆ, ಚಂದನದ ಮೂರ್ತಿ ಶ್ರೀನಗರದಲ್ಲಿ ದೊರೆಯುತ್ತದೆ. ಆದರೆ 1960ರಲ್ಲಿ ಈ ಪರಿಸ್ಥಿತಿ ಇರಲಿಲ್ಲ. ಆಯಾ ಊರಿನ ಜನರು ಅಲ್ಲಿಯ ಬಟ್ಟೆಯನ್ನು ಖರೀದಿಸಿ ಮುದ್ರಿಸುವ, ನೇಯುವ ಪದ್ಧತಿ ಇತ್ತು. ಕೆಲವು ವಸ್ತುಗಳಿಗೆ ಬೇಡಿಕೆ ಸಲ್ಲಿಸಿ ಮಾಡಿಸುತ್ತಿದ್ದರು. ರಾಜಮನೆತನದ ಜನರಲ್ಲಿ ಮುದ್ರಣ ಅಚ್ಚುಗಳು ಅವರದೇ ಇರುತ್ತಿದ್ದವು. ರಾಜಸ್ಥಾನದ ಸಾಂಗನೇರ್, ಬಾಡಮೇರ್ ಮತ್ತು ಕೋಟಾ ಪ್ರದೇಶಗಳ ಕೈಯಿಂದಲೇ ಮುದ್ರಿಸುವ ಅಚ್ಚುಗಳನ್ನು ಮಹಾರಾಣಿ ಗಾಯತ್ರಿದೇವಿ ಅವರಿಂದ ತರಿಸಿಕೊಳ್ಳುವುದರಲ್ಲಿ ಕಮಲಾದೇವಿ ಯಶಸ್ಸು ಪಡೆದಿದ್ದರು. ನಂತರ ಸ್ವತಃ ಗಾಯತ್ರಿದೇವಿಯವರೇ ಕರಕುಶಲ ಕೇಂದ್ರದ ಸ್ಥಾಪನೆಗೆ ನೆರವು ನೀಡಿದರು.

ಇವತ್ತಿಗೂ ಈ ಪ್ರದೇಶಗಳ ಮುದ್ರಣ ಮತ್ತು ನೇಯ್ಗೆ ಅಚ್ಚುಗಳ ವಿನ್ಯಾಸಗಳು ದೇಶದಾದ್ಯಂತ ಪ್ರಸಿದ್ಧವಾಗಿವೆ. ಬಹಳ ಜನಪ್ರಿಯವೂ ಆಗಿವೆ! ಸಾಂಗನೇರಿ, ಸಂಬಲಪುರ, ಬಲುಚೆರಿ ಸೀರೆಗಳು ದಕ್ಷಿಣವನ್ನು ಕಾಂಜೀವರಂ ಸೀರೆಗಳು ಉತ್ತರವನ್ನು ತಲುಪುತ್ತವೆ.

ಕಮಲಾದೇವಿಯವರು ಬೇರೆ ಬೇರೆ ಕಲೆಗಳಲ್ಲಿ ಪರಿಣತಿ ಹೊಂದಿದ ಪ್ರಮುಖ ಕುಶಲಕರ್ಮಿಗಳಿಗೆ (ಮಾಸ್ಟರ್ ಕ್ರಾಫ್ಟ್‌ಮನ್) ರಾಷ್ಟ್ರಪ್ರಶಸ್ತಿ ನೀಡುವುದನ್ನು ಪ್ರಾರಂಭಿಸಿದರು. ರಾಜಧಾನಿಯಲ್ಲಿ ನಡೆಯುವ ದೊಡ್ಡ ಸಮಾರಂಭದಲ್ಲಿ ರಾಷ್ಟ್ರಪತಿಯವರ ಕೈಯಿಂದ ಈ ಪ್ರಶಸ್ತಿಯನ್ನು ನೀಡುವ ವ್ಯವಸ್ಥೆ ಇರುವುದರಿಂದ ಅಜ್ಞಾತವಾಗಿ ಸಣ್ಣಪುಟ್ಟ ಊರುಗಳಲ್ಲಿ ಕೆಲಸ ಮಾಡಿಕೊಂಡಿದ್ದವರಿಗೆ ಪ್ರಚಾರ ಮತ್ತು ಪ್ರಸಿದ್ಧಿ ದೊರೆಯಿತು. ಅವರ ಕಲಾಪ್ರಕಾರಗಳಿಗೆ ಉನ್ನತ ಗೌರವ ದೊರೆಯಲು ಆರಂಭವಾಯಿತು. ಬಿದರಿ ಕೆಲಸ, ಬೆತ್ತದ ಕೆಲಸ, ಲೋಹದ, ಶಿಲೆಯ, ಬೆಳ್ಳಿ, ಚಂದನದ, ಉಣ್ಣೆ, ರೇಷ್ಮೆಯ, ಇನ್‌ಲೇ ಹೀಗೆ ಯಾವುದೇ ಮಾಧ್ಯಮದ ಕೆಲಸವನ್ನು ನಡೆಸುವ ಯೋಗ್ಯ ಪ್ರತಿಭಾವಂತರಿಗೆ ಪ್ರಶಸ್ತಿ ಸಿಗದೇ ಹೋಗುವ ಸಂದರ್ಭ ಕ್ವಚಿತವಾಯಿತು! ಇಂತಹವರನ್ನು ಗುರುತಿಸುವ ಪದ್ಧತಿಯನ್ನು ಕಮಲಾದೇವಿಯವರು ಐವತ್ತು ವರ್ಷಗಳ ಹಿಂದೆಯೇ ದೃಢವಾದ ರೀತಿಯಿಂದ ಹಾಕಿಕೊಟ್ಟಿದ್ದಾರೆ.

ಜನರನ್ನು ಒಟ್ಟುಗೂಡಿಸಿ ಅವರಿಂದ ಕೆಲಸ ಮಾಡಿಸಿಕೊಳ್ಳುವ ಚಾಣಾಕ್ಷತನ ಕಮಲಾದೇವಿಗೆ ಕರಗತವಾಗಿತ್ತು. ಸ್ವತಃ ಅವರೇ ಈ ಕಾರ್ಯದಲ್ಲಿ ಮಗ್ನರಾಗಿರುತ್ತಿದ್ದರು. ಹೀಗಾಗಿ ಅವರ ಸಂಪರ್ಕಕ್ಕೆ ಬಂದ ಪ್ರತಿಯೊಬ್ಬರೂ–ಪುರುಷರು, ಮಹಿಳೆಯರು, ಶ್ರೀಮಂತರು, ಬಡವರು, ಧಾರ್ಮಿಕರು, ಅನಕ್ಷರಸ್ಥರು ಅವರ ಮಾತಿಗೆ ಗೌರವ ನೀಡುತ್ತಿದ್ದರು. ಇಲ್ಲಿ ಕಮಲಾದೇವಿಯವರು ವನಸ್ಪತಿ ರಂಗಿನ ಪ್ರಯೋಗಶಾಲೆ ಪ್ರಾರಂಭಿಸಿದ್ದನ್ನು ನೆನಪಿಸಿಕೊಳ್ಳಲೇಬೇಕು. ತಮಿಳುನಾಡಿನ ಕಾಂಚೀವರಂ ಸೀರೆಗಳು ಜಗತ್ಪ್ರಸಿದ್ಧವಾಗಿವೆ. ಇಲ್ಲಿಯ ನೇಕಾರರು ತಮ್ಮ ಹತ್ತಿ ಮತ್ತು ರೇಷ್ಮೆ ಬಟ್ಟೆಗಳಿಗೆ ಕಲ್ಲು, ಹೂ, ಬೇರು ಮತ್ತು ವನಸ್ಪತಿಯ ಬಣ್ಣವನ್ನು ಶತಮಾನಗಳಿಂದ ಬಳಸುತ್ತಿದ್ದರು. ಈ ನಡುವೆ ಅವರು ಮಾರುಕಟ್ಟೆಯಲ್ಲಿ ದೊರೆಯುವ ಕೃತ್ರಿಮ ರಾಸಾಯನಿಕ ಬಣ್ಣವನ್ನು ಬಳಸಲು ಪ್ರಾರಂಭಿಸಿದ್ದರಿಂದ ಬಟ್ಟೆಯ ಸೌಂದರ್ಯ ಕಮ್ಮಿಯಾಯಿತು, ಅದು ತನ್ನ ಬಣ್ಣ ಕಳೆದು ಮಾರುಕಟ್ಟೆ ಕುಸಿಯಲಾರಂಭಿಸಿತು. ಕಮಲಾದೇವಿಯವರು ಪ್ರಸಿದ್ಧ ನೃತ್ಯ ಕಲಾವಿದೆ ಮತ್ತು ಕಲಾಕ್ಷೇತ್ರದ

ಸಂಸ್ಥಾಪಕಿಯಾಗಿದ್ದ ರುಕ್ಮಿಣಿದೇವಿ ಅರುಂಡೇಲ್ ಅವರನ್ನು ವಿನಂತಿಸಿಕೊಂಡು, ಅವರ ಕಲಾಕ್ಷೇತ್ರದಲ್ಲಿ ಪಾರಂಪರಿಕ ರೀತಿಯಿಂದ ಬಣ್ಣವನ್ನು ತಯಾರಿಸುವ ಒಂದು ಪ್ರಯೋಗಾಲಯವನ್ನು ತೆರೆದರು! ಚಂದ್ರಮೌಳಿಯೆಂಬ ಒಬ್ಬ ಪ್ರತಿಭಾವಂತ ತರುಣನನ್ನು ಅದರ ಮುಖ್ಯಸ್ಥನನ್ನಾಗಿ ಮಾಡಿ, ಕಾಂಚೀವರಂ ಸೀರೆ ಕಳೆದುಕೊಂಡಿದ್ದ ಗೌರವವನ್ನು ಮರಳಿ ತರಿಸಿಕೊಟ್ಟರು. ನಂತರ ಈ ಪ್ರಯೋಗಾಲಯವನ್ನು ಬೆಂಗಳೂರಿಗೆ ಸ್ಥಳಾಂತರಿಸಲಾಯಿತು.

ಪ್ರಧಾನ ಮಂತ್ರಿ ಇಂದಿರಾಗಾಂಧಿಯವರ ಅವಕೃಪೆಯಿಂದಾಗಿ ಕಮಲಾದೇವಿಯವರು ತಮ್ಮ ಗೌರವಹುದ್ದೆಯಾದ ಕರಕುಶಲ ಮಂಡಳಿಯ ಅಧ್ಯಕ್ಷ ಸ್ಥಾನವನ್ನು ಬಿಡಬೇಕಾಗಿ ಬಂತು! ಅವರು ಪ್ರಾರಂಭಿಸಿದ ಎಷ್ಟೋ ಮಹತ್ವದ ಕೇಂದ್ರಗಳು ಮುಚ್ಚುವ ಪರಿಸ್ಥಿತಿ ಬಂತು. ನೈಸರ್ಗಿಕ ಬಣ್ಣದ ಪ್ರಯೋಗಾಲಯದಿಂದ ಯಾವುದೇ ಪ್ರಯೋಜನ ಇಲ್ಲ! ಅದನ್ನು ಮುಚ್ಚಿಬಿಡುವಂತೆ ಆದೇಶ ಬಂತು. ಆದರೆ ಇದೇ ಸಮಯದಲ್ಲಿ ಬಾಂಗ್ಲಾ ದೇಶದ ಪ್ರಸಿದ್ಧ ಢಾಕಾ ಸೀರೆಯ ಸುಧಾರಣಾ ಪ್ರಯತ್ನ ಪ್ರಾರಂಭವಾಗಿತ್ತು. ಚಂದ್ರಮೌಳಿ ಮತ್ತು ಅವರ ಅನುಚರರನ್ನು ಬಾಂಗ್ಲಾದೇಶದ ಸರಕಾರವು ವಿಶೇಷ ಆಹ್ವಾನ ನೀಡಿ ಕರೆಯಿಸಿಕೊಂಡಿತು. ಅವರು ಅಲ್ಲಿ ನಡೆಸಿದ ಅದ್ಭುತ ಕಾರ್ಯದಿಂದಾಗಿ ಢಾಕಾ ಸೀರೆಯ ಮಾರಾಟ ತ್ವರಿತಗತಿಯಿಂದ ಹೆಚ್ಚಾಯಿತು!

ಇಂದು ಅಮೇರಿಕೆಯಿಂದ ಹಿಡಿದು ಎಲ್ಲಾ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಕೃತ್ರಿಮ ಬಣ್ಣದಿಂದ ಮನುಷ್ಯರ ಚರ್ಮದ ಮೇಲೆ ಉಂಟಾಗುವ ಅನಿಷ್ಟ ಪರಿಣಾಮದ ವಿರುದ್ಧ ಜಾಗೃತಿ ಮತ್ತು ಚಳವಳಿ ಪ್ರಾರಂಭವಾಗಿದೆ. ಪರಿಸರ ರಕ್ಷಣೆಗಾಗಿ ಮತ್ತು ನಿಸರ್ಗದ ರಕ್ಷಣೆಗಾಗಿ ಹೆಚ್ಚಿನ ಕ್ರಮಗಳನ್ನು ಕೈಗೊಳ್ಳುವುದು ಪ್ರಾರಂಭವಾಗಿದೆ. ನಮ್ಮ ದೇಶದಲ್ಲಿ ಮಾತ್ರ ಕಮಲಾದೇವಿಯವರು ದೂರದೃಷ್ಟಿಯಿಂದ ಪ್ರಾರಂಭಿಸಿದ್ದ ನೈಸರ್ಗಿಕ ಬಣ್ಣದ ಬಳಕೆಗೆ ಸಂಚಕಾರ ಬಂತು.

ದೊಡ್ಡ ಪ್ರಮಾಣದಲ್ಲಿ ಔದ್ಯೋಗೀಕರಣವನ್ನು ನಡೆಸಿ, ಕೈಯಿಂದ ಸ್ವತಂತ್ರವಾಗಿ ತಯಾರಿಸುವ ಎಲ್ಲಾ ವಿಧಾನಗಳನ್ನು ನಾಶಪಡಿಸಿದ್ದರಿಂದ, ಔದ್ಯೋಗಿಕ ತ್ಯಾಜ್ಯ ಅಥವಾ ಕಾರ್ಖಾನೆಗಳ ನಿರುಪಯೋಗಿ ಕೊಳಕು ವಸ್ತುಗಳಿಂದಾಗಿ ಮಾನವನ ಆರೋಗ್ಯಕ್ಕೆ ಎಷ್ಟು ದೊಡ್ಡ ಸಂಕಷ್ಟ ಒದಗಿದೆ! ಎಂಬ ತಿಳಿವಳಿಕೆ ಪಾಶ್ಚಾತ್ಯ ಜನರಲ್ಲಿ ಮೂಡತೊಡಗಿದೆ. ಅವರ ಈ ಪ್ರಜ್ಞೆ ನಮ್ಮಲ್ಲಿ ಮೂಡಲು ಇನ್ನೂ ಐವತ್ತು ವರ್ಷಗಳು ಬೇಕಾಗಬಹುದೇನೋ! ಯುಗಕ್ಕೆ ಒಬ್ಬರಾಗಿ ಜನ್ಮತಾಳಿದ ಕಮಲಾದೇವಿಯವರ ಪ್ರಯತ್ನದಿಂದ ನಡೆಸಲಾದ ಬಹಳಷ್ಟು ಪ್ರಯೋಗಗಳು ಅವರು ಕಣ್ಣು ಮುಚ್ಚುವ ಮೊದಲೇ ಮುಚ್ಚಿಹೋಗಿರುವುದು ನಮ್ಮ ದುರ್ದೈವ!

# ಕಲಾರಂಗ: ಅಭಿನಯ, ನಾಟಕ, ಸಿನೆಮಾ

ಕಮಲಾದೇವಿಗೆ ಸಂಗೀತ ಮತ್ತು ರಂಗಭೂಮಿಯ ಪ್ರೀತಿ ರಕ್ತಗತವಾಗಿ ಬಂದಿತ್ತು. ಅವರ ತಾಯಿ ಗಿರಿಜಾಬಾಯಿಗೆ ಕೂಡಾ ನಾಟಕ, ಕೀರ್ತನೆ ಮತ್ತು ಯಕ್ಷಗಾನದಲ್ಲಿ ಒಲವು ಇತ್ತು. ಕಮಲಾದೇವಿ ಶಾಲೆಗೆ ಹೋಗಲು ಪ್ರಾರಂಭಿಸಿದ ದಿನದಿಂದಲೇ ಅವರ ಕಾನ್ವೆಂಟ್ ಶಾಲೆಯಲ್ಲಿ ಪಿಯಾನೋ ಮತ್ತು ಪಾಶ್ಚಾತ್ಯ ಸಂಗೀತ ಪಾಠ ಅವರಿಗೆ ಲಭಿಸಿತ್ತು.

ಮಹಿಳೆಯರಿಗೆ ಶಿಕ್ಷಣ ನೀಡಿ ಸ್ವಾವಲಂಬಿಗಳಾಗಿ ಮಾಡುವ ಉದ್ದೇಶದಿಂದ ಡಾ. ಆನಿ ಬೆಸೆಂಟ್ ಮತ್ತು ಮಾರ್ಗರೇಟ್ ಕಸಿನ್ಸ್ ಜೊತೆಗೂಡಿ, 1917ರಲ್ಲಿ ವಿಮೆನ್ಸ್ ಇಂಡಿಯಾ ಅಸೋಸಿಯೇಶನ್ ಎಂಬ ಸಂಸ್ಥೆಯನ್ನು ಪ್ರಾರಂಭಿಸಿದ್ದರು. ಈ ಸಂಸ್ಥೆಯ ವತಿಯಿಂದ ಮಂಗಳೂರಿನಲ್ಲಿ ಶಾಲೆಯನ್ನು ಪ್ರಾರಂಭಿಸಲು ಗಿರಿಜಾಬಾಯಿ ತಮ್ಮ ದೊಡ್ಡಮನೆಯಲ್ಲಿ ಅವಕಾಶ ನೀಡಿದ್ದರು. ಇದರ ಮುಖ್ಯಸ್ಥೆಯಾಗಿ ಗ್ರೆಟ್ಟಾ (ಮಾರ್ಗರೇಟ್ ಕಸಿನ್ಸ್) ಮಂಗಳೂರಿಗೆ ಬಂದರು. ಸಂಗೀತದಲ್ಲಿ ಪರಿಣತಿ ಹೊಂದಿದ್ದ ಗ್ರೆಟ್ಟಾ ಪಿಯಾನೋ ಚೆನ್ನಾಗಿ ನುಡಿಸುತ್ತಿದ್ದರು. ಅವರು ತಾಯಿ ಮಗಳಿಬ್ಬರಿಗೂ ಮನೆಯಲ್ಲಿಯೇ ಸಂಗೀತ ಕಲಿಸುತ್ತಿದ್ದರು. ಕಮಲಾದೇವಿಗೆ ಜನಗಣಮನವನ್ನು ಪಿಯಾನೋದಲ್ಲಿ ನುಡಿಸುವುದನ್ನು ಹೇಳಿಕೊಟ್ಟರು. ಈ ಹಾಡಿನ ನಡೆಯನ್ನು ಅವರು ಸ್ವತಃ ರವೀಂದ್ರನಾಥ್ ಠಾಕೂರ್ ಅವರಿಂದಲೇ ಕಲಿತಿದ್ದರು. ತನಗೆ ತಿಳಿದಿರುವ ಈ ಗೀತೆ ಮುಂದೆ ರಾಷ್ಟ್ರಗೀತೆಯಾಗ ಬಹುದೆಂಬ ಕಲ್ಪನೆ ಕೂಡಾ ಆಗ ಕಮಲಾದೇವಿಗೆ ಹೊಳೆದಿರಲಿಲ್ಲ.

ಗ್ರೆಟ್ಟಾಗೆ ಮದ್ರಾಸಿಗೆ ಹೋಗಬೇಕಾಗಿ ಬಂತು. ಅವರಿಗಾಗಿ ಶಾಲೆಯಲ್ಲಿ ಬೀಳ್ಕೊಡುಗೆ ಸಮಾರಂಭವನ್ನು ಆಯೋಜಿಸಲಾಯಿತು. 'ಭಕ್ತ ಮೀರಾ' ನಾಟಕ ಆಡುವುದೆಂದು ನಿಶ್ಚಯಿಸಲಾಯಿತು. ನಾಟಕದ ರಚನೆ ಗ್ರೆಟ್ಟಾರ ಪತಿ ಜೇಮ್ಸ್ ಕಸಿನ್ಸ್ ಅವರದು. ಒಳ್ಳೆಯ ಕಂಠ ಮತ್ತು ಅಭಿನಯವನ್ನು ಕರಗತ ಮಾಡಿರುವ ಕಮಲಾಗೆ ಮೀರಾ ಪಾತ್ರವನ್ನು ನೀಡಲಾಯಿತು. ನಾಟಕದಲ್ಲಿ ಕಮಲಾ ಹೇಳಬೇಕಾಗಿರುವ ಹಾಡುಗಳಿಗೆ ರಾಗ ಹಾಕಿ ಚೆನ್ನಾಗಿ ಅಭ್ಯಾಸ ಮಾಡಲಾಯಿತು. ನಾಯಕನ ಪಾತ್ರವನ್ನು ಪರಿಚಯದ ಚಿಕ್ಕ ಹುಡುಗನೊಬ್ಬನಿಗೆ ವಹಿಸಿಕೊಡಲಾಯಿತು. ಗ್ರೆಟ್ಟಾ ಮತ್ತು ಕಮಲಾಳ ಹುರುಪಿನಲ್ಲಿ ಉಳಿದ ಪಾತ್ರಧಾರಿಗಳು ಯಾವುದೇ ಉತ್ಸಾಹವನ್ನು ತೋರುತ್ತಿಲ್ಲ ಎನ್ನುವ ವಿಚಾರ ಅವರ ಗಮನಕ್ಕೆ ಬರಲೇ ಇಲ್ಲ.

ಮಂಗಳೂರಿನ ಸಭ್ಯ ನಾಗರಿಕರಿಗೆ ಚೇಳು ಕಡಿದಂತಾಯಿತು! 'ಒಂದು ಕುಲೀನ ಮನೆತನದ ಹುಡುಗಿ ಸಾರ್ವಜನಿಕ ರೂಪದಲ್ಲಿ ಒಬ್ಬ ಗಂಡು ಹುಡುಗನೊಡನೆ ನಾಟಕವಾಡುವುದು ಅನಾಗರಿಕ ಮತ್ತು ಅಶ್ಲೀಲ'ವೆಂಬ ಸಿದ್ಧಾಂತಕ್ಕೆ ಅವರು ತಲುಪಿದರು. ಎಲ್ಲರೂ ನಾಟಕವನ್ನು ಬಹಿಷ್ಕರಿಸಿದರು. ಈ ವಿಚಾರವಾಗಿ ಪತ್ರಿಕೆಗಳಲ್ಲಿ ಟೀಕೆ ಬಂತು. ಗುಜುಗುಜು ಮಾತುಗಳಲ್ಲಿ ಅಸಂತೋಷ ವ್ಯಕ್ತಗೊಳ್ಳತೊಡಗಿತು. ನಾಟಕವನ್ನು ರದ್ದುಪಡಿಸುವಂತೆ ಒತ್ತಡ ಬಂತು.

ಗ್ರೆಟ್ಟಾ ಧೈರ್ಯಶಾಲಿ ಹೆಣ್ಣು. 'ಈ ಹೊತ್ತು ಜನರಿಗೆ ಹೆದರಿ ನಾಟಕ ರದ್ದುಪಡಿಸಿದರೆ ನಾವು ಯಾವುದೋ ದೊಡ್ಡ ಅಪರಾಧ ಮಾಡಿದ್ದೇವೆ, ಮತ್ತು ಈಗ ಅದನ್ನು

ಒಪ್ಪಿಕೊಳ್ಳುತ್ತಿದ್ದೇವೆ ಎನ್ನುವ ಅಭಿಪ್ರಾಯ ದೃಢಗೊಳ್ಳುತ್ತದೆ! ಮತ್ತು ಈ ಅಭಿಪ್ರಾಯ ನಾನಾರೂಪದಲ್ಲಿ ಪ್ರಸಾರಗೊಳ್ಳುತ್ತದೆ. ಇಂತಹ ಕಾರಣರಹಿತ ಸಾಮಾಜಿಕ ನಿಂದೆಗೆ ಹೆದರುವುದು ಬೇಡ' ಎಂದುಕೊಂಡ ಆಕೆ ನಾಟಕ ಪ್ರಯೋಗ ನಡೆಸುವುದಾಗಿ ನಿರ್ಧರಿಸಿದರು. ಈ ಸುದ್ದಿಯನ್ನು ಯಾರೋ ಆನಿಬೆಸೆಂಟ್‌ಗೆ ಮುಟ್ಟಿಸಿದರು. ಜನಾಭಿಪ್ರಾಯದ ವಿರುದ್ಧ ನಡೆದುಕೊಂಡರೆ ಶಾಲೆಗೆ ಕೆಟ್ಟ ಹೆಸರು ಬರಬಹುದೆಂದುಕೊಂಡು ಅವರು ಕೂಡಾ ಪ್ರದರ್ಶನ ನೀಡುವುದು ಬೇಡ ಎಂದು ಸಂದೇಶ ಕಳುಹಿಸಿದರು.

ಇದರಿಂದ ಗ್ರೆಟ್ಟಾ ವಿಚಲಿತರಾದರು. ಯಾರನ್ನು ತಾನು ಆಪ್ತರೆಂದು, ಸ್ನೇಹಿತೆಯೆಂದು ತಿಳಿದುಕೊಂಡಿದ್ದೆನೋ ಅವರೇ ಬೆಸೆಂಟ್ ಮೇಡಂಗೆ ಬೇಡವಾದ ಸುದ್ದಿಯನ್ನು ತಲುಪಿಸಿದ್ದು ಅವರಿಗೆ ತಿಳಿಯಿತು. ತನ್ನ ದೃಷ್ಟಿಕೋನ ಮತ್ತು ಸಮರ್ಥನೆಯನ್ನು ಆನಿಬೆಸೆಂಟ್‌ಗೆ ತಿಳಿಯಪಡಿಸಲು ಸಮಯವಿರಲಿಲ್ಲ. ಅವರು ತನ್ನ ಮನೆಯಲ್ಲಿಯೇ ನಾಲ್ಕು ಮಂದಿಯ ಎದುರು ನಾಟಕ ಪ್ರದರ್ಶನ ನೀಡುವುದೆಂಬ ನಿರ್ಧಾರ ಕೈಗೊಂಡರು. ಸಾರ್ವಜನಿಕ ಪ್ರಯೋಗ ರದ್ದಾಯಿತು. ಆದರೂ ಜನರು ದೊಡ್ಡ ಪ್ರಮಾಣದಲ್ಲಿ ಪ್ರತಿಭಟನೆ ನಡೆಸಿದರು. ಗಿರಿಜಾಬಾಯಿ ಹೆದರಿದರು. ಅವರು ಕಮಲಾದೇವಿಯನ್ನು ಕೋಣೆಯೊಳಗೆ ಸೇರಿಸಿ ಬೀಗ ಜಡಿದರು. ಪ್ರದರ್ಶನದ ದಿನ ಊರಿನ ವಿರೋಧಿ ಪಕ್ಷದವರಿಂದ ನಾಯಕ ಪಾತ್ರಧಾರಿಯನ್ನು ಕಿಡ್ನಾಪ್ ಮಾಡಲಾಯಿತು. ಕಮಲಾದೇವಿ ಬಂಧಮುಕ್ತಳಾದಳು.

ಅಪಾರ ನಿರಾಶೆಯನ್ನು ಹೊಂದಿದ ಕಮಲಾ ಗ್ರೆಟ್ಟಾ ಮನೆಗೆ ತೆರಳಿ ಅವರನ್ನು ಅಪ್ಪಿ ಹಿಡಿದು ಅತ್ತಳು. ಗ್ರೆಟ್ಟಾ ಅವಳಿಗೆ ಸಮಾಧಾನ ಹೇಳಿದರು. ಕೊನೆಗೆ ಅವರು ನಾಟಕ ಪ್ರದರ್ಶನ ನೀಡಿಯೇಬಿಟ್ಟರು ! ಸಿದ್ಧಪಡಿಸಿದ ಹಾಡುಗಳನ್ನು ಮೀರಾ ಸುಂದರವಾಗಿ ಹಾಡಿದಳು. ಗಂಡು ಪಾತ್ರಧಾರಿಯ ಸಂಭಾಷಣೆಯೆಲ್ಲವನ್ನೂ ಗ್ರೆಟ್ಟಾ ಓದಿದರು. ಅಲ್ಲಿ ಸೇರಿದ ಸಣ್ಣಗುಂಪಿಗೆ ಸಂಭಾಷಣೆ ಮತ್ತು ಹಾಡುಗಳ ಪ್ರಸ್ತುತಿ ತುಂಬಾ ಹಿಡಿಸಿತು.

ಇಂದಿನ ದಿನಗಳಲ್ಲಿ ಮಂಗಳೂರಿನ ನಾಗರಿಕರು ಸಾಮಾಜಿಕ ದೃಷ್ಟಿಯಿಂದ ಬಹಳ ಸುಧಾರಿಸಿದ್ದಾರೆ. ಆದರೆ ಅಂದಿನ ಅನೇಕ ಘಟನೆಗಳು, ಆ ಕಾಲದ ಸಂಪ್ರದಾಯಸ್ಥರು ಹೇಗೆ ಆಲೋಚಿಸುತ್ತಿದ್ದರು ಎಂಬುದನ್ನು ತಿಳಿಸುತ್ತವೆ. ಇದೇ ಸಮಯದಲ್ಲಿ ಕಮಲಾಳ ಮದುವೆ ಹರೀಂದ್ರನಾಥರೊಂದಿಗೆ ನಡೆದಿತ್ತು. ಹರೀಂದ್ರನಾಥ್ ಉಚ್ಚಶಿಕ್ಷಣಕ್ಕಾಗಿ ವಿದೇಶಕ್ಕೆ ತೆರಳಿದ್ದರು. ಊರಿನಲ್ಲಿ ಉಸ್ತಾದ್ ಕರೀಮ್ ಖಾನರ ಗಾಯನ ಕಚೇರಿ ನಡೆಯುವುದಿತ್ತು. ಕಮಲಾ ತನ್ನ ಸಂಬಂಧಿಕಳಾಗಿದ್ದ ತನ್ನದೇ ವಯಸ್ಸಿನ ಹುಡುಗಿಯೊಬ್ಬಳನ್ನು ಕರೆದುಕೊಂಡು ಸಂಗೀತ ಕಚೇರಿಗೆ ಹೋಗಿದ್ದಳು. ಮರುದಿನ ಆ ಹುಡುಗಿಯ ತಾಯಿ ಕೈಯಲ್ಲೊಂದು ಪತ್ರಿಕೆ ಹಿಡಿದು ಅಳುತ್ತಾ ಗಿರಿಜಾಬಾಯಿಯ ಹತ್ತಿರ ಬಂದರು. "ನೋಡು, ನಿನ್ನ ಮಗಳು ಏನು ಮಾಡಿದ್ದಾಳೆ, ನೋಡು! ಈ ಚಿತ್ರ ನೋಡಿ ನನ್ನ ಮಗಳನ್ನು ಅವಳ ಗಂಡನ ಮನೆಯವರು ಬಿಟ್ಟು ಬಿಡುವುದೆಂದು ನಿರ್ಧರಿಸಿದ್ದಾರೆ! ಅವರಿಗೆ ತುಂಬಾ ಅವಮಾನವಾಗಿದೆಯಂತೆ!" ಆಕೆ ಬಿಕ್ಕಿಬಿಕ್ಕಿ ಅತ್ತರು. "ನಿನ್ನ ಮಗಳು ನನ್ನ ಮಗಳನ್ನು ಕೊಂದುಬಿಟ್ಟಳು !"

ಇಂತಹ ಆಘಾತಕ್ಕೆ ಗಿರಿಜಾಬಾಯಿ ಸಿದ್ಧರಿರಲಿಲ್ಲ. ಮಹಿಳೆಯರಿಗೆ ವಿನಾ ಕಾರಣವಾಗಿ ನಡೆಯುತ್ತಿರುವ ಅನ್ಯಾಯದ ವಿರುದ್ಧ ಅವರು ಹೋರಾಡುತ್ತಾ ಬಂದಿದ್ದರು. ಆದರೆ ಒಬ್ಬ ಮುಗ್ಧ ಹುಡುಗಿಯ ಮೇಲೆ ಕಾರಣವಿಲ್ಲದೆ ಒಂದು ದೊಡ್ಡ ಅಪವಾದ, ಅದೂ ತನ್ನ ಮಗಳ ಕಾರಣವಾಗಿ ಬರಬಹುದೆಂಬ ಕಲ್ಪನೆ ಇದುವರೆಗೂ ಅವರಿಗೆ ಬಂದಿರಲಿಲ್ಲ. ಅವರು ಕಮಲಾ ದೇವಿಯನ್ನು ಅವಳ ಗಂಡನಿರುವಲ್ಲಿಗೆ (ವಿದೇಶಕ್ಕೆ) ಕಳುಹಿಸುವ ನಿರ್ಧಾರ ತಾಳಿದರು.

ಕಮಲಾದೇವಿ ಕೂಡಾ ಸಂಗೀತ-ನಾಟಕದಲ್ಲಿ ಉತ್ತಮ ತರಬೇತಿ ದೊರೆಯುವುದೆಂಬ ಕಾರಣಕ್ಕಾಗಿ ವಿದೇಶಕ್ಕೆ ಹೋಗಲು ಉತ್ಸಾಹದಿಂದ ಸಿದ್ಧರಾದರು.

ಅವರು ಇಂಗ್ಲೆಂಡಿನಲ್ಲಿ ನಾಟಕ ತರಬೇತಿಗಿಂತ ಸಮಾಜಸೇವಾ ಕ್ಷೇತ್ರದಲ್ಲಿ ನೆರವಾಗುವ ಡಿಪ್ಲೊಮಾ ಶಿಕ್ಷಣವನ್ನು ಪಡೆದರು. ಅಲ್ಲಿ ಲಂಡನ್ ಮತ್ತು ಸುತ್ತುಮುತ್ತ ಊರುಗಳಲ್ಲಿ ನಡೆಯುತ್ತಿದ್ದ ನಾಟಕಗಳನ್ನು ತಪ್ಪದೆ ನೋಡುತ್ತಿದ್ದರು. ಸ್ವತಃ ಅವರನ್ನು ಮತ್ತು ಹರೀಂದ್ರನಾಥರನ್ನು ಹತ್ತಿರಕ್ಕೆ ತಂದಿರುವುದು ಈ ನಾಟಕದ ಪ್ರೀತಿಯೇ. ಅವರಿಬ್ಬರ ಆಸಕ್ತಿಗೆ ಲಂಡನ್‌ನಲ್ಲಿ ಹೆಚ್ಚಿನ ಅವಕಾಶ ದೊರೆಯಿತು. ಚೆಕಾವ್ ಅವರ 'ಚೆರ್ರಿ ಆರ್ಚಡ್' ರಷ್ಯನ್ ನಾಟಕದ ಪ್ರಯೋಗದಿಂದ ಇಬ್ಬರೂ ಪ್ರಭಾವಿತರಾದರು. ಅಲ್ಲಿ ಇಂಗ್ಲಿಷ್ ರಂಗಭೂಮಿ, ನಾಟಕತಂತ್ರ, ಮತ್ತು ರಂಗಪರಿಕರಗಳ ಅಧ್ಯಯನವನ್ನು ಕಮಲಾದೇವಿ ನಡೆಸಿದರು. ನಾಟಕ ಕಲೆಯಿಂದ ಸಮಾಜ ಸುಧಾರಣೆ ಸಾಧ್ಯವೆನ್ನುವುದು ಈ ದಂಪತಿಗಳ ನಂಬಿಕೆಯಾಗಿತ್ತು.

ಅವರು ವಿದೇಶದಿಂದ ಮರಳಿ ಬಂದ ನಂತರ ಒಂದು ನಾಟಕ ವೃಂದವನ್ನು (ರೆಪರ್ಟರಿ) ಕಟ್ಟಿದರು. ತಮ್ಮ ಮನಸ್ಸಿಗೆ ಒಪ್ಪಿಗೆಯಾಗುವ ಆಸಕ್ತಿಗೆ ರೂಪ ನೀಡಲು ಈ ರೆಪರ್ಟರಿ ಸಹಾಯಕವಾಗುತ್ತದೆ ಎಂದು ಕಮಲಾದೇವಿಗೆ ಕಂಡಿತು. ತನ್ನ ಉಳಿದ ಬದುಕನ್ನು ನಾಟಕ ಕ್ಷೇತ್ರಕ್ಕೆ ಅರ್ಪಣೆ ಮಾಡುವುದೆಂದು ಅವರು ನಿರ್ಧಾರ ತಳೆದರು.

ಹರೀಂದ್ರನಾಥ್ ಸ್ವತಃ ಉತ್ತಮ ನಾಟಕಕಾರರು. ನಾಟಕಗಳನ್ನು ರಚಿಸುತ್ತಿದ್ದರು, ಆಡಿಸುತ್ತಿದ್ದರು, ಹಾಡುಗಳನ್ನು ಬರೆಯುತ್ತಿದ್ದರು. ಸುಂದರವಾಗಿ ಹಾಡುತ್ತಿದ್ದರು (ಅವರ ಹಾಡುಗಳ ರಚನೆ ಮತ್ತು ಹಾಡುಗಾರಿಕೆಯ ಕಲೆಗೆ ಕಮಲಾದೇವಿ ಮನಸೋತಿದ್ದರು ಎಂದು ಹೇಳಲಾಗುತ್ತದೆ!). ಕಮಲಾದೇವಿ-ಹರೀಂದ್ರನಾಥರ ಜೋಡಿ 'ಬಂಗಾರದ ದಂಪತಿ ಜೋಡಿ' ಎಂದೇ ಪ್ರಸಿದ್ಧವಾಯಿತು.

ಹೆಣ್ಣುಮಕ್ಕಳು ಹವ್ಯಾಸಿ ರಂಗಪ್ರಯೋಗಗಳಲ್ಲಿ ಪಾಲುಗೊಳ್ಳುವ ಪದ್ಧತಿ ಇತ್ತೀಚಿಗಿನದು ಎಂಬುದನ್ನು ನಾವು ಕಂಡಿದ್ದೇವೆ. ವೃತ್ತಿ ರಂಗಭೂಮಿಯಲ್ಲಿ ಕೂಡ ಹೆಣ್ಣುಪಾತ್ರಗಳನ್ನು ನಿರ್ವಹಿಸುತ್ತಿದ್ದವರು ಪುರುಷರೇ. ಹೀಗಾಗಿ ಸುಂದರ, ಸುಶಿಕ್ಷಿತ, ಮತ್ತು ಪ್ರಶಂಸೆಗೆ ಅರ್ಹವಾದ ರೀತಿಯಲ್ಲಿ ಹಾಡುವ ಯುವದಂಪತಿ ನಾಟಕರಂಗದಲ್ಲಿ ಕಾಣಿಸಿಕೊಂಡ ಸುದ್ದಿ ನಾಲ್ಕೂ ದಿಕ್ಕಿಗೆ ಹಬ್ಬಿತು. ಅವರ ನಾಟಕ ಮಂಡಳಿ ಕೆಲವೇ ದಿನಗಳಲ್ಲಿ ಪ್ರಸಿದ್ಧವಾಯಿತು.

ಹರೀಂದ್ರನಾಥರ ನಾಟಕಗಳಲ್ಲಿ ಎರಡು ಮುಖ್ಯ ಪಾತ್ರಗಳು ಇರುತ್ತಿದ್ದವು. ಉಳಿದವುಗಳೆಲ್ಲಾ ಸಣ್ಣಪುಟ್ಟ ಪಾತ್ರಗಳು. ನಾಟಕ ಪ್ರದರ್ಶನಕ್ಕಾಗಿ ವಾಸ್ತವ್ಯ ಹೂಡುತ್ತಿದ್ದ ಊರಿನ ಉತ್ಸಾಹಿ ಕಲಾವಿದರನ್ನು ತೆಗೆದುಕೊಂಡು ಅವರಿಗೆ ರಿಹರ್ಸಲ್ ನೀಡಿ ನಾಟಕದ ದಿನ ರಂಗಮಂಚದ ಮೇಲೆ ಕರೆತರುವ ಸಾಮರ್ಥ್ಯ ಹರೀಂದ್ರನಾಥ್ ಮತ್ತು ಕಮಲಾದೇವಿ ಇಬ್ಬರಲ್ಲಿಯೂ ಇತ್ತು. ಅವರಿಬ್ಬರೂ ಸೇರಿಕೊಂಡು ಬೇರೆ ಬೇರೆ ನಗರಗಳಲ್ಲಿ ರೆಪರ್ಟರಿ ರೂಪದಿಂದ ನಾಟಕ ಪ್ರದರ್ಶನ ನೀಡುವುದನ್ನು ಪ್ರಾರಂಭಿಸಿದರು. ಐತಿಹಾಸಿಕ ಘಟನೆಗಳಿಗೆ ವರ್ತಮಾನ ರೂಪವನ್ನು ನೀಡುತ್ತಿದ್ದರು. ಜಾತಿ ಪದ್ಧತಿಯ ದುರವಸ್ಥೆ, ಬಾಲ್ಯವಿವಾಹದ ಅನಿಷ್ಟ, ಅಸ್ಪೃಶ್ಯತೆಯ ವಿರೂಪ ಈ ರೀತಿಯ ಭಾರತೀಯ ಸಮಾಜಕ್ಕೆ ಪೀಡೆಯಾಗಿರುವ ವಿಷಯದ ಕುರಿತು ನಾಟಕಗಳನ್ನು ರಚಿಸಿ ಪ್ರದರ್ಶನ ನೀಡತೊಡಗಿದರು. ಪೌರಾಣಿಕ ನಾಟಕಗಳನ್ನು ನೋಡಿ ನೋಡಿ ಬೇಸತ್ತ ಜನರಿಗೆ ಈ ಹೊಸ ರೀತಿಯ ನಾಟಕಗಳು ತುಂಬಾ ಇಷ್ಟವಾದವು.

ಅವರ ನಾಟಕಗಳು ಇಂಗ್ಲಿಷ್ ಮತ್ತು ಹಿಂದಿ ಭಾಷೆಯಲ್ಲಿ ಇರುತ್ತಿದ್ದವು. ಅವರ ನಾಟಕಗಳ ಪ್ರಯೋಗಗಳು ದೆಹಲಿ, ಮುಂಬೈ, ಮತ್ತು ದಕ್ಷಿಣ ಭಾರತದ ಅನೇಕ

ಪಟ್ಟಣಗಳಲ್ಲಿ ನಡೆದವು. ಸಿನೇರಿ, ಪರದೆಗಳು ಮತ್ತು ರಂಗಭೂಮಿ ಸಜ್ಜಿಕೆಗಳಿಗೆ ಬಣ್ಣ ಬಳಿಯುವ ಕೆಲಸವನ್ನು ಸ್ವತಃ ಅವರೇ ಮಾಡುತ್ತಿದ್ದರು. ಮಗ ರಾಮನನ್ನು ಗಿರಿಜಾಬಾಯಿಯ ವಶಕ್ಕೆ ಒಪ್ಪಿಸಿ ಇಬ್ಬರೂ ತಮ್ಮ ರಂಗಪ್ರಯೋಗದ ಬದುಕನ್ನು ಪ್ರಾರಂಭಿಸಿದರು. ಇಡೀ ಭಾರತದೇಶವೇ ಅವರ ಭೂಮಿಕೆಯಾಯಿತು. ಮಗ ರಾಮು ದೊಡ್ಡವನಾದ ಮೇಲೆ ಅವನು ಕೂಡಾ ನಾಟಕದಲ್ಲಿ ಪಾತ್ರ ಮಾಡುವುದನ್ನು ಪ್ರಾರಂಭಿಸಿದ.

ಹರೀಂದ್ರನಾಥರು ಅನೇಕ ಒಪೆರಾಗಳನ್ನು ರಚಿಸಿದ್ದಾರೆ. ಸಂತ ತುಕಾರಾಮ, ಜಯದೇವ, ಸಂತ ಸಖೂ, ಏಕನಾಥ, ಪುಂಡಲೀಕ ಇತ್ಯಾದಿ. ತುಂಬಾ ಜನಪ್ರಿಯವಾದ ಹಾಸ್ಯ ನಾಟಕಗಳನ್ನು ಬರೆದಿದ್ದಾರೆ. ಇವರು ಮುಂಬೈ, ಪುಣೆ, ಬೆಂಗಳೂರು, ಮದ್ರಾಸ್, ಕೊಲೊಂಬೋ (ಶ್ರೀಲಂಕಾ) ವರೆಗೆ ಹೋಗಿ ಇಂಗ್ಲಿಷ್ ನಾಟಕಗಳನ್ನು ಪ್ರದರ್ಶಿಸಿದ್ದಾರೆ. ಇವರ ನಾಟಕಗಳಿಗೆ ಪ್ರೇಕ್ಷಕರು ಕಿಕ್ಕಿರಿದು ತುಂಬಿಕೊಳ್ಳುತ್ತಿದ್ದರು. ಮುಂಬೈ ಥಿಯೇಟರ್ ಒಂದರಲ್ಲಿ ಅವರ ನಾಟಕಕ್ಕೆ ಟಿಕೇಟ್ ದೊರೆಯದೆ ನೂರಾರು ಪ್ರೇಕ್ಷಕರು ನಿರಾಶರಾಗಿ ಹಿಂತಿರುಗಿ ಹೋದದ್ದುಂಟು!

ಸ್ವಾತಂತ್ರ್ಯ ಚಳವಳಿ ತೀವ್ರಸ್ವರೂಪವನ್ನು ತಾಳತೊಡಗಿತ್ತು. ಭಾರತಮಾತೆಯ ಆರ್ತಕರೆ ಕಮಲಾದೇವಿಯ ಸುಂದರ ಧ್ವನಿಯನ್ನು ದಾಟಿ ಅವರ ಕಿವಿಯನ್ನು ತಲುಪಿತು! ಹರೀಂದ್ರನಾಥ್ ಮತ್ತೆ ವಿದೇಶಕ್ಕೆ ತೆರಳಿದರು. ಕಮಲಾದೇವಿಯ ಗಮನ ಸತ್ಯಾಗ್ರಹದ ಕಡೆಗೆ ಹರಿಯಿತು.

* * *

ಸ್ವಾತಂತ್ರ್ಯ ಚಳವಳಿ, ಮತ್ತು ಸೇವಾದಳದ ಸ್ವಯಂಸೇವೆ, ನಂತರ ಅಖಿಲ ಭಾರತ ಮಹಿಳಾ ಪರಿಷತ್ತಿನ ಕಾರ್ಯದೊಂದಿಗೆ ಕಮಲಾದೇವಿಯ ಸಂಗೀತ ಮತ್ತು ನಾಟಕದ ಚಟುವಟಿಕೆಗಳು ಕೂಡಾ ಚಾಲ್ತಿಯಲ್ಲಿದ್ದವು. ಈಗ ಅವರು ಸ್ವತಃ ನಾಟಕದಲ್ಲಿ ಪಾತ್ರ ವಹಿಸುವುದಕ್ಕಿಂತ, ನಾಟಕಗಳನ್ನು ನಡೆಸುವುದರಲ್ಲಿ ಮತ್ತು ರಂಗಭೂಮಿಯನ್ನು ಸಂಘಟಿತ ರೂಪದಿಂದ ಬೆಳೆಸುವುದರ ಕಡೆಗೆ ಗಮನ ಹರಿಸಿದರು. ಇಂಡಿಯನ್ ನ್ಯಾಶನಲ್ ಥಿಯೇಟರ್(ಐ.ಎನ್.ಟಿ.)ನ್ನು 1944ರಲ್ಲಿ ಮುಂಬೈಯಲ್ಲಿ ಸ್ಥಾಪಿಸಿದರು. ಇದರಲ್ಲಿ ನಾಟಕಕ್ಷೇತ್ರದ ಪರಿಚಯವಿರುವ ಬೇರೆ ಬೇರೆ ವೃತ್ತಿಯ ಜನರು ಬಂದು ಸೇರಿಕೊಂಡರು. ಆ ಕಾಲದ ಭಾರತೀಯ ರಂಗಭೂಮಿಯೆಂದರೆ ಅದು ಭಾರತೀಯ ಮತ್ತು ಪಾಶ್ಚಾತ್ಯ ರಂಗಭೂಮಿಯ ಮಿಶ್ರಸಂತಾನವಾಗಿತ್ತು. ಎರಡೂ ಕಡೆಗಳ ಉತ್ತಮ ಅಂಶಗಳನ್ನು ಸ್ವೀಕರಿಸುವ ಬದಲಾಗಿ, ಅಲ್ಪ ಮೌಲ್ಯದ ಮನರಂಜನೆಯ ಹಾಸ್ಯ, ಲೇವಡಿ ಮತ್ತು ಮೊದಲ ದೃಶ್ಯಕ್ಕೆ ಮಹತ್ವ ನೀಡುವ ನಾಟಕಗಳನ್ನು ಆಡಲಾಗುತ್ತಿತ್ತು.

ಕಮಲಾದೇವಿಗೆ ಸಾಂಪ್ರದಾಯಿಕ ರಂಗಭೂಮಿಯ ಕುರಿತು ಆದರ ಮತ್ತು ಗೌರವವಿದ್ದ ಹಾಗೆ ಆಧುನಿಕ ರಂಗಭೂಮಿಯ ತಂತ್ರ, ಬೆಳಕಿನ ವ್ಯವಸ್ಥೆ ಮತ್ತು ಪರಿಣಾಮಗಳ ಕುರಿತು ಕೂಡಾ ಆಸಕ್ತಿ ಇತ್ತು. ಎರಡೂ ಪ್ರಯೋಗಗಳನ್ನು ಸಮರ್ಪಕ ರೀತಿಯಿಂದ ಮೇಳೈಸಿ ಕೊಂಡು ನವೀನ ನಾಟ್ಯರಂಗ ತರುವುದು ಸಾಧ್ಯವಿದೆ ಎನ್ನುವುದು ಅವರ ನಂಬಿಕೆಯಾಗಿತ್ತು. ಸಾಂಪ್ರದಾಯಿಕ ನಾಟ್ಯಕಲೆಗೆ ಆಧುನಿಕ ರೂಪವನ್ನು ನೀಡಲು ಅವರು ವಿಶೇಷವಾಗಿ ಶ್ರಮ ಪಟ್ಟರು. ಭಾರತೀಯ ನಾಟ್ಯಪ್ರಯೋಗ, ಸಂಗೀತ, ಜಾನಪದ ರಂಗ(ಇದರಲ್ಲಿ ಯಕ್ಷಗಾನ, ರಾಸ, ದಾಂಡಿಯಾ ರಸ್, ನೌಟಂಕಿ, ತಮಾಶಾ, ಸೂತ್ರದ ಗೊಂಬೆಯಾಟ, ಬಂಗಾಲಿ ಜಾತ್ರ ಇತ್ಯಾದಿ ಪ್ರಕಾರಗಳು ಬರುತ್ತವೆ), ಇವುಗಳ ಪ್ರಯೋಗಗಳನ್ನು ಹಿತಮಿತವಾಗಿ ನಾಟಕರೂಪದಲ್ಲಿ ಜೋಡಿಸಿದರೆ, ಮನರಂಜನೆಯ ಜೊತೆಗೆ ಸಾಮಾಜಿಕ ಜಾಗೃತಿಯನ್ನು ಉಂಟುಮಾಡುವುದಕ್ಕೆ ಸಾಧ್ಯವಿದೆ! ಎಂಬುದು ಅವರ ವಿಶ್ವಾಸವಾಗಿತ್ತು.

ಈ ದೃಷ್ಟಿಯಿಂದ ಅವರು ಸೂಚಿಸಿದ ಹೊಸ ಪ್ರಯೋಗ ಜವಾಹರಲಾಲ್ ನೆಹರೂ ಅವರ ಡಿಸ್ಕವರಿ ಆಫ್ ಇಂಡಿಯಾ (ಭಾರತದ ಶೋಧ) ಎಂಬ ಐತಿಹಾಸಿಕ ಗ್ರಂಥವನ್ನು ಆಧರಿಸಿದ ನಾಟ್ಯರೂಪ. 1947ನೇ ಇಸವಿಯ ಕೊನೆಯಲ್ಲಿ ಸ್ವತಂತ್ರ ಭಾರತದ ಪ್ರಪ್ರಥಮ ಏಷ್ಯಾ ರಾಷ್ಟ್ರಗಳ ಅಧಿವೇಶನವನ್ನು ದೆಹಲಿಯಲ್ಲಿ ಆಯೋಜಿಸಲಾಗಿತ್ತು. ಆಗ ನೆರೆದ ಪ್ರತಿನಿಧಿಗಳ ಮುಂದೆ ಈ ಗ್ರಂಥದ ಕೆಲವು ಮಾಹಿತಿಗಳನ್ನು ಬ್ಯಾಲೆ ರೂಪದಲ್ಲಿ ಪ್ರಸ್ತುತಪಡಿಸಲಾಯಿತು. ಅದು ಪ್ರಚಂಡ ರೀತಿಯಲ್ಲಿ ಯಶಸ್ವಿಯಾಯಿತು. ಪ್ರದರ್ಶನದ ನಂತರ ಲೇಖಕರನ್ನು ವೇದಿಕೆಗೆ ಬರುವಂತೆ ಎಲ್ಲರೂ ಒತ್ತಾಯಿಸಿದರು. ಆಗ ವೇದಿಕೆಯ ಮೇಲೆ ನೆಹರೂ ಹೇಳಿದ್ದೇನೆಂದರೆ, "ನನ್ನ ಗ್ರಂಥಕ್ಕಿಂತ ಈ ರಂಗಪ್ರಯೋಗವು ಹೆಚ್ಚು ಸುಂದರ ಮತ್ತು ಪರಿಣಾಮಕಾರಿಯಾಗಿದೆ. ನನಗೆ ಹೆಚ್ಚು ಸಂತೋಷವಾಗಲು ಕಾರಣವೇನೆಂದರೆ, ಪ್ರಾಚೀನ ಭಾರತದ ಭವ್ಯ ಪರಂಪರೆಯನ್ನು ಕಲಾಮಾಧ್ಯಮವು ನಿಮ್ಮ ಕಣ್ಣಿನ ಮುಂದೆ ಪ್ರತ್ಯಕ್ಷಗೊಳಿಸಿದೆ. ಇದರಲ್ಲಿ ಭವಿಷ್ಯ ಕಾಲದ ಹೊಳಹು ನಿಮಗೆ ಕಂಡುಬರುತ್ತದೆ" ಈ ಕಾರ್ಯಕ್ರಮದ ನಿರ್ದೇಶನವನ್ನು ಶಾಂತಿವರ್ಧನ್ ಅವರಿಗೆ ವಹಿಸಿಕೊಡಲಾಗಿತ್ತು. ಕಮಲಾದೇವಿಗೆ ನಿಜವಾಗಿಯೂ ಸಂತೋಷವಾಯಿತು.

ಕ್ರಮೇಣ ಐ.ಎನ್.ಟಿ.ಯ ಹದಿನೈದು ಶಾಖೆಗಳು ಬೇರೆ ಬೇರೆ ಪ್ರಾಂತಗಳಲ್ಲಿ ಪ್ರಾರಂಭ ಗೊಂಡವು. ಇದರಿಂದ ಆಯಾ ಪ್ರದೇಶದ ಜಾನಪದ ರಂಗಭೂಮಿ ಪುನಶ್ಚೇತನಗೊಳ್ಳಲು, ಬೆಳೆಯಲು ಅವಕಾಶ ದೊರೆಯಿತು. ಅಲ್ಲಿಂದಲೇ ರಂಗಚಳವಳಿ ಪ್ರಾರಂಭವಾಯಿತು, ಪ್ರದರ್ಶನ ಕಲೆ ಎಂಬ ಜೀವಂತ ರಂಗಭೂಮಿ ರೂಪು ತಾಳಿತು.

ಆಧುನಿಕ ರಂಗಭೂಮಿಯಲ್ಲಿ ಹಬೀಬ್ ತನ್ವೀರ್ ಪ್ರಸಿದ್ಧ ವ್ಯಕ್ತಿ. ಅವರು ಪ್ರದರ್ಶನ ಕಲೆಗೆ ಭಾರತೀಯ ರೂಪ ನೀಡುವುದರಲ್ಲಿ ಕಮಲಾದೇವಿಯವರ ಪ್ರಯತ್ನ ಮುಂಚೂಣಿ ಯದ್ದಾಗಿದೆ ಎಂದು ಸ್ಮರಿಸಿದ್ದಾರೆ. ಈಗ ನಮಗೆ ಚಿರಪರಿಚಿತರಾಗಿರುವ ಚಂದ್ರಶೇಖರ ಕಂಬಾರ, ಗಿರೀಶ್ ಕಾರ್ನಾಡ್, ವಿಜಯ್ ತೆಂಡೂಲ್ಕರ್ ಅವರಂತಹ ಪ್ರಸಿದ್ಧ ನಾಟಕಕಾರರು ತಮ್ಮ ಸಾಮಾಜಿಕ, ಪೌರಾಣಿಕ, ಐತಿಹಾಸಿಕ ವಸ್ತುವನ್ನೊಳಗೊಂಡಿರುವ ನಾಟಕಗಳಲ್ಲಿ (ಜೋಕುಮಾರಸ್ವಾಮಿ, ಹಯವದನ, ನಾಗಮಂಡಲ ಇತ್ಯಾದಿ) ಜಾನಪದ ಅಂಶವನ್ನು ಧಾರಾಳವಾಗಿ ಬಳಸಿದ್ದಾರೆ. ಉಳಿದ ರಾಜ್ಯಗಳಲ್ಲಿ ಕೂಡಾ ಈ ರೀತಿಯ ಪ್ರಯೋಗಗಳು ಯಶಸ್ವಿಯಾಗಿವೆ. ಈ ರೀತಿಯ ನಾಟಕಗಳಲ್ಲಿ ಮನುಷ್ಯ ಬದುಕಿನ ದುರ್ಬಲ ಮತ್ತು ಸಬಲ ಅಂಶಗಳು, ಮತ್ತು ಅವರು ಅದನ್ನು ಮೀರಲು ಅಥವಾ ಸಾಧಿಸಲು ನಡೆಸುವ ಪ್ರಯತ್ನ, ಮನರಂಜನೆ, ಜೊತೆಗೆ ಜೀವನದರ್ಶನದ ಹೊಳಹು ಕೂಡಾ ಕಾಣಸಿಗುತ್ತವೆ. ಕಮಲಾದೇವಿಯವರು ಮೂಲತಃ ಪ್ರಸ್ತುತಪಡಿಸಿದ ವಿಚಾರಗಳಿಗೆ ಇಂತಹ ಪ್ರಯೋಗಗಳಲ್ಲಿ ಮೂರ್ತರೂಪ ದೊರೆತಿದೆ.

ಲೋಕವೇದ (ಜಾನಪದ) ಅಥವಾ ಲೋಕಸಂಸ್ಕೃತಿಯ ಪ್ರತೀಕವಾಗಿರುವ ರಂಗಪ್ರಯೋಗವು ಮಹಾನಗರದ ಇಂಗ್ಲಿಷ್ ಶಿಕ್ಷಣ ಪಡೆದ ಜನರಿಗೆ ಪರಿಚಿತವಿರಲಿಲ್ಲ. ಈ ಕುರಿತು ಅವರಲ್ಲಿ ತಿರಸ್ಕಾರದ ಭಾವನೆ ಇತ್ತು ಎಂದೇ ಹೇಳಬಹುದು. ಐವತ್ತರ ದಶಕದಲ್ಲಿ ಕಮಲಾದೇವಿಯವರು ಪ್ರಥಮ ಜಾನಪದ ನಾಟಕೋತ್ಸವವನ್ನು ದೆಹಲಿಯಲ್ಲಿ ಸಂಘಟಿಸಿದರು. ಆಗ ರಸಿಕರು ಮೂಗು ಮುರಿದರು. ಜನ ಸೇರಲಿಲ್ಲ. ಕಮಲಾದೇವಿ ಅಧೀರರಾಗಲಿಲ್ಲ. ಅವರು ದೆಹಲಿಯ ಸುತ್ತುಮುತ್ತಲಿನ ಹಳ್ಳಿಗಳಿಂದ ಜನರನ್ನು ಒಟ್ಟುಗೂಡಿಸಿ ಖಾಸಗಿ ವಾಹನದಲ್ಲಿ ಕರೆತಂದರು. ನಾಟಕ ನೋಡಿ ಆ ಜನರಿಗಾದ ಸಂತಸ

ಅಷ್ಟಿಷ್ಟಲ್ಲ! ಈ ಕುರಿತು ಪ್ರಚಾರ ಜಾಸ್ತಿಯಾದ ಬಳಿಕ ನಾಟಕೋತ್ಸವ ವಾರದುದ್ದಕ್ಕೂ ಯಶಸ್ಸನ್ನು ಗಳಿಸಿತು. ಶಿಷ್ಟರೆಂದು ತಿಳಿದುಕೊಂಡ ಜನರಿಗೆ ಕೂಡಾ ನೋಡುನೋಡುತ್ತಾ ಈ ವಿಧದ ಮಿಶ್ರ ಪ್ರಯೋಗ ಮೆಚ್ಚುಗೆಯಾಗತೊಡಗಿತು.

ಇಂದು ಭಾರತದ ಪ್ರಗತಿಕ್ಷೇತ್ರದಲ್ಲಿ ಪ್ರದರ್ಶನಕಲೆ ಮಹತ್ವದ ಸ್ಥಾನವನ್ನು ಪಡೆದಿದೆ. ಕುಟುಂಬಯೋಜನೆ, ಮಾಲಿಕ-ನೌಕರರ ಶೋಷಣೆ, ಕೌಟುಂಬಿಕ ಘರ್ಷಣೆ, ಭಯಾನಕ ರೋಗನಿಯಂತ್ರಣದಂತಹ ಜನಜಾಗೃತಿ ಕಾರ್ಯಕ್ರಮಗಳಲ್ಲಿ ಕಮಲಾದೇವಿಯವರು ಐವತ್ತು ವರ್ಷಗಳ ಹಿಂದೆಯೇ ಹಾಕಿಕೊಟ್ಟ ಮೂಲತತ್ವ ಕಾಣಲು ಸಿಗುತ್ತದೆ. ಅವರು ಸಾಂಪ್ರದಾಯಿಕ ಮತ್ತು ಜನಪದರಂಗದ ಕಲಾತ್ಮಕ ಅಂಶವನ್ನು ಆಧುನಿಕ ಪ್ರಯೋಗದಲ್ಲಿ ಅಳವಡಿಸಿ, ಅದನ್ನು ದುಡಿಸಿಕೊಂಡ ಯಶಸ್ವಿ ನಾಟಕಕಾರರಾಗಿದ್ದಾರೆ.

ಪಾಶ್ಚಾತ್ಯ ದೇಶದಲ್ಲಿ ಫೆಸ್ಟಿವಲ್ ಆಫ್ ಇಂಡಿಯಾ ತೊಂಭತ್ತರ ದಶಕದಲ್ಲಿ ನಡೆಯಿತು. ಗ್ರಾಮೀಣ ಕಲಾವಿದರು ಜಾಗತಿಕ ವೇದಿಕೆಯ ಮೇಲೆ ಶೋಭಿಸಿದರು. ಸರಕಾರ ಈ ಕಲಾವಿದರನ್ನು ಗುರುತಿಸುವ ಪ್ರಕ್ರಿಯೆಯನ್ನು ಒಂದೇ ಬಾರಿಗೆ ಪ್ರಾರಂಭಿಸಿದ್ದೇನಲ್ಲ. ಗ್ರಾಮೀಣ ಕಲಾಪ್ರಯೋಗ ಮಹಾನಗರಗಳಲ್ಲಿ ಶುರುವಾದದ್ದು ಯಾವಾಗ? ಎಂದು ಆಳವಾಗಿ ಆಲೋಚಿಸಿದಾಗ, ಕಮಲಾದೇವಿಯವರ ಬಹಳ ಹಿಂದಿನ ಪ್ರಯತ್ನ ಎದ್ದು ಕಾಣುತ್ತದೆ!

ಯುನೆಸ್ಕೋ ಸಹಾಯದಿಂದ ರಚಿಸಲಾದ ಐಎನ್‌ಟಿಯು ಕಮಲಾದೇವಿಯವರ ಸಕ್ರಿಯ ಪ್ರಯತ್ನದಿಂದ ರಾಷ್ಟ್ರೀಯ ನಾಟಕಶಾಲೆಯ (ನ್ಯಾಶನಲ್ ಸ್ಕೂಲ್ ಆಫ್ ಡ್ರಾಮ-ಎನ್.ಎಸ್.ಡಿ.) ರೂಪವನ್ನು ತಾಳಿತು(1954). ಇಬ್ರಾಹಿಂ ಅಲ್ಕಾಜಿಯವರು ಅದರ ಪ್ರಥಮ ಮತ್ತು ಪ್ರಸಿದ್ಧ ನಿರ್ದೇಶಕರಾದರು. ವಿದೇಶಿಯರಾಗಿದ್ದರೂ ಅವರು ಪುರಾತನ ರಂಗಭೂಮಿಯ ಪುನಶ್ಚೇತನವನ್ನು ನಾನಾರೂಪದಿಂದ ಮಾಡಿದರು. ಇವತ್ತು ಈ ಸಂಸ್ಥೆಯಲ್ಲಿ ತರಬೇತಿ ಹೊಂದಿದ ಕಲಾವಿದರು ದೇಶದಾದ್ಯಂತ ಕಾಣಲು ಸಿಗುತ್ತಾರೆ. ಇದರಲ್ಲಿ ಬಿ.ವಿ. ಕಾರಂತ, ಪ್ರೇಮಾ ಕಾರಂತ, ಇಂದು ಖ್ಯಾತರಾಗಿರುವ ಬಿ. ಜಯಶ್ರೀ, ಕಾಸರವಳ್ಳಿ ದಂಪತಿಗಳು ಕರ್ನಾಟಕದವರಾಗಿದ್ದಾರೆ.

ಕಮಲಾದೇವಿಯವರು ತಮ್ಮ ನಾಟಕದ ಪ್ರೀತಿಯನ್ನು ಕೊನೆಯ ದಿನಗಳವರೆಗೆ ಉಳಿಸಿಕೊಂಡಿದ್ದರು. ದೆಹಲಿಯಲ್ಲಿದ್ದರೂ ಭಾಷಾಭೇದವಿಲ್ಲದೆ ಬೇರೆ ಬೇರೆ ಭಾಷೆಗಳ ನಾಟಕಗಳನ್ನು ವೀಕ್ಷಿಸುತ್ತಿದ್ದರು. ವಯಸ್ಸಾದ ನಂತರವೂ ಲಿಫ್ಟ್ ಇಲ್ಲದ ಕಡೆಗಳಲ್ಲಿ ಆರು ಮಹಡಿ ಹತ್ತಿಹೋಗಿ ಅಲ್ಲಿಯ ಸಭಾಂಗಣದಲ್ಲಿ ಅವರು ನಾಟಕ ನೋಡುತ್ತಿದ್ದುದನ್ನು ಇಬ್ರಾಹಿಂ ಅಲ್ಕಾಜಿಯವರು ನೆನಪಿಸಿಕೊಂಡದ್ದುಂಟು. ನಾಟಕದ ಕೊನೆಯವರೆಗೂ ಕುಳಿತು ನೋಡುತ್ತಿದ್ದರು. ಪ್ರದರ್ಶನ ಮುಗಿದ ಬಳಿಕ ಪಾತ್ರಧಾರಿಗಳನ್ನು ಭೇಟಿಯಾಗುತ್ತಿದ್ದರು. ವಿಮರ್ಶೆಯೊಂದಿಗೆ ಅವರನ್ನು ಪ್ರೋತ್ಸಾಹಿಸುತ್ತಿದ್ದರು. ಅವರಿಗೆ ಕಲೆಯಲ್ಲಿ ಇದ್ದಷ್ಟು ನಂಬಿಕೆ ಬೇರೆ ಯಾವುದೇ ಇಸಂಗಳಲ್ಲಿ(ನ್ಯಾಶನ್ಯಾಲಿಸಂ, ಸೋಶಿಯಲಿಸಂ, ಕಮ್ಯೂನಿಸಂ ಇತ್ಯಾದಿ) ಇರಲಿಲ್ಲ. ಅವರ ಮನಸ್ಸಿಗೆ ಯಾವುದೇ ಹೊಸಪ್ರಯೋಗಶೀಲತೆ ಹಿಡಿಸುತ್ತಿತ್ತು. ಅವರು ಅಪ್ಪಟ ಕಲಾವಿದರನ್ನು ತಟ್ಟನೆ ಗುರುತಿಸುತ್ತಿದ್ದರು ಮತ್ತು ಅವರಿಗೆ ಉತ್ತೇಜನ ನೀಡುತ್ತಿದ್ದರು.

ವಿಶ್ವ ರಂಗಭೂಮಿಯ ಅಧ್ಯಯನವನ್ನು ಚೆನ್ನಾಗಿ ನಡೆಸಿದ್ದರಿಂದ, ದೆಹಲಿಯ ಸಮೀಪದ ಮೆಹರೊಲಿಯಲ್ಲಿ ಥಿಯೇಟರ್ ಆರ್ಟ್ಸ್ ಅಂಡ್ ಕ್ರಾಫ್ಟ್ಸ್ ಮ್ಯೂಸಿಯಂನ್ನು ಸ್ಥಾಪಿಸುವುದು ಅವರಿಂದ ಸಾಧ್ಯವಾಯಿತು. ಇಲ್ಲಿ ರಂಗಭೂಮಿಗೆ ಸಂಬಂಧಿಸಿದ ವೇಷಭೂಷಣ, ಮುಖವಾಡ, ಆಭರಣ, ಆಯುಧ, ವಾದ್ಯವಾದನ, ಪ್ರಸಾಧನ ವಿಧಾನ, ಇತರ ರಂಗಪರಿಕರ

ಎಲ್ಲವೂ ಕಾಣಸಿಗುತ್ತವೆ. ಸ್ವತಃ ವಿವಿಧ ದೇಶಗಳಿಂದ ಅವರು ಸಂಗ್ರಹಿಸಿದ ರಂಗಭೂಮಿಗೆ ಸಂಬಂಧಿಸಿದ ವಸ್ತುಗಳು ಮತ್ತು ಚಿತ್ರಗಳು ಅಲ್ಲಿ ಇವೆ. ಅವರಿಗೆ ದೊರೆತ ಮ್ಯಾಗಸೆಸೆ ಪ್ರಶಸ್ತಿಯ ಹೆಚ್ಚಿನ ಮೊತ್ತವನ್ನು ಈ ವಸ್ತುಸಂಗ್ರಹಾಲಯಕ್ಕಾಗಿ ವಿನಿಯೋಗಿಸಿದ್ದಾರೆ. ಅವರ ಕಾರ್ಯಗಳಲ್ಲಿ ಸಕ್ರಿಯ ಸಹಾಯಕರಾಗಿದ್ದು, ಅಕಸ್ಮಾತ್ ಮೃತ್ಯುವಶರಾದ ಅವರ ಅತ್ಯಂತ ಆಪ್ತವ್ಯಕ್ತಿ ಯು. ಶ್ರೀನಿವಾಸ್ ಮಲ್ಯ ಅವರ ಹೆಸರನ್ನು ಈ ವಸ್ತುಸಂಗ್ರಹಾಲಯಕ್ಕೆ ಇಟ್ಟಿದ್ದಾರೆ.

ಕಮಲಾದೇವಿಯವರು ರಂಗಾಧ್ಯಯನವನ್ನು ಪ್ರಾರಂಭಿಸಿ ಸಂಘಟಿಸುತ್ತಿದ್ದ ಉತ್ಸವ, ವಿಚಾರಸಂಕಿರಣ, ಮತ್ತು ಕಮ್ಮಟಗಳು ಇಂದಿಗೂ ಮುಂದುವರಿಯುತ್ತಿವೆ. ಅವರ ಅರುವತ್ತನೇ ವಯಸ್ಸಿನಲ್ಲಿ ಆಕಾಶವಾಣಿಯವರು ಪ್ರಸಾರ ಮಾಡಿದ 'ನಾನು ಮತ್ತೆ ಇಪ್ಪತ್ತು ವರ್ಷದವಳಾಗಿದ್ದಿದ್ದರೆ..' ಭಾಷಣದಲ್ಲಿ ಅವರ ನಾಟಕ ಮತ್ತು ಅಭಿನಯ ಕಲೆಯ ಪ್ರೀತಿ ಎದ್ದು ಕಾಣುತ್ತದೆ:

"..ರಂಗಭೂಮಿಯೆಂದರೆ ಎಲ್ಲಾ ಕಲೆಗಳ ಸಂಗಮವಾಗಿದೆ! ನಾನು ಮತ್ತೆ ಯುವತಿ ಯಾದರೆ, ನನ್ನಂತಹ ಬಹು ಹವ್ಯಾಸವನ್ನುಳ್ಳ ವ್ಯಕ್ತಿಗೆ ಹೇಳಿ ಮಾಡಿಸಿದ ಯೋಗ್ಯ ಮಾಧ್ಯಮ ಇದಾಗಿರುತ್ತಿತ್ತು. ನಾನು ಅದರಲ್ಲಿಯೇ ತೊಡಗಿಸಿಕೊಂಡು ಇರುತ್ತಿದ್ದೆ!" ಎಂದು ಅವರು ಹೇಳಿದ್ದಾರೆ.

ಕಮಲಾದೇವಿಯವರ ರಂಗಭೂಮಿ ಅಥವಾ ರಂಗಪ್ರೀತಿಯನ್ನು ಸ್ಮರಿಸಿದಾಗ, ಸಿನೆಮಾ ರಂಗದಲ್ಲಿ ಅವರು ಮಾಡಿದ ಕೆಲಸ ನೆನಪಿಗೆ ಬರುತ್ತದೆ. ಅವರು 1931ರಲ್ಲಿ ತಯಾರಾದ ಕನ್ನಡದ ಮೂಕಿ ಚಿತ್ರ ವಸಂತಸೇನೆಯಲ್ಲಿ ಕೆಲಸ ಮಾಡಿದ್ದಾರೆ. ನಂತರ 1940–42ರ ಅವಧಿಯಲ್ಲಿ ತಾನಸೇನ್, ಶಂಕರಪಾರ್ವತಿ, ಧನ್‌ಭಗತ್ – ಈ ಮೂರು ಹಿಂದಿಚಿತ್ರಗಳಲ್ಲಿ ಪಾತ್ರವಹಿಸಿದ್ದಾರೆ. ಅವರ ಸಹಜ ಸೌಂದರ್ಯ, ಭಾವಪೂರ್ಣ ಅಭಿನಯ ಮತ್ತು ಮೋಹಕ ಕಂಠ (ಆ ಕಾಲದಲ್ಲಿ ಹಿನ್ನೆಲೆ ಗಾಯಕಿಯರು ಇರುತ್ತಿರಲಿಲ್ಲ. ಪಾತ್ರಧಾರಿಗಳೇ ಹಾಡುಗಳನ್ನು ಕೂಡಾ ಹೇಳಬೇಕಿತ್ತು) ಸಿನೆಮಾ ಮಾಧ್ಯಮಕ್ಕೆ ಹೇಳಿ ಮಾಡಿಸಿದಂತಿದ್ದವು. ಅವರೇನಾದರೂ ಅಭಿನಯ ಕಲೆಯಲ್ಲಿ ಪೂರ್ತಿ ಮನಸ್ಸನ್ನು ಹರಿಯಗೊಟ್ಟಿದ್ದರೆ ಖ್ಯಾತ ಅಭಿನೇತ್ರಿಯೇ ಆಗಿರುತ್ತಿದ್ದರು. ಆದರೆ ಅವರು ತ್ಯಾಗಭರಿತ ದೇಶಸೇವಾ ಕ್ಷೇತ್ರವನ್ನು ಆಯ್ಕೆ ಮಾಡಿ ಕೊಂಡರು. ಮತ್ತು ಬಹುರೂಪದಲ್ಲಿ ಅಸಂಖ್ಯಾತ ದೇಶವಾಸಿಗಳನ್ನು ತಲುಪಿದರು.

ಅಧ್ಯಾಯ ೧೨

# ಕರ್ನಾಟಕಕ್ಕೆ ದೇಣಿಗೆ

ಇಂಗ್ಲಿಷ್‌ನಲ್ಲಿ 'ದಾನದ ಪ್ರಾರಂಭ ಮನೆಯಲ್ಲಿ' ಎಂಬ ರೂಢಿಮಾತು ಇದೆ. ಕನ್ನಡದಲ್ಲಿ 'ಮನೆ ಗೆದ್ದು ಮಾರು ಗೆಲ್ಲು' ಎಂಬ ಗಾದೆಮಾತು ಇದೆ. ಕಮಲಾದೇವಿಯವರು ಪ್ರಾರಂಭ ದಿಂದಲೇ ರಾಷ್ಟ್ರಮಟ್ಟದಲ್ಲಿ ಕೆಲಸ ಮಾಡುತ್ತಾ ಬಂದವರು; ಅಂತಾರಾಷ್ಟ್ರೀಯ ಮಟ್ಟದಲ್ಲಿ ಪ್ರಸಿದ್ಧಿ ಹೊಂದಿದವರು. ಆದರೆ ಅವರು ತನ್ನ ಮೂಲಬೇರನ್ನು ಎಂದೂ ಮರೆಯಲಿಲ್ಲ! ಬೇರೆಲ್ಲಾ ಪ್ರದೇಶಗಳ ಕುಶಲಕರ್ಮಿಗಳಿಗೆ ಸಿಗುವಂತಹ ಸವಲತ್ತುಗಳು ಕರ್ನಾಟಕದ ಕುಶಲಕರ್ಮಿಗಳಿಗೂ ಸಿಗಲೇಬೇಕಲ್ಲ. ಕರ್ನಾಟಕದ ಅನೇಕ ಕುಶಲಕರ್ಮಿಗಳಿಗೆ ಹಸ್ತಕೌಶಲ್ಯಕ್ಕೆ ದೊರೆಯುವ ಪ್ರಶಸ್ತಿ ದೊರೆತಿದೆ. ಈ ರಾಜ್ಯದ ಕುಶಲಕರ್ಮಿಗಳಲ್ಲಿ ಕಚ್ಚಾಸಾಮಗ್ರಿ ಸಿಗದೆ, ಅವರು ತಯಾರಿಸಿದ ವಸ್ತು ಮಾರಾಟವಾಗದೆ, ಕೆಲಸ ಮಾಡಬಲ್ಲ ಉತ್ಸಾಹಿಗಳಿಗೆ ನೆರವು ದೊರೆಯದೆ, ತರಬೇತಿ ಸೌಕರ್ಯವಿಲ್ಲದಂತಹ ಸಂದರ್ಭಗಳು (ಕಮಲಾದೇವಿ ಅಧಿಕಾರದಲ್ಲಿ ಇರುವಾಗ ಅಥವಾ ಅವರು ಸಾಯುವ ಮೊದಲು) ಬಹಳ ಕಡಿಮೆ ಎಂದು ಹೇಳಬಹುದು! ಸ್ವಾತಂತ್ರ್ಯ ದೊರೆತ ಮೊದಲ ಮೂರು ದಶಕಗಳಲ್ಲಿ ಬಿದರಿ ಕಲಾಕಾರರು, ಗುಡಿಕಾರರು, ಕಲ್ಲುಕೊರೆಯುವ ಶಿಲ್ಪಿಗಳು, ಗೊಂಬೆ ತಯಾರಿಸುವವರು, ಮೊಳಕಾಲ್ಮೂರು, ಇಳಕಲ್ ರೇಷ್ಮೆ ಅಥವಾ ಹತ್ತಿ ನೇಕಾರರು, ಸೂತ್ರದ ಬೊಂಬೆಯಾಟ ಆಡಿಸುವವರು ಸುಸ್ಥಿತಿಯಲ್ಲಿ ಇದ್ದರು. ಅವರಿಗೆ ಆರ್ಥಿಕ ಸಹಾಯ ಮತ್ತು ಪ್ರಶಸ್ತಿ ದೊರೆಯಲು ಕಮಲಾದೇವಿ ಪ್ರಯತ್ನ ನಡೆಸಿದ್ದರು. ಕರಕುಶಲ ವಸ್ತುಗಳ ಪ್ರದರ್ಶನ ಮತ್ತು ಮಾರಾಟವನ್ನು ಪದೇಪದೇ ಆಯೋಜಿಸಿ ಹಸ್ತಕಲೆಯ ಕುರಿತು ಜನಜಾಗೃತಿಯನ್ನು ಮೂಡಿಸಿದ ಅಂಶ ಅವರ ಸುಸ್ಥಿತಿಗೆ ಮುಖ್ಯ ಕಾರಣ.

ಅವರು ಭಾಷೆ, ಪ್ರದೇಶ, ಜಾತಿ-ಪ್ರಾಂತ, ಯಾವುದನ್ನೂ ಗಮನಕ್ಕೆ ತಂದುಕೊಳ್ಳದೆ ಎಲ್ಲಾ ಕುಶಲಕರ್ಮಿಗಳಿಗೆ ಪ್ರೋತ್ಸಾಹ ನೀಡುತ್ತಿದ್ದರು. ಆದಿವಾಸಿಗಳಿಂದ ಹಿಡಿದು ನಗರವಾಸಿ ಗಳವರೆಗೆ ಈ ಎಲ್ಲಾ ಜನರಲ್ಲಿ ಅವರು ಪ್ರತಿಭೆಯನ್ನು ಗುರುತಿಸಿದ್ದುಂಟು. ಪ್ರತಿಭಾವಂತರನ್ನು ಬೆಳಕಿಗೆ ತಂದದ್ದು ಇದೆ. ನಮಗೆ ಹತ್ತಿರದ ಕೆಲವು ಕಲಾಕಾರರ ನಿದರ್ಶನಗಳನ್ನು ನೋಡಿದಾಗ ಈ ಸತ್ಯ ಅರಿವಿಗೆ ಬರುತ್ತದೆ.

ಜಗತ್ತಿನ ಬೇರೆ ಬೇರೆ ರಾಷ್ಟ್ರಗಳಲ್ಲಿ ಸೂತ್ರದ ಬೊಂಬೆಯಾಟ ಜನಪ್ರಿಯವಾಗಿದೆ. ಭಾರತವೂ ಇದಕ್ಕೆ ಹೊರತಾಗಿಲ್ಲ. ನಮ್ಮ ಕರ್ನಾಟಕದಲ್ಲಿ ತೊಗಲು ಗೊಂಬೆ, ಮರದ ಗೊಂಬೆ, ಮಣ್ಣಿನ ಗೊಂಬೆಗಳನ್ನು ಕುಣಿಸಿ ಜನರಿಗೆ ಮನರಂಜನೆ ನೀಡುವ ಪದ್ಧತಿ ಬಹಳ ಹಿಂದಿನಿಂದ ನಡೆದುಬಂದಿದೆ. ಉಪ್ಪಿನಕುದ್ರುವಿನ ಕೊಗ್ಗ ಕಾಮತ್ ಕುಟುಂಬವು ಯಕ್ಷಗಾನ ಗೊಂಬೆಯಾಟವನ್ನು ನಡೆಸಿ ಅದ್ವಿತೀಯವೆಂದು ಹೆಸರು ಗಳಿಸಿತ್ತು. ಸುಮಾರು ಐವತ್ತು ವರ್ಷಗಳ ಹಿಂದೆ, ಯಾವುದೇ ಬೆಂಬಲ, ರಾಜಾಶ್ರಯ, ಸಂಘಸಂಸ್ಥೆಗಳ ಸಹಾಯಗಳಿಲ್ಲದೆ ಸಾರ್ವಜನಿಕರ ಪ್ರೋತ್ಸಾಹವೂ ಸಿಗದೆ ಅವರಿಗೆ ಕೆಟ್ಟ ದಿನಗಳು ಎದುರಾದವು. ಅವರು ಹತಾಶೆಯಿಂದ ಗೊಂಬೆಯಾಟವನ್ನು ನಿಲ್ಲಿಸಿಬಿಡುವ ನಿರ್ಧಾರ ಕೈಗೊಂಡರು. ಆಟದ ಮಂಡಳಿಯನ್ನು ಕೊನೆಗೊಳಿಸಿದರು. ಊರು ಬಿಟ್ಟು ಮುಂಬೈ ಸೇರಲು ನಿಶ್ಚಯಿಸಿದಾಗ ಅರ್ಧದಾರಿಯಲ್ಲಿ ಕಮಲಾದೇವಿ ಅವರನ್ನು ಭೇಟಿಯಾದರು. ಅಲ್ಲಿಯೇ ಅವರಲ್ಲಿ ಧೈರ್ಯ

ತುಂಬಿ, ಆರ್ಥಿಕ ಸಹಾಯದ ಭರವಸೆಯನ್ನು ನೀಡಿದರು. ಮರಳಿ ಊರಿಗೆ ಬಂದು ಆಟದ ಮಂಡಳಿಯ ವ್ಯವಸ್ಥೆಯಾಯಿತು. ಗೊಂಬೆ ಯಕ್ಷಗಾನ ಆಟ ಮತ್ತೆ ವಿರಾಜಮಾನವಾಯಿತು. "ಪ್ರದರ್ಶನ ಕಲಾ ಪ್ರೋತ್ಸಾಹ"ದ ಯೋಜನೆಯಲ್ಲಿ ದೇಶದಾದ್ಯಂತ ಕಾರ್ಯಕ್ರಮಗಳು ನಡೆದವು. ಯಕ್ಷಗಾನ ಆಧಾರಿತ ಈ ಏಕಮಾತ್ರ ಗೊಂಬೆಯಾಟ ಪುನಶ್ಚೇತನಗೊಳ್ಳಲು ಕಮಲಾದೇವಿ ಯವರೇ ಕಾರಣ! ಎಂದು ಕೊಗ್ಗಕಾಮತರು ದೂರದರ್ಶನದಲ್ಲಿ ತಪ್ಪದೆ ಹೇಳುತ್ತಿದ್ದರು. ಅವರ ನಂತರ ಅವರ ಸುಪುತ್ರ ಭಾಸ್ಕರ್ ಕಾಮತರು ಈ ಸಂಪ್ರದಾಯವನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಅವರ ಈ ಮೇಳವು (ತಂಡ) ಫೆಸ್ಟಿವಲ್ ಆಫ್ ಇಂಡಿಯಾ ಕಾರ್ಯಕ್ರಮದಲ್ಲಿ ದೇಶವಿದೇಶಗಳಲ್ಲಿ ಪ್ರದರ್ಶನ ನೀಡಿದೆ. ತಲ್ಲೂರಿನಲ್ಲಿ ಯಕ್ಷಗಾನ ಗೊಂಬೆಯಾಟದ ಶಾಲೆಯಾಗಿದೆ. ಸರಿಯಾದ ಸಮಯಕ್ಕೆ ಕಮಲಾದೇವಿಯ ನೆರವು ದೊರೆಯದೇ ಇದ್ದಲ್ಲಿ ಈ ಅಪೂರ್ವ ಕಲೆ ನಾಮಶೇಷವಾಗಿ ಹೋಗಿಬಿಡುತ್ತಿತ್ತು!

ಬೆಂಗಳೂರು ಸಮೀಪದ ದೇವನಹಳ್ಳಿಯವರಾದ ಹನುಮಂತಾಚಾರ್ ಪ್ರಸಿದ್ಧ ಶಿಲ್ಪಿ. ಅವರ ಕುಟುಂಬದವರು ಶತಮಾನದಿಂದ ನಡೆಸಿಕೊಂಡು ಬಂದಿರುವಂತಹ ಶಿಲ್ಪಕಾರ್ಯವು ಆರ್ಥಿಕ ಸಹಾಯದ ಕೊರತೆಯಿಂದಾಗಿ ಮುಚ್ಚಿಬಿಡುವ ಸ್ಥಿತಿಯನ್ನು ತಲುಪಿತ್ತು. ಅವರಿಗೆ ಅಗತ್ಯದ ನೆರವನ್ನು ಕರ್ನಾಟಕದ ಕ್ರಾಫ್ಟ್ ಕೌನ್ಸಿಲ್‌ನಿಂದ ದೊರೆಯುವಂತೆ ಮಾಡಲಾಯಿತು. ಈ ಪ್ರಮುಖ ಶಿಲ್ಪಿಯ ಮೂಲಕ ಯುವವಯಸ್ಸಿನ ಉತ್ಸಾಹಿಗಳಿಗೆ ಅವರ ಮನೆಯಲ್ಲಿಯೇ ತರಬೇತಿ ದೊರೆಯುವಂತೆ ವ್ಯವಸ್ಥೆಯಾಗಿ ಅದಕ್ಕೆ ಬೇಕಾದ ಹಣವೂ ದೊರೆಯಿತು. ಅವರ ಪತ್ನಿ ಸರೋಜಮ್ಮನ ಹಸ್ತಕೌಶಲ್ಯವನ್ನು ಗುರುತಿಸಿ, ಅವರ ಮೂಲಕ ಶಾಲೆ ಮತ್ತು ತರಬೇತಿ ಕಾರ್ಯವನ್ನು ಮುಂದುವರಿಸಲಾಯಿತು. ಇಷ್ಟೇ ಅಲ್ಲ! ಅಲ್ಲಿ ಮುಸ್ಲಿಂ ಮಹಿಳೆಯರು ತರಬೇತಿ ಪಡೆದು ಬೇರೆಬೇರೆ ಮೂರ್ತಿಗಳನ್ನು ಮಾಡುತ್ತಿದ್ದಾರೆ ಎನ್ನುವುದು ರಾಜ್ಯದ ಜನರಿಗೆ ಅಭಿಮಾನದ ವಿಷಯವಾಗಿದೆ!

ದಿವಂಗತ ರಂಜಾಳ್ ಗೋಪಾಲಕೃಷ್ಣ ಶೆಣೈ ಅತ್ಯಂತ ಪ್ರತಿಭಾವಂತ ಶಿಲ್ಪಿ. ಇವರು ಪ್ರಾರಂಭಿಕ ವರ್ಷಗಳಲ್ಲಿ ಬಹಳ ಕಷ್ಟಗಳನ್ನು ಅನುಭವಿಸಿದ್ದರು. ರಾಷ್ಟ್ರಪ್ರಶಸ್ತಿ ನೀಡಲು ಪ್ರಾರಂಭಿಸಿದ ವರ್ಷವೇ ಅವರ ಶ್ರೇಷ್ಠ ಕೃತಿಯನ್ನು ಸ್ಪರ್ಧೆಗೆ ಕಳುಹಿಸಲಾಗಿತ್ತು. ಆದರೆ ಶಿಲ್ಪಕೃತಿಗೆ ಹಾನಿಯುಂಟಾಗಿ ಅವರಿಗೆ ಪ್ರಶಸ್ತಿ ಕೈತಪ್ಪಿಹೋಯಿತು. ಭಾರೀ ನಷ್ಟ ಕೂಡಾ ಆಯಿತು. ಈ ಅನ್ಯಾಯವನ್ನು ಕಮಲಾದೇವಿಯವರು ತಕ್ಷಣ ಸರಿಪಡಿಸಿಕೊಂಡರು. ಈ ಘಟನೆಯ ಬಳಿಕ ಗಾತ್ರದಲ್ಲಿ ದೊಡ್ಡದಾಗಿರುವ ಶಿಲ್ಪ ಕಲಾಕೃತಿಯನ್ನು ಹೊರಗೆ ಕಳುಹಿಸುವ ಹಾಗಿಲ್ಲ, ನಿರ್ಣಾಯಕರೇ ಆಯಾಯ ಊರಿಗೆ ಹೋಗಿ ಕೃತಿ ಪರೀಕ್ಷೆ ಮಾಡುವುದೆಂಬ ನಿಯಮವನ್ನು ರೂಪಿಸಲಾಯಿತು.

"ಜಗತ್ತಿಗೆ ಅವರು ಕಮಲಾದೇವಿ ಆಗಿರಬಹುದು! ನಮಗೆ ಅವರು ಸಾಕ್ಷಾತ್ ಕಲಾದೇವಿ!' ಎಂದು ಹೇಳಿದವರು ಗೊಂಬೆಯಾಟದ ಹೊಂಬಯ್ಯ. ಅವರು ದೆಹಲಿಗೆ ಹೋದಾಗ ಕಮಲಾದೇವಿಯವರನ್ನು ಭೇಟಿಯಾಗಲು ಹೋಗಿದ್ದರು. ಮನೆಗೆ ಬಂದ ಅವರನ್ನು ನೆಲದ ಮೇಲೆ ಕುಳಿತುಕೊಳ್ಳಲು ಕಮಲಾದೇವಿ ಬಿಡಲೇ ಇಲ್ಲ. ತನ್ನ ಜೊತೆ ಸೋಫಾದಲ್ಲಿ ಕೂಡಿಸಿಕೊಂಡರು. ಬಾದಾಮಿ ಹಾಲು ತರಿಸಿಕೊಟ್ಟರು. ಕನ್ನಡದಲ್ಲಿ ಮಾತನಾಡಿ ಸುಖದುಃಖ ವಿಚಾರಿಸಿಕೊಂಡರು. ಬೇರೆಬೇರೆ ದೇಶಗಳ ಗೊಂಬೆಯಾಟಗಳ ಮಾಹಿತಿ ನೀಡಿದರು. ಹೊರಡುವಾಗ ಕಾಲಿಗೆ ನಮಸ್ಕಾರ ಮಾಡಲು ಕೂಡಾ ಬಿಡಲಿಲ್ಲ. "..ನಾವು ಅವರ ಮನೆಗೆ ನಡೆದು ಹೋಗಿದ್ದೆವು. ಹಿಂದೆ ಬರುವಾಗ ನಮಗಾಗಿ ಅವರ

ವಾಹನ ಸಿದ್ಧವಾಗಿ ನಿಂತಿತ್ತು! ಒಂದು ಲಕೋಟೆಯನ್ನು ಅವರು ನಮ್ಮ ಕೈಗೆ ನೀಡಿದರು. ನಾವು ಇಳಿದುಕೊಂಡಿದ್ದ ಕಡೆಗೆ ಬಂದ ನಂತರ ಲಕೋಟೆ ತೆರೆದು ನೋಡಿದರೆ ನೂರರ ಹತ್ತು ನೋಟುಗಳು! ನನ್ನಂತಹ ಬಡವನಿಗೆ ಅದು ದೊಡ್ಡ ನಿಧಿ. ತಾಯಿ ಅವರು, ನಮ್ಮ ಧಣಿ!" ಎಂಬ ಉದ್ಗಾರ ಹೊಂಬಯ್ಯನ ಬಾಯಿಂದ ಹೊರಟಿತ್ತು.

ಈ ದೃಶ್ಯವನ್ನು ಸ್ವತಃ ಅನುಭವಿಸಿದ ಅನೇಕ ಕಲಾಕಾರರಿದ್ದಾರೆ. ಬಹಳ ಸಂದರ್ಭಗಳಲ್ಲಿ ಕಮಲಾದೇವಿಯವರು ಬಡವರಿಗೆ ತಮ್ಮ ಕೈಯಿಂದಲೇ ಹಣವನ್ನು ನೀಡಿದ್ದಾರೆ. ಪ್ರೀತಿ-ವಿಶ್ವಾಸಕ್ಕೆ ಪ್ರತಿಯಾಗಿ ಸ್ಥಾನಮಾನ ಮರೆತು ಅವರೊಡನೆ ಬೆರೆತಿದ್ದಾರೆ. ಕರೆದವರ ಮನೆಯಲ್ಲಿ ಊಟ ಉಪಹಾರ ಸೇವಿಸಿದ್ದಾರೆ.

ಅವರು ಕೇಂದ್ರ ಸಂಗೀತ ನಾಟಕ ಅಕಾಡೆಮಿಯ ಅಧ್ಯಕ್ಷರಾಗಿದ್ದಾಗ ರಾಷ್ಟ್ರಮಟ್ಟದಲ್ಲಿ ಸೂತ್ರದ ಬೊಂಬೆಯಾಟದ ಸಮ್ಮೇಳನವನ್ನು ಬೆಂಗಳೂರಿನಲ್ಲಿ ಆಯೋಜಿಸಲಾಗಿತ್ತು. ಈ ಸಮ್ಮೇಳನದಲ್ಲಿ ಒರಿಸ್ಸಾ, ಆಂಧ್ರ, ತಮಿಳುನಾಡು, ಕೇರಳ ಮತ್ತು ಕರ್ನಾಟಕದ ಹನ್ನೆರಡು ತಂಡಗಳು ಭಾಗವಹಿಸಿದ್ದವು. ಈ ಕಲೆಯ ತಜ್ಞರು ಮತ್ತು ವಿಮರ್ಶಕರು ಫಿಲಿಪೈನ್ಸ್, ಟ್ರಿನಿಡಾಡ್, ಇಂಡೋನೇಶಿಯಾ ದೇಶಗಳಿಂದ ಆಮಂತ್ರಿತರಾಗಿ ಬಂದಿದ್ದರು. ಈ ಮೂರು ದಿನಗಳ ವೆಚ್ಚವನ್ನು ಕರ್ನಾಟಕ ಸರಕಾರ ಭರಿಸುವ ವ್ಯವಸ್ಥೆಯನ್ನು ಕಮಲಾದೇವಿ ಮಾಡಿದ್ದರು. ಅವರು ಮೂರು ದಿನ ಮೊದಲೇ ಬೆಂಗಳೂರಿಗೆ ಆಗಮಿಸಿದರು. ಕಲಾಕಾರರೊಂದಿಗೆ ಬೆರೆತು ಅವರೊಂದಿಗೆ ಒಬ್ಬರಾಗಿ ಇರತೊಡಗಿದರು. ಕಲಾಮೇಳ ಮುಗಿದ ಬಳಿಕ ಖರ್ಚು ಕಳೆದು ಇಪ್ಪತ್ತೆರಡು ಸಾವಿರ ರೂಪಾಯಿ ಉಳಿಯಿತು. ಅವರು ಆ ಹಣವನ್ನು ಹಿಂತಿರುಗಿಸುವುದು ಬೇಡವೆಂದು ನಿರ್ಧರಿಸಿ ಅದರಿಂದ ಸೀರೆ ಮತ್ತು ಪಂಚೆಗಳನ್ನು ಖರೀದಿಸಿ ಅಲ್ಲಿ ಸೇರಿದ ಎಲ್ಲಾ ಕಲಾಕಾರರಿಗೆ ಹಂಚಿದರು. ಅನಾಯಾಸವಾಗಿ ದೊರೆತ ಈ ಉಡುಗೊರೆಯಿಂದ ಆ ಬಡಜನರ ಸಂತೋಷಕ್ಕೆ ಪಾರವೇ ಇರಲಿಲ್ಲ. ಕಮಲಾದೇವಿ ಬೇಡಬೇಡವೆಂದು ಹೇಳಿದರೂ ಅವರ ಕಾಲಿಗೆ ನಮಸ್ಕರಿಸಿದ ಈ ಕಲಾಕಾರರನ್ನು ನೋಡಿ ಅವರ ಕಣ್ಣು ತುಂಬಿಬಂದದ್ದನ್ನು ಬಹಳ ಮಂದಿ ವೀಕ್ಷಿಸಿದರು. ನೋಡಲು ಕಠಿಣವೆನಿಸುವ ಅವರ ಚಹರೆಯ ಹಿಂದೆ ಇದ್ದದ್ದು ತಾಯಿಯ ಮೃದು ಮನಸ್ಸಾಗಿತ್ತು.

ಅವರು ಪ್ರೋತ್ಸಾಹ ನೀಡಿ ಮುಂದೆ ತಂದ ಮಹಿಳೆಯರು ಅನೇಕ ಮಂದಿ ಇದ್ದಾರೆ. ಕಲೆ, ಬರೆವಣಿಗೆ, ಸಂಘಟನೆಗಳಲ್ಲಿ ಮುಂದೆ ಬಂದವರು ಅವಕಾಶ ದೊರೆತಾಗ ಅವರ ಋಣವನ್ನು ಸ್ಮರಿಸಿದ್ದು ಇದೆ. ಇವರಲ್ಲಿ ಕಮಲಾ ಡೊಂಗರಕೇರಿ ಒಬ್ಬರು(1909-1992). ಇವರಿಂದಾಗಿಯೇ ಉತ್ತರ ಕರ್ನಾಟಕದ ಗೃಹಿಣಿಯರಲ್ಲಿ ಮಾತ್ರ ಪ್ರಚಲಿತವಿದ್ದ ಕಸೂತಿ ಹಸ್ತಕಲೆಯ ಪ್ರಕಾರ ಬೆಳಕಿಗೆ ಬಂತು. ಇದಕ್ಕೆ ಕಾರಣರಾದವರು ಕಮಲಾದೇವಿ. ಇಂದು ಸೀರೆ, ಕುರ್ತಾ, ಮೇಲಂಗಿ, ಕಮೀಝ್, ದುಪ್ಪಟ್ಟಾಗಳಲ್ಲಿ ಕಾಣಿಸಿಕೊಳ್ಳುವ ವಿನ್ಯಾಸಭರಿತ ಧಾರವಾಡ ಕಸೂತಿ ಬಹಳ ಜನಪ್ರಿಯವಾಗಿದೆ. ಬೆಂಗಳೂರಿನಿಂದ ಹಿಡಿದು ಕರ್ನಾಟಕದ ಬಹಳಷ್ಟು ಊರುಗಳಲ್ಲಿ ಈ ಕಸೂತಿ ಸೀರೆಗಳನ್ನು ಮಾರುವ ಮಳಿಗೆಗಳು ಇವೆ.

ಕಮಲಾ ಡೊಂಗರಕೇರಿ ಕಲಾತಜ್ಞೆ ಮತ್ತು ಸಮಾಜಸೇವಕಿಯಾಗಿದ್ದವರು. ಅವರು ತಮ್ಮ ಒಂಭತ್ತನೇ ವಯಸ್ಸಿನಲ್ಲಿ ವಿವಾಹವಾಗಿ, ಸ್ವ-ಶಿಕ್ಷಣದಿಂದ ಇಂಗ್ಲಿಷ್ ಮತ್ತು ಇತರ ವಿಷಯಗಳಲ್ಲಿ ಪರಿಣತಿ ಪಡೆದರು. ಅವರ ಪತಿ ಪ್ರೊಫೆಸರ್ ಸುಂದರರಾವ್ ಎನ್. ಡೊಂಗರಕೇರಿ, ಮುಂಬೈ ವಿಶ್ವವಿದ್ಯಾಲಯದ ಕುಲಸಚಿವ, ನಿರ್ದೇಶಕರಾಗಿದ್ದು, ಔರಂಗಾಬಾದ್ ವಿಶ್ವವಿದ್ಯಾಲಯದ ಕುಲಪತಿಯಾಗಿ ನಿವೃತ್ತರಾದವರು. ಅವರೊಂದಿಗೆ

ಕಮಲಾ ಡೊಂಗರಕೇರಿಯವರು ಬಹಳ ದೇಶಗಳನ್ನು ಸುತ್ತಿಬಂದಿದ್ದರು. ಕಮಲಾದೇವಿಯ ಪರಿಚಯ ಕಮಲಾ ಡೊಂಗರಕೇರಿಗೆ ಮೊದಲಿನಿಂದಲೂ ಇತ್ತು. 1944ರಲ್ಲಿ ಜೈಲಿನಿಂದ ಬಿಡುಗಡೆ ಹೊಂದಿ ಹೊರಗೆ ಬಂದ ನಂತರ ಅಖಿಲಭಾರತ ಮಹಿಳಾ ಪರಿಷತ್ತಿನ ಸಮ್ಮೇಳನಾಧ್ಯಕ್ಷರಾಗಿ ಕಮಲಾದೇವಿ ಆಯ್ಕೆಗೊಂಡಿದ್ದರು. ಕಮಲಾ ಡೊಂಗರಕೇರಿಗೆ ಪರಿಷತ್ತಿನ ಲಘುವರದಿಯ (ಬುಲೆಟಿನ್‌ನ) ಸಂಪಾದನೆ ಮತ್ತು ಸಮ್ಮೇಳನದ ಸಾಂಸ್ಕೃತಿಕ ಮತ್ತು ಮನೋರಂಜನಾ ಕಾರ್ಯಕ್ರಮ ವಿಭಾಗಗಳ ಜವಾಬ್ದಾರಿಯನ್ನು ವಹಿಸಿಕೊಡಲಾಗಿತ್ತು.

ಕಲೆಯಲ್ಲಿರುವ ಸೌಂದರ್ಯ ಕಮಲಾ ಡೊಂಗರಕೇರಿಗೆ ತುಂಬಾ ಆಪ್ತವಾದುದು. ಅವರು ಧಾರವಾಡದಲ್ಲಿ ಬೆಳೆದವರಾಗಿದ್ದರಿಂದ ಆ ಪ್ರದೇಶದ ಕಸೂತಿ ಕಲೆಯಿಂದ ಆಕರ್ಷಿತರಾಗಿದ್ದರು. ಅದರ ಅನೇಕ ಪ್ರಕಾರಗಳನ್ನು ಒಂದೆಡೆ ಸೇರಿಸಿದ್ದರು. ಪ್ರಶ್ನಾವಳಿಗಳನ್ನು ಕಳುಹಿಸಿ ಬೇರೆ ಬೇರೆ ಊರುಗಳಿಂದ ಮಾಹಿತಿ ಸಂಗ್ರಹಿಸಿದ್ದರು. ಇದನ್ನೆಲ್ಲಾ ಕಮಲಾದೇವಿಗೆ ತೋರಿಸಿ ಕಸೂತಿ ಕುರಿತು ವಿವರಣಾತ್ಮಕ ಗ್ರಂಥವನ್ನು (ಮೊನೋಗ್ರಾಫ್) ಹೊರತಂದರೆ ಹೇಗೆ ಎಂದು ವಿಚಾರಿಸಿದರು. ಕಮಲಾದೇವಿಗೆ ಇದು ಒಪ್ಪಿಗೆಯಾಯಿತು. ಕಮಲಾ ಡೊಂಗರಕೇರಿಯವರು ತಕ್ಷಣ ಈ ಬರಹವನ್ನು ಬೆಳಕಿಗೆ ತರಲು ಪ್ರಯತ್ನಿಸಿದರು. ನಾಲ್ಕು ಜನರಲ್ಲಿ ವಿಚಾರಿಸಿದಾಗ, ಒಬ್ಬ ಮಹಿಳೆ ಇದಕ್ಕೆ ಒಪ್ಪಿಕೊಂಡರು. ಆದರೆ ಅವರ ನಿಲುವು ಒಂದು ಸಾಂಸ್ಕೃತಿಕ ವಿಚಾರವನ್ನು, ಕರಕುಶಲ ಕಲೆಯನ್ನು ಬೆಳಕಿಗೆ ತರುವುದು ಆಗಿರಲಿಲ್ಲ. ಬದಲಾಗಿ ವ್ಯಾಪಾರಿ ಮಟ್ಟದಲ್ಲಿ ಈ ಕಲಾಪ್ರಕಾರವನ್ನು ಬೆಳೆಸುವುದು ಮತ್ತು ಹಣ ಸಂಪಾದಿಸುವುದರ ಕಡೆಗೆ ಇತ್ತು! (ಈಗ ಅದೇ ನಡೆಯುತ್ತಿದೆ.) ಕಮಲಾ ಡೊಂಗರಕೇರಿಗೆ ನಿರಾಶೆಯಾಯಿತು.

ಕಮಲಾದೇವಿಯವರನ್ನು ಮತ್ತೆ ಭೇಟಿಯಾಗಿ ತನ್ನ ಪ್ರಯತ್ನ ನಿಷ್ಫಲವಾದುದನ್ನು ಅವರಲ್ಲಿ ಹೇಳಿದರು. ಆಗ ಕಮಲಾದೇವಿ, "ನೀನೇ ಯಾಕೆ ಬರೆಯಬಾರದು ? ಬೇರೆಯವರ ತಲೆಯಲ್ಲಿ ನಿನ್ನ ವಿಚಾರಗಳನ್ನು ತುಂಬಿಸಿ, ಅವರಿಗೆ ಬೇಕಾಗಿರುವ ಮಾಹಿತಿಯನ್ನು ನೀಡಿ ಬರೆವಣಿಗೆ ನಡೆಸುವುದು ಸಾಧ್ಯವಾಗದು! ಸ್ವತಃ ನೀನೇ ಬರೆದರೆ ಏನು ಹೇಳಬೇಕಾಗಿದೆ ಎಂಬುದು ಸ್ಪಷ್ಟವಾಗುತ್ತದೆ. ಯಾವುದಕ್ಕೆ ಹೆಚ್ಚು ಪ್ರಾಮುಖ್ಯತೆ ನೀಡಬೇಕು ಎಂಬುದು ಕೂಡಾ ತಿಳಿಯುತ್ತದೆ" ಎಂದು ಹೇಳಿದರು.

ಕಮಲಾದೇವಿಯ ಮಾತು ಮತ್ತು ವಿಚಾರ ಸ್ಪಷ್ಟವಾಗಿರುತ್ತಿದ್ದವು. ಅವರಲ್ಲಿ ತರ್ಕ, ವಾದಗಳಿಗೆ ಸಮಯವಿರುತ್ತಿರಲಿಲ್ಲ. ಇದಕ್ಕಿಂತ ಮೊದಲು ಕೂಡಾ ಅವರು ಯೋಗ್ಯ ಸಲಹೆ, ಬೆಂಬಲವನ್ನು ನೀಡಿದ್ದರಿಂದ ಕಮಲಾ ಡೊಂಗರಕೇರಿ ಬರೆವಣಿಗೆ ಕಾರ್ಯದಲ್ಲಿ ಮಗ್ನರಾದರು. ರೊಮಾನ್ಸ್ ಆಫ್ ಇಂಡಿಯನ್ ಎಂಬ್ರಾಯ್‌ಡರಿ ಗ್ರಂಥ ರೂಪುಗೊಂಡಿತು. ನಂತರ ಅವರು ಹಿತ್ತಾಳೆ ಕೆಲಸದ ಕಲಾಕೃತಿಯ ಕುರಿತು ಗ್ರಂಥ ರಚಿಸಿದರು. ಆಮೇಲೆ ಆಟಿಕೆಗಳ ಕುರಿತು ಎ ಜರ್ನಿ ತ್ರೂ ಟಾಯ್‌ಲ್ಯಾಂಡ್ ಬಂತು. ಈ ಗ್ರಂಥಕ್ಕೆ ರಾಷ್ಟ್ರಪತಿ ರಾಧಾಕೃಷ್ಣನ್ ಅವರು ಪ್ರಸ್ತಾವನೆಯನ್ನು ಬರೆದರು. ಅದಕ್ಕೆ ರಾಷ್ಟ್ರಪತಿ ಪ್ರಶಸ್ತಿ ಕೂಡಾ ಬಂತು. ನಂತರ ಕಮಲಾದೇವಿಯವರೇ ಮುಂದೆ ತಂದಂತಹ ಅಖಿಲಭಾರತ ಮಹಿಳಾ ಪರಿಷತ್ತಿನ ವತಿಯಿಂದ, ಅತಿ ಸುಂದರ ಪೋಷಾಕು ಎಂದು ಜಗತ್ತೇ ಒಪ್ಪಿಕೊಂಡ ಸೀರೆಯ ಕುರಿತು ದಿ ಇಂಡಿಯನ್ ಸಾರಿ ಪುಸ್ತಕ ಕೂಡಾ ಬೆಳಕಿಗೆ ಬಂತು. ಈ ಗ್ರಂಥಗಳೆಲ್ಲವೂ ಬೆಳಕಿಗೆ ಬರಲು ಮೂಲತಃ ಕಮಲಾದೇವಿಯವರ ಬೆಂಬಲವೇ ಕಾರಣ! ಎಂದು ಕಮಲಾ ಡೊಂಗರಕೇರಿಯವರು ತಮ್ಮ ಆತ್ಮಕಥಾನಕ ಆನ್ ದಿ ವಿಂಗ್ಸ್ ಆಫ್ ಟೈಮ್‌ನಲ್ಲಿ

ಹೇಳಿದ್ದಾರೆ. ವ್ಯಕ್ತಿಯಲ್ಲಿ ಯಾವ ರೀತಿಯ ಪ್ರತಿಭೆ ಇದೆ ಎನ್ನುವುದನ್ನು ತಟ್ಟನೆ ಗುರುತಿಸಿ ಬೆಳಕಿಗೆ ತರುವ ಕಾರ್ಯ ನಡೆಸಿದವರು ಕಮಲಾದೇವಿ.

ಕರಕುಶಲ ಮಂಡಳಿಯಿಂದ ಹೊರಗೆ ಬಂದ ನಂತರವೂ ವೈಯಕ್ತಿಕ ಸಹಾಯ ನೀಡುವುದನ್ನು ಅವರು ನಿಲ್ಲಿಸಿರಲಿಲ್ಲ. ಅದೇ ರೀತಿ ತಮ್ಮ ತಿರುಗಾಟವನ್ನು ಕೂಡಾ ಅವರು ಜಾರಿಯಲ್ಲಿಟ್ಟಿದ್ದರು. 1974ರ ಸುಮಾರಿಗೆ ಅವರು ಕನ್ನಡ ಲೇಖಕ ಮತ್ತು 'ತರಂಗ' ವಾರಪತ್ರಿಕೆಯ ಮಾಜಿ ಸಂಪಾದಕರಾದ ಸಂತೋಷಕುಮಾರ್ ಗುಲ್ವಾಡಿ ಅವರೊಂದಿಗೆ ಕರಾವಳಿ ಪ್ರದೇಶದಲ್ಲಿ ಸಂತೆಯನ್ನು ನಡೆಸುತ್ತಾ ಬಂದಿರುವ ಸಣ್ಣಸಣ್ಣ ಊರುಗಳಿಗೆ ತಿರುಗಾಡುವ ಉಮೇದನ್ನು ತೋರಿಸಿದ್ದರು. ಆಗ ತನ್ನ ಬಾಲ್ಯದ ದಿನಗಳನ್ನು ಅವರು ನೆನಪಿಸಿಕೊಂಡರಂತೆ. ಉಡುಪಿಯಲ್ಲಿ ಬುಧವಾರ, ಕುಂದಾಪುರದಲ್ಲಿ ಶನಿವಾರ, ಶಿರಾಲಿ-ಚಿತ್ರಾಪುರದಲ್ಲಿ ಭಾನುವಾರ ಸೇರುವ ಸಂತೆಗಳಿಗೆ ಅವರು ಭೇಟಿ ನೀಡಿದ್ದರು. ಅಲ್ಲಿ ಗ್ರಾಮೀಣ ಕಲಾಪ್ರಕಾರಗಳಿಗೆ ಬಂದಂತಹ ದುರ್ಗತಿಯನ್ನು ಕಣ್ಣಾರೆ ಕಂಡು ಅವರು ಕಣ್ಣೀರು ಹರಿಸಿದ್ದರು ಎಂದು ಗುಲ್ವಾಡಿ ಹೇಳಿದ್ದಾರೆ.

ಚಿತ್ರಾಪುರ ಮಠದ ಉಗ್ರಾಣದಲ್ಲಿ ಹಳೆಯ ಕಂಚು, ಹಿತ್ತಾಳೆ ಮತ್ತು ತಾಮ್ರದ ಕಲಾತ್ಮಕ ವಸ್ತುಗಳು ಮತ್ತು ಭಗ್ನಗೊಂಡ ಮೂರ್ತಿಗಳು ಇದ್ದವು. ಮಠದಲ್ಲಿ ವಸ್ತು ಪ್ರದರ್ಶನಾಲಯ ವನ್ನು ಸ್ಥಾಪಿಸುವಂತೆ ಕಮಲಾದೇವಿ ಮಠಾಧಿಕಾರಿಗೆ ತಿಳಿಸಿದ್ದರು. ಅವರ ಮಾತಿನಂತೆ ಸಣ್ಣದಾದರೂ ಸುಂದರವಾದ ಮತ್ತು ಪ್ರೇಕ್ಷಣೀಯ ಮ್ಯೂಸಿಯಂ ಅಲ್ಲಿ ರೂಪುಗೊಂಡಿದೆ.

ಐವತ್ತರ ದಶಕದಲ್ಲಿ ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ಸಂತೆಯಲ್ಲಿ ಮಣ್ಣಿನ ವಿವಿಧ ವಿನ್ಯಾಸದ ಮಡಕೆಗಳು, ಕುಡಿಯುವ ನೀರಿನ ಹೂಜಿ, ದೊಡ್ಡ ಪ್ರಮಾಣದಲ್ಲಿ ಮಾರಾಟಕ್ಕೆ ಬರುತ್ತಿದ್ದವು. ಉಡುಪಿಯ ಕಂಚಿನ ವಸ್ತುಗಳು ಪ್ರಸಿದ್ಧವಾಗಿದ್ದವು. ಗಿಂಡಿ, ಮಿಳ್ಳೆ, ಲೋಟಾ, ಊಟದ ಸಣ್ಣದೊಡ್ಡ ತಟ್ಟೆಗಳು, ಪ್ರವಾಸಕ್ಕೆ ಕೊಂಡೊಯ್ಯುವ ತಿರುಪಿನ ಚೊಂಬು ಇತ್ಯಾದಿ ಅಗತ್ಯದ ವಸ್ತುಗಳು ಇಲ್ಲಿ ತಯಾರಾಗುತ್ತಿದ್ದವು. ಇಂದು ಇವುಗಳೆಲ್ಲಾ ನಾಮಾವಶೇಷವಾಗಿಬಿಟ್ಟಿವೆ! ಫ್ಯಾಕ್ಟರಿಯಲ್ಲಿ ತಯಾರಾಗುವ ಸ್ಟೀಲಿನ ಪಾತ್ರೆಗಳು ಅಡುಗೆಮನೆ ಸಾಮ್ರಾಜ್ಯವನ್ನು ತನ್ನದಾಗಿಸಿಕೊಂಡಿವೆ. ಕುಂದಾಪುರ ಸಂತೆಯಲ್ಲಿ ಸಿಗುವ ಅಡಿಕೆ ಹಾಳೆಯ ಮುಟ್ಟಾಳೆ (ಟೊಪ್ಪಿ) ಕಮಲಾದೇವಿಗೆ ತುಂಬ ಇಷ್ಟವಾಯಿತು. ಅವರು ಮೆಹರೂಲಿಯಲ್ಲಿ ಪ್ರಾರಂಭಗೊಳ್ಳಲಿರುವ ರಂಗಸಜ್ಜಿಕೆಯ ಮ್ಯೂಸಿಯಮ್‌ಗಾಗಿ ಚೆಂದದ ಮುಟ್ಟಾಳೆಯೊಂದನ್ನು ಆಯ್ದುಕೊಂಡರು. ಅದೇ ರೀತಿ ಮಣ್ಣಿನ, ದಂತದ ವಸ್ತುಗಳನ್ನು, ಅಂಕೋಲೆಯ ಹಾಲಕ್ಕಿ ಗೌಡತಿಯರು ಧರಿಸುವ ಕಪ್ಪು ಮಣಿಸರ, ಬಣ್ಣಬಣ್ಣದ ಮಣಿಗಳ ಹಾರ ಇವುಗಳನ್ನೆಲ್ಲಾ ಒಂದೆಡೆ ಜೋಡಿಸಿಕೊಂಡರು.

ಶಿರಾಲಿಯಲ್ಲಿ ಮಠದ ಸಮೀಪದ ಹಿತ್ತಲಿನಲ್ಲಿ ದೊಂಬಿ ಬೆಳಕಿನಲ್ಲಿ ನಡೆದ ಯಕ್ಷಗಾನ ಪ್ರಸಂಗವನ್ನು ಬೆಳಗಿನವರೆಗೆ ಕುಳಿತು ನೋಡಿ ಸಂತೋಷಪಟ್ಟರು. ಒಂದು ಕಾಲದಲ್ಲಿ ಕಾವಿಕಲೆ ಕರ್ನಾಟಕದ ಕರಾವಳಿ ಪ್ರದೇಶದ ವಿಶಿಷ್ಟ ಮತ್ತು ಕಲಾಪ್ರಕಾರವಾಗಿ ಬೆಳೆದುಬಂದಿತ್ತು. ಆಧುನಿಕತೆಯ ಭರಾಟೆಯಲ್ಲಿ ಈ ಕಲೆ ಹೇಳಹೆಸರಿಲ್ಲದಂತೆ ನಾಶವಾಗಿ ಬಿಟ್ಟಿದೆ. ಕಮಲಾದೇವಿಯವರು ತಮ್ಮ ಮೊದಲ ಪ್ರವಾಸದಲ್ಲಿಯೇ ಕುಮಟೆಯ ವೆಂಕಟರಮಣ ದೇವಾಲಯದಲ್ಲಿದ್ದ ಪುರಾತನ ಕಾಲದ ಅಪೂರ್ವ ಕಾವಿ ಚಿತ್ರವನ್ನು ನೋಡಿದ್ದರು. "ಇದನ್ನು ಉಳಿಸುವ ಪ್ರಯತ್ನ ಮಾಡಿ" ಎಂದು ದೇವಾಲಯದ ಮೇಲ್ವಿಚಾರಕರಿಗೆ ಅವರು ಹೇಳಿದ್ದರಂತೆ. ಅವರ ಮಾತಿಗೆ ಗೌರವ ಕೊಟ್ಟು ಕಾವಿಕಲೆಯ

ಒಂದೆರಡು ಚಿತ್ರಾವಳಿಗಳನ್ನು ಅವರು ರಕ್ಷಿಸಿ ಉಳಿಸಿಕೊಂಡಿದ್ದಾರೆ. ಕಮಲಾದೇವಿ ಅಲ್ಲಿಗೆ ಭೇಟಿ ನೀಡಿದ ದಿನವನ್ನು (1960) ಕೂಡಾ ಅವರು ಬರೆದಿಟ್ಟದ್ದಾರೆ.

ನ್ಯೂಯಾರ್ಕಿನ ಸ್ಮಿತ್‌ಸೋನಿಯನ್ ಸಂಸ್ಥೆಯು ಜಾಗತಿಕ ಬೊಂಬೆಯಾಟದ ಸಮ್ಮೇಳನವನ್ನು ಹಮ್ಮಿಕೊಂಡಿತ್ತು. ಬೇರೆ ಪ್ರಾಂತಗಳ ಶ್ರೇಷ್ಠ ತಂಡಗಳ ಸಾಲಿನಲ್ಲಿ ಕರ್ನಾಟಕದ ಕಲಾವಿದರನ್ನು ಕೂಡಾ ಕಮಲಾದೇವಿ ಆಯ್ಕೆ ಮಾಡಿಕೊಂಡಿದ್ದರು. ಆಗ ಚಿತ್ರಕಲಾ ಪರಿಷತ್ತಿನ ಸಂಸ್ಥಾಪಕ ಮತ್ತು ಮುಖ್ಯಸ್ಥರಾಗಿದ್ದ ಬೆಂಗಳೂರಿನ (ದಿ) ಎಂ.ಎಸ್. ನಂಜುಂಡರಾವ್ ಅವರು ತಂಡದ ಮುಖ್ಯಸ್ಥರಾಗಿ ನ್ಯೂಯಾರ್ಕಿಗೆ ಹೋಗಿದ್ದರು. ಈ ಕಾರಣದಿಂದ ಅವರಿಗೆ ಮತ್ತು ಅವರ ತಂಡಕ್ಕೆ ಬೇರೆ ಬೇರೆ ದೇಶಗಳ ತಂಡಗಳನ್ನು ಭೇಟಿ ಮಾಡುವ ಅವಕಾಶ ದೊರೆಯಿತು. ನಂತರ ಅವರು ಪ್ಯಾರಿಸ್ ಉತ್ಸವದಲ್ಲಿ ಪಾಲುಗೊಳ್ಳಲು ಕಮಲಾದೇವಿಯೇ ಕಾರಣರಾದರು.

ಕಲಾವಿದರ ಹಸ್ತಕೌಶಲ್ಯಕ್ಕೆ ಪುನಶ್ಚೇತನ ದೊರೆತದ್ದು ನಿಜ! ಆದರೆ ಆ ಕಲಾಕೃತಿಗಳು ಊನಗೊಳ್ಳದಂತೆ ಹೊರದೇಶಗಳಿಗೆ ಕಳುಹಿಸುವುದು ಕೂಡಾ ಅಷ್ಟೇ ಮುಖ್ಯವಾಗಿತ್ತು. ಅವರು ವಸ್ತುಗಳನ್ನು ಜಾಗ್ರತೆಯಿಂದ ತುಂಬಿಸುವ ಕಲೆಯನ್ನು(ಪ್ಯಾಕಿಂಗ್) ಕಲಿಯಲು ಮೈಸೂರಿನ ವೀರಪ್ಪ ಎಂಬ ಕಲಾವಿದನನ್ನು ಬಹಳ ಹಿಂದೆಯೇ ಜಪಾನಿಗೆ ಕಳುಹಿಸಿದ್ದರು. ಆನಂತರ ವೀರಪ್ಪನೇ ಸ್ವತಃ ಪ್ಯಾಕಿಂಗ್ ತರಬೇತಿ ಕೇಂದ್ರವನ್ನು ಮೈಸೂರಿನಲ್ಲಿ ಪ್ರಾರಂಭಿಸಿದ್ದರಿಂದ ಕರ್ನಾಟಕದ ಬಹಳಷ್ಟು ಕರಕುಶಲ ಸೂಕ್ಷ್ಮ ವಸ್ತುಗಳು ಹೊರದೇಶಗಳಿಗೆ ಹೋಗುವುದು ಪ್ರಾರಂಭವಾಯಿತು.

ನಮ್ಮವರು ಕಮಲಾದೇವಿಗೆ ಮಾಡಿದ 'ಉಪಚಾರ'ವನ್ನು ಇಲ್ಲಿ ಉಲ್ಲೇಖಿಸಲೇಬೇಕು! ಅವರನ್ನು ನಲ್ವತ್ತು ವರ್ಷಗಳಿಂದ ಬಲ್ಲವರು, ಅವರ ನಿಸ್ವಾರ್ಥ ಮತ್ತು ಜನೋಪಯೋಗಿ ಕಾರ್ಯಗಳನ್ನು ಪ್ರತ್ಯಕ್ಷವಾಗಿ ನೋಡಿದವರೇ ಅವರ ವಿರೋಧಿಗಳಾಗಿ ಪಿತೂರಿ ನಡೆಸಿದರು. ಅವರು ಕರಕುಶಲ ಮಂಡಳಿಯ ಅಧ್ಯಕ್ಷರಾಗಿದ್ದಾಗ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಭಗ್ನಗೊಂಡು ಪೂಜೆಗೆ ಅನರ್ಹವೆಂದು ಪರಿಗಣಿಸಲ್ಪಟ್ಟ ಅನೇಕ ಭೂತಾರಾಧನೆಯ ಮರದ ವಿಗ್ರಹಗಳು ಹೊರಗೆ ಚೆಲ್ಲಿಕೊಂಡಿರುವುದನ್ನು ಕಂಡಿದ್ದರು. ಅವುಗಳೆಲ್ಲಾ ಮಳೆ ಮತ್ತು ಗಾಳಿಗೆ ಒಡ್ಡಿಕೊಂಡು ನಾಶವಾಗುವ ಸ್ಥಿತಿಯಲ್ಲಿದ್ದವು. ಸುಂದರವಾದ ಕೆತ್ತನೆಯಿಂದ ಶೋಭಿಸುವ ಈ ವಿಗ್ರಹಗಳು 800ರಿಂದ 1000 ವರ್ಷಗಳಷ್ಟು ಹಳೆಯವು ಎಂದು ತಜ್ಞರು ಅಭಿಪ್ರಾಯ ವ್ಯಕ್ತಪಡಿಸಿದ್ದರು. ಹೀಗೆ ಅಸಡ್ಡೆಗೆ ಒಳಗಾಗುವುದಕ್ಕಿಂತ, ಇವುಗಳನ್ನು ಕಲಾಕೃತಿಗಳಿಗಾಗಿಯೇ ಸ್ಥಾಪಿಸಲಾದ ಮೆಹರೂಲಿಯ ಕ್ರಾಫ್ಟ್ ಮ್ಯೂಸಿಯಂಗೆ ಕಳುಹಿಸುವ ಏರ್ಪಾಟನ್ನು ಕಮಲಾದೇವಿ ಮಾಡಿದರು.

ದುರ್ದೈವದಿಂದ ಇದೇ ಸಮಯದಲ್ಲಿ ಇಂದಿರಾಗಾಂಧಿ, ಕಮಲಾದೇವಿಯನ್ನು ಕರಕುಶಲ ಮಂಡಳಿಯ ಉನ್ನತ ಹುದ್ದೆಯಿಂದ ಪದಚ್ಯುತಗೊಳಿಸಿದರು. ವಿಗ್ರಹಗಳನ್ನು ಮ್ಯೂಸಿಯಂಗೆ ತಲುಪಿಸುವ ಕಾರ್ಯವನ್ನು ಕೇಂದ್ರಸರಕಾರ ವಹಿಸಿಕೊಂಡಿತು. ಲೆಕ್ಕಪರಿಶೋಧಕರು ಕೆಲಸಕ್ಕೆ ಬಾರದ, ಸುಡಲು ಯೋಗ್ಯವಾಗಿರುವ ಮರದ ಸಾಮಾನುಗಳನ್ನು ಖರೀದಿಸಿ ಮಂಡಳಿಗೆ ಲಕ್ಷಗಟ್ಟಳೆ ನಷ್ಟವನ್ನು (ಮಾಜೀ ಅಧ್ಯಕ್ಷರು) ಉಂಟುಮಾಡಿದ್ದಾರೆ ಎಂಬ ವರದಿಯನ್ನು ಸರಕಾರಕ್ಕೆ ಒಪ್ಪಿಸಿದರು. ಕಮಲಾದೇವಿಯವರು ಭಗ್ನಗೊಂಡ ವಿಗ್ರಹಗಳ ಜಾಗದಲ್ಲಿ ಅಷ್ಟೇ ಸಂಖ್ಯೆಯ ಹೊಸ ವಿಗ್ರಹಗಳನ್ನು ಮಾಡಿಸಿ ಆಯಾಯ ದೇವಾಲಯಗಳಿಗೆ ತಲುಪಿಸಿದ್ದರು (ಅಂತಹ ಕುಶಲಕರ್ಮಿಗಳು ಆ

ಕಾಲದಲ್ಲಿ ಇದ್ದರು). ಅದರ ಹಣವನ್ನು ಕೂಡಾ ಕಲಾವಿದರಿಗೆ ತಲುಪಿಸಿಯಾಗಿತ್ತು.

ಕಮಲಾದೇವಿಯ ವಿರುದ್ಧ ಅಪಪ್ರಚಾರ ಪ್ರಾರಂಭವಾಯಿತು. ಅದಕ್ಕೆ ಸ್ಥಳೀಯ ರಾಜಕಾರಣಿಗಳಿಂದ ಬೆಂಬಲವೂ ದೊರೆಯಿತು. 'ದೇವಾಲಯದ ಪವಿತ್ರ ವಸ್ತುಗಳನ್ನು ಮರುಳುಮಾಡಿ ಕೊಂಡೊಯ್ದಿದ್ದಾರೆ; ವಿದೇಶಕ್ಕೆ ಕಳುಹಿಸಿ ಹಣಸಂಪಾದನೆಯನ್ನು ಪ್ರಾರಂಭಿಸಿದ್ದಾರೆ' ಎಂದು ಹೇಳಲಾಯಿತು. ಸಂಬಂಧಪಟ್ಟ ದೇವಾಲಯದ ಮೇಲ್ವಿಚಾರಕರಿಗೆ, 'ನಿಮ್ಮನ್ನು ದೊಡ್ಡ ಪ್ರಮಾಣದಲ್ಲಿ ಸಿಕ್ಕಿಸಿಹಾಕಲಾಗಿದೆ!' ಎಂಬ ಸುದ್ದಿ ಹೋದದ್ದರಿಂದ, ಅವರು ಹೊಸ ಮೂರ್ತಿಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡರಲ್ಲದೆ ಊನಗೊಂಡ ಮೂರ್ತಿಗಳನ್ನು (ಉಳಿದ ಕೆಲವನ್ನು) ತೆಗೆದುಕೊಂಡು ಹೋಗಲು ಬಿಡಲಿಲ್ಲ!

ದೇವರೇ ಕಾಪಾಡಿದ! (ದಿ) ಸ್ಟೆಲಾ ಅಂತಾರಾಷ್ಟ್ರೀಯ ಖ್ಯಾತಿಯ ಭಾರತೀಯ ಕಲಾತಜ್ಞೆ, ಅವರು ಅಮೇರಿಕೆಯಲ್ಲಿ ನಡೆಯಲಿರುವ ಪ್ರದರ್ಶನಕ್ಕಾಗಿ ಭಗ್ನಗೊಂಡ ಎರಡು ದೊಡ್ಡ ಮೂರ್ತಿಗಳಿಗೆ (ಭೂತದ), ತಲಾ 10,000 ಡಾಲರ್ ವಿಮೆ ಇಳಿಸಿ ಹಡಗಿನಲ್ಲಿ ಕಳುಹಿಸಿದ್ದರು. ಈ ಸತ್ಯದಿಂದ ಲೆಕ್ಕಪರಿಶೋಧಕ ತಂಡದ ಬಾಯಿ ಮುಚ್ಚಿಹೋಯಿತು. ತನ್ನ ಮೇಲೆ ಬಂದಂತಹ ಕ್ರಿಮಿನಲ್ ಆಪಾದನೆಯಿಂದ ಮುಕ್ತರಾಗಲು ಕಮಲಾದೇವಿ ಬಹಳ ಹೋರಾಡಬೇಕಾಯಿತು. ಈ ಸಂದರ್ಭದಲ್ಲಿ ಹಿಂದೆ ಅವರೊಂದಿಗೆ ಸ್ವಾತಂತ್ರ್ಯ ಹೋರಾಟದಲ್ಲಿ ಕೆಲಸ ಮಾಡಿಕೊಂಡಿದ್ದ ಮುಖಂಡರೊಬ್ಬರು ಅವರಿಗೆ ಸಹಾಯ ಮಾಡಿದರು.

ಕಮಲಾದೇವಿಯವರು ತಮ್ಮ ಆತ್ಮಕತೆಯಲ್ಲಿ ಎಲ್ಲಿಯೂ ತನಗೆ ತೊಂದರೆ ಮಾಡಿದ, ರಾಜಕೀಯ ರೀತಿಯಿಂದ ಸತಾಯಿಸಿದವರ ಹೆಸರನ್ನು ಎತ್ತದಿದ್ದರೂ, ಈ ಒಂದು ಘಟನೆಯನ್ನು ಮಾತ್ರ ನಿರ್ಲಿಪ್ತ ರೀತಿಯಿಂದ ಉಲ್ಲೇಖಿಸಿದ್ದಾರೆ. ಕಾಯಾ ವಾಚಾ ಮನಸಾ ಅವರದು ವಿಶಾಲ ವ್ಯಕ್ತಿತ್ವವಾಗಿತ್ತು. ದೇಶಕ್ಕೆ ಸ್ವಾತಂತ್ರ್ಯ ಸಿಕ್ಕಿದ ಕೂಡಲೇ ರಾಜಕೀಯದಿಂದ ಹೊರಬಂದ ವ್ಯಕ್ತಿಗೆ ಎಲ್ಲಾ ಕ್ಷೇತ್ರಗಳಲ್ಲಿ ರಾಜಕಾರಣ ಪ್ರವೇಶ ಪಡೆದ ಪರಿಸ್ಥಿತಿಯ ವಿರುದ್ಧ ಹೋರಾಟ ನಡೆಸಬೇಕಾಗಿ ಬಂತು. ಇದು ವಿಧಿಯ ವೈಚಿತ್ರ್ಯ!

ಅಧ್ಯಾಯ : ೧೩

# ಕೆಲಸ ಬೇಕು, ಪ್ರತಿಷ್ಠೆ ಬೇಡ

## (ಸೇವಾ ಬದುಕಿನ ಅವಲೋಕನ)

1947ನೇ ಇಸವಿ, ಆಗಸ್ಟ್ 15 ರಂದು ದೇಶ ಸ್ವತಂತ್ರವಾಯಿತು. ಕಮಲಾದೇವಿ ಕೂಡಾ ಸ್ವತಂತ್ರರಾದರು ! ಅರ್ಥಾತ್ ಕಾಂಗ್ರೆಸ್ ಸಂಸ್ಥೆ ಜೊತೆಗಿದ್ದ ಮೂರು ದಶಕಗಳ ಅವಿನಾಭಾವ ಸಂಬಂಧದಿಂದ ಕಳಚಿಕೊಂಡರು. 'ದೇಶಕ್ಕೆ ಸ್ವಾತಂತ್ರ್ಯ ಸಿಗುವವರೆಗೆ ಕಾಂಗ್ರೆಸಿನಲ್ಲಿ ಇದ್ದು ಕೆಲಸ ಮಾಡುತ್ತೇನೆ !' ಎನ್ನುವ ಪ್ರತಿಜ್ಞೆ ಪೂರ್ಣವಾದ್ದರಿಂದ, ಪಕ್ಷದ ಸದಸ್ಯತ್ವಕ್ಕೆ ರಾಜಿನಾಮೆ ನೀಡುವ ವಿಚಾರದಲ್ಲಿ ಕೂಡಾ ಅವರು ಬಾಪೂಜಿಯವರ ನಿಷ್ಠಾವಂತ ಅನುಯಾಯಿ ಯಾದರು. ದೇಶ ಸ್ವತಂತ್ರವಾದ ಕೂಡಲೇ ಕಾಂಗ್ರೆಸ್ ಸಂಸ್ಥೆ ವಿಸರ್ಜನೆಯಾಗಬೇಕು! ಎಂದು ಬಾಪೂಜಿ ಹೇಳುತ್ತಿದ್ದರು. ಆದರೆ ಹಾಗೇನೂ ನಡೆಯಲಿಲ್ಲ. ಕಮಲಾದೇವಿ ಮಾತ್ರ ತಾನಾಗಿ ಹೊರಗೆ ಬಂದರು.

ನಾವು ನೋಡಿದ ಹಾಗೆ ಕಮಲಾದೇವಿ ಅಗ್ರಶ್ರೇಣಿಯ ಸ್ವಾತಂತ್ರ್ಯ ಯೋಧರಾಗಿದ್ದರು. ಅವರು ಆರು ವರ್ಷಗಳಲ್ಲಿ ನಾಲ್ಕು ಬಾರಿ ಜೈಲಿನ ಸುಖವನ್ನು ಕಂಡಿದ್ದಾರೆ. ಲಾಠಿಯೇಟು ತಿಂದಿದ್ದಾರೆ. ಆರೋಗ್ಯವನ್ನು ಕೆಡಿಸಿಕೊಂಡಿದ್ದಾರೆ. ಖಾಸಗಿ ಬದುಕನ್ನು ನಷ್ಟ ಮಾಡಿ ಕೊಂಡಿದ್ದಾರೆ. ನಾವೀಗ ತ್ಯಾಗಿ ಜನರನ್ನು ಕಾಣುತ್ತಿದ್ದೇವೆ. ಸುಳ್ಳು ಸರ್ಟಿಫಿಕೇಟ್ ನೀಡಿ ಸ್ವಾತಂತ್ರ್ಯ ಯೋಧರೆಂದು ಸಾಧಿಸಿಕೊಂಡು ಸರಕಾರದಿಂದ ದೊರೆಯುವ ಎಲ್ಲ ಸವಲತ್ತು ಗಳನ್ನು, ಪಿಂಚಣಿ, ಸೈಟ್, ಮೊಮ್ಮಕ್ಕಳಿಗೆ ಕಾಲೇಜಿನಲ್ಲಿ ಸೀಟು ಗಿಟ್ಟಿಸಿರುವ ಸಾವಿರಾರು ಮಂದಿ ಕರ್ನಾಟಕದಲ್ಲಿ ಸಿಗುತ್ತಾರೆ. ಲಕ್ಷಗಟ್ಟಳೆ ಜನರು ದೇಶದಲ್ಲಿ ಸಿಗುತ್ತಾರೆ. ಈ ಗಾಂಧಿಭಕ್ತೆ ಕಮಲಾದೇವಿ ಮನೆಬಾಗಿಲಿಗೆ ಬಂದ ಅತ್ಯುನ್ನತ ಹುದ್ದೆಗಳನ್ನು, ಕ್ಯಾಬಿನೆಟ್ ಮಂತ್ರಿ, ಗವರ್ನರ್, ಅಂಬಾಸೆಡರ್, ಉಪರಾಷ್ಟ್ರಪತಿಯವರೆಗೆ ಎಲ್ಲದಕ್ಕೂ ನಿರಾಕರಣೆ ವ್ಯಕ್ತ ಪಡಿಸಿದ್ದಾರೆ. ಅವರಿಗೆ ಉಪರಾಷ್ಟ್ರಪತಿ ಸ್ಥಾನ ನೀಡಬೇಕು ಎಂಬ ನಿರ್ಧಾರವಂತೂ ಎಲ್ಲಾ ಪಕ್ಷಗಳ ಜನರು ಸೇರಿ ಸೂಚಿಸಿದ್ದು ಮತ್ತು ಸರ್ವಾನುಮತದಿಂದ ಸ್ವೀಕಾರಗೊಂಡದ್ದಾಗಿದೆ. ಇಂತಹ ಅವಕಾಶವನ್ನು ಧಿಕ್ಕರಿಸಿ ತನ್ನ ವಿವೇಕಕ್ಕೆ ಹೊಳೆದ ರೀತಿಯಿಂದ ನಡೆದುಕೊಳ್ಳುವ ವ್ಯಕ್ತಿ ಕ್ವಚಿತ್ತಾಗಿ ಸಿಗುತ್ತಾರೆ !

ಕಮಲಾದೇವಿಯವರು ಯಾವುದೇ ಪ್ರತಿಷ್ಠಿತ ಹುದ್ದೆಯನ್ನು ಬೇಡವೆಂದು ಹೇಳಿದ್ದು ಯಾಕೆ ?

ಸುಮಾರು 85 ವರ್ಷಗಳಷ್ಟು ಹಿಂದೆ ಕಮಲಾದೇವಿ ರಾಜಕೀಯ ರಂಗವನ್ನು ಪ್ರವೇಶಿಸಿದಾಗ, ದೇಶಸೇವೆ ಮಾಡಲು ರಾಜಕೀಯವೊಂದೇ ಮಾಧ್ಯಮವಾಗಿದ್ದು, ಇದು ಎಲ್ಲಾ ವಯಸ್ಸಿನ ಎಲ್ಲಾ ಕಾರ್ಯರಂಗದ ಜನರಿಗೆ ಆಕರ್ಷಣೆಯಾಗಿತ್ತು. ದೇಶಕ್ಕಾಗಿ ಹೋರಾಡುವುದೆಂದರೆ ದೊಡ್ಡ ಸದವಕಾಶ! ರಾಜಕಾರಣ ಏಕಮಾತ್ರ ಮಾರ್ಗವೆಂದು ಯುವಜನತೆಗೆ ತೋರುತ್ತಿತ್ತು. ಸ್ವಾತಂತ್ರ್ಯ ಸಿಕ್ಕಿತು. ದಿನಕಳೆದಂತೆ, ರಾಜಕೀಯ ಸಂಪರ್ಕವಿದ್ದ ವ್ಯಕ್ತಿಗಳಿಗೆ ಅದು ಪೂರ್ಣ ಪ್ರಮಾಣದ ಆರ್ಥಿಕ ಮತ್ತು ಲೌಕಿಕ ಸೌಕರ್ಯ

ಪಡೆಯುವ ರಾಜಮಾರ್ಗವಾಯಿತು (ಈಗಲೂ ಅದು ನಡೆಯುತ್ತಾ ಇದೆ!). ಇದರಿಂದ ಕಮಲಾದೇವಿ ರೋಸಿಹೋದರು. ಮೊದಲಿಂದಲೂ ಅವರು ಪ್ರಚಾರ ಮತ್ತು ಪ್ರತಿಷ್ಠೆಯಿಂದ ದೂರವೇ ಇರುತ್ತಿದ್ದವರು. ಸ್ವಯಂ ಕಾರ್ಯಕರ್ತೆಯೆಂದು ರಾಜಕಾರಣದಲ್ಲಿ ಪ್ರವೇಶ ಪಡೆದು ಕೊನೆಯವರೆಗೆ ಸೇವೆ ಮಾತ್ರ ತನ್ನ ಉದ್ದೇಶ ಎಂದು ಸ್ಪಷ್ಟ ರೀತಿಯಿಂದ ಹೇಳುತ್ತಿದ್ದರು. ಅವರು ಸುಖವಾಗಿ ಬೆಳೆದವರು. ಆದರೆ ಸ್ವಾತಂತ್ರ್ಯ ಹೋರಾಟದ ದೀರ್ಘಾವಧಿಯಲ್ಲಿ ಬಡವರ ಕಷ್ಟಕರ ಜೀವನ, ಜೈಲಿನ ದುಃಖದ ಅನುಭವ, ಮುಖ್ಯವಾಗಿ ಕುಶಲಕರ್ಮಿಗಳ, ಮಹಿಳೆಯರ ಮೇಲಿನ ಕೊನೆಯಿಲ್ಲದ ಶೋಷಣೆಗಳನ್ನು ನೋಡುತ್ತಾ ಅವರ ಜೀವನ ಮತ್ತು ವಿಚಾರ ಬೇರೆಯೇ ತಿರುವನ್ನು ಪಡೆಯಿತು.

ಈ ವಿಚಾರದಲ್ಲಿ ಅವರ ಸ್ವಂತ ಅಭಿಪ್ರಾಯವನ್ನು ನಾವೀಗ ತಿಳಿದುಕೊಳ್ಳೋಣ. "..ನಾನು ರಾಜಕೀಯ ರಂಗದಲ್ಲಿ ಬಹಳ ವರ್ಷ ಕೆಲಸ ಮಾಡಿದ್ದೇನೆ. ನನಗೆ ನನ್ನದೇ ಎನ್ನುವ ಸ್ವಂತ ಸ್ಥಾನಮಾನಗಳು ಲಭಿಸಿದ್ದವು. ಯಾವುದೇ ರಾಜಕಾರಣಿಯ ಅಥವಾ ಪಕ್ಷದ ಅಗತ್ಯ ನನಗೆ ಇರಲಿಲ್ಲ... ಯಾವುದೇ ದಳ ಅಥವಾ ಪಕ್ಷಕ್ಕೆ ಒಂದು ಬಾರಿ ಸೇರಿಕೊಂಡರೆ ವ್ಯಕ್ತಿಯ ಸ್ವತಂತ್ರ ವಿಚಾರಗಳಿಗೆ ಅಥವಾ ಚಿಂತನೆಗೆ ಅವಕಾಶವಿರುವುದಿಲ್ಲ! ಪಕ್ಷದ ಧ್ಯೇಯ ಅಥವಾ ಮುಖಂಡರ ವರ್ಚಸ್ಸು ಮುಖ್ಯವಾಗುತ್ತವೆ. ಸಮೂಹ ಶಿಸ್ತಿನ ಅಗತ್ಯವಿರುತ್ತದೆ... ಪಕ್ಷದಲ್ಲಿ ಮುಖಂಡರಾಗಿರಬೇಕು ಅಥವಾ ಅನುಯಾಯಿಯಾಗಿರಬೇಕು !

ನನಗೆ ಬದುಕಿನಲ್ಲಿ ವೈವಿಧ್ಯತೆ ಇಷ್ಟವಾಗುತ್ತದೆ. ಹೊಸ ಹೊಸ ಪ್ರಯೋಗ ಇಷ್ಟವಾಗುತ್ತದೆ. ನಿನಗೆ ಆಡಳಿತಾತ್ಮಕ ತಂತ್ರ ತಿಳಿಯುವುದಿಲ್ಲವೆಂದು ನನ್ನ ಆಪ್ತರು, ಮಿತ್ರರು ಹೇಳಿದ್ದುಂಟು. ರಾಜಕಾರಣಿಗಳು ಹೇಳುವ ಆದರ್ಶ ಮತ್ತು ಅವರ ಜೀವನಶೈಲಿ ಇವುಗಳ ನಡುವೆ ಆಕಾಶ ಪಾತಾಳದಷ್ಟು ಅಂತರವನ್ನು ನಾನು ನೋಡಿದ್ದೇನೆ. ಕೆಲವು ಮುಖಂಡರು ಜಾತಿವಾದವನ್ನು ಖಂಡಿಸುತ್ತಾರೆ. ಆದರೆ ಚುನಾವಣೆಯಲ್ಲಿ ಜಾತಿಯ ಬಲದಿಂದಲೇ ಗೆದ್ದು ಬರುತ್ತಾರೆ! ಭಾಷೆ, ಜಾತಿ, ಪ್ರಾದೇಶಿಕ ನಿಷ್ಠೆ ಇವುಗಳ ಬೆಂಬಲದಿಂದ ಪುಢಾರಿಗಳು ರೂಪುಗೊಳ್ಳುತ್ತಾರೆ. ಭಾಷಾವಾರು ಪ್ರಾಂತಗಳಾದವು, ಆದರೆ ಇದರಿಂದ ರಾಜ್ಯಗಳಿಗೆ ಏನು ಲಾಭವಾಯಿತು ? ಮಹಾ ನಗರವೊಂದರಲ್ಲಿ ನೂರಾರು ವರ್ಷಗಳಿಂದ ಬೇರೆ ಬೇರೆ ಭಾಷೆಗಳ ಜನರು ಒಟ್ಟುಗೂಡಿ ಇರುತ್ತಿರಲಿಲ್ಲವೇ ? ಈಗಿನ ಪರಿಸ್ಥಿತಿ ಹೇಗಿದೆ ? ಒಬ್ಬರು ಇನ್ನೊಬ್ಬರನ್ನು ಸಂದೇಹದಿಂದ ಕಾಣುತ್ತಾರೆ! ಯಾರು ಮೊದಲು ಜಾತಿ-ಮತ-ಭಾಷೆ-ಧರ್ಮ ಇವುಗಳ ಭೇದವನ್ನು ವಿರೋಧಿಸುತ್ತಿದ್ದರೋ, ಅದೇ ನೇತಾರರು ಹುದ್ದೆಯ ಮೋಹದಿಂದ ಇದೇ ವಿಚಾರದ ಪರವಾಗಿ ಮಾತನಾಡುವುದನ್ನು ಶುರುಮಾಡಿಬಿಟ್ಟಿದ್ದಾರೆ !" ಅವರು ನಂತರದ ವರ್ಷಗಳ ರಾಜಕಾರಣದಿಂದ ಬೇಸತ್ತು ಹೇಳಿದ ಮಾತುಗಳು ಇವು.

ಕಮಲಾದೇವಿಗೆ ಹುದ್ದೆ, ಪ್ರತಿಷ್ಠೆ, ಪದವಿ-ಪ್ರಚಾರಗಳ ಮೋಹ ಸ್ವಲ್ಪವೂ ಇರಲಿಲ್ಲ; ಅವರಲ್ಲಿ ಕಲಾಪ್ರೇಮ ಮಾತ್ರ ಅಪಾರವಿತ್ತು. ಬಾಲ್ಯದಲ್ಲಿ ತಾನು ಇಷ್ಟಪಟ್ಟ ಕಲಾಪ್ರಕಾರಗಳಿಗೆ ಚೈತನ್ಯ ತುಂಬಿ ಹೊಸ ಬಣ್ಣ, ರೂಪ ನೀಡುವ ಅಧಿಕಾರ ತಾನಾಗಿ ಅವರನ್ನು ಹುಡುಕಿ ಬಂತು. ಅಖಿಲಭಾರತ ಕರಕುಶಲಮಂಡಳಿಯ ಅಧ್ಯಕ್ಷಸ್ಥಾನಕ್ಕೆ ಕರೆಬಂದಾಗ ಅದಕ್ಕೆ ಸಂಜೀವಿನಿ ರೂಪದಲ್ಲಿ ಅವರು ಒದಗಿದರು. ಅದರಿಂದ ಅವರಿಗೆ ಸಾರ್ಥಕತೆ ಕೂಡಾ ದೊರೆತಿತ್ತು.

ಪುಟ್ಟ ಹುಡುಗಿಯಾಗಿದ್ದಾಗ (1919) ಗಾಂಧೀಜಿಯವರನ್ನು ಮೊದಲ ಬಾರಿ ನೋಡಿದಾಗ ಅವರಲ್ಲಿ ಮೂಡಿದ್ದ ಪೂಜ್ಯಭಾವನೆ ಕೊನೆಯವರೆಗೆ ಹಾಗೆಯೇ ಉಳಿದಿತ್ತು. "ಮಾನವೀಯತೆಯಲ್ಲಿ ಅವರಿಗಿದ್ದ (ಗಾಂಧೀಜಿಗೆ) ನಿಷ್ಠೆ ಮತ್ತು ಜನರ ಒಳಿತಿಗಾಗಿ ಅವರು

ತೆಗೆದುಕೊಂಡ ಅಪಾರ ಶ್ರಮದಿಂದ ನಾನು ಗಾಂಧಿ ಪ್ರಣಾಳಿಕೆಯ ಕಡೆಗೆ ಆಕರ್ಷಿತಳಾದೆ. ಅವರಲ್ಲಿ ಸಾಮಾನ್ಯ ಜನರಿಗಾಗಿ, ಬಡವರಿಗಾಗಿ, ಅಸಹಾಯಕ ನಾಗರಿಕರಿಗಾಗಿ ಇದ್ದಂತಹ ಕಾಳಜಿ ಅನನ್ಯವಾಗಿತ್ತು. ಅವರ ವಿಧಾಯಕ ಕಾರ್ಯಕ್ರಮ ಸದೃಢವಾಗಿತ್ತು. ಅವರು ಮಹಿಳೆಯರಿಗೆ ಪುರುಷರಷ್ಟೇ ಸಮಾನತೆಯನ್ನು ತಂದಿದ್ದರು. ಎಲ್ಲಕ್ಕಿಂತ ಹೆಚ್ಚಾಗಿ, ಸಮಾಜದಲ್ಲಿ ಪ್ರತಿಯೊಬ್ಬ ವ್ಯಕ್ತಿಗೆ ಸ್ವಂತದ್ದಾದ ಅಥವಾ ಪ್ರತ್ಯೇಕವಾದ ಸ್ಥಾನವಿದೆ ಎಂಬುದನ್ನು ಅವರು ತೋರಿಸಿಕೊಟ್ಟಿದ್ದಾರೆ. ವಿಶಿಷ್ಟಸ್ಥಾನವನ್ನು ನಿರ್ಮಿಸಿಕೊಟ್ಟಿದ್ದಾರೆ. ನಾನು ಸಕ್ರಿಯ ರಾಜಕಾರಣದಲ್ಲಿ ಇರಲು ಬಾಪೂಜಿಯವರ ಮುಂದಾಳತ್ವವೇ ಕಾರಣ ವಾಯಿತು. ಚಳವಳಿಯ ಕೆಲಸದಿಂದಾಗಿ ನನಗೆ ವಿಶಿಷ್ಟ ತರಬೇತಿ ದೊರೆಯಿತು. ನನ್ನಲ್ಲಿ ಸಂಘಟನಾ ಶಕ್ತಿ ಬೆಳೆಯಿತು. ಆ ದಿನಗಳ ಆಶಾವಾದಿ, ಸ್ವಾರ್ಥರಹಿತ, ಸರ್ವಸಮಾನತೆಯ ಶ್ರಮ ನನ್ನನ್ನು ಸಶಕ್ತಗೊಳಿಸಿತು. ಯಾವುದೇ ಕಷ್ಟ ದೊಡ್ಡದೆಂದು ಅನ್ನಿಸಲೇ ಇಲ್ಲ! ನನ್ನಲ್ಲಿದ್ದ ಕೆಲವು ಉತ್ತಮ ಅಂಶಗಳು ಹೊರಬರಲು ಈ ಒಂದು ಅವಕಾಶ ದೊರೆಯಿತು. ಸ್ವಾತಂತ್ರ್ಯ ಪ್ರಾಪ್ತಿಯಾದಾಗ ನನ್ನ ಬದುಕು ಸಾರ್ಥಕವಾಯಿತು! ಎಂದು ನನಗೆ ಕಂಡಿತು".

ಕಮಲಾದೇವಿಯವರು ಪ್ರಾಮಾಣಿಕ ರೀತಿಯಿಂದ ದೇಶಸೇವೆಯಲ್ಲಿ ನಿರತರಾಗಲು ಕಾರಣ ಅವರ ಅಪಾರ ತ್ಯಾಗ. ಸಮಕಾಲೀನ ರಾಜಕಾರಣಿಗಳಿಗಿಂತ ಅವರು ಎಷ್ಟು ಭಿನ್ನರಾಗಿದ್ದರು ಎಂಬುದನ್ನು ಪರಿಚಯಿಸುವುದಕ್ಕಾಗಿ ನನ್ನ ವಿಚಾರವನ್ನು ವಿಸ್ತಾರ ರೂಪದಲ್ಲಿ ಇಲ್ಲಿ ನೀಡಿದ್ದೇನೆ. ಹುದ್ದೆಗೆ, ಪ್ರತಿಷ್ಠೆಗೆ ತಹತಹಿಸುವ ರಾಜಕಾರಣಿಗಳ ಕುರಿತು ಕಮಲಾದೇವಿಯವರು ವ್ಯಕ್ತಪಡಿಸಿದ ಈ ಕೆಳಗಿನ ಅಭಿಪ್ರಾಯ(1966)ವು ನಲ್ವತ್ತು ವರ್ಷಗಳ ನಂತರವೂ ಬೆಳೆಯುತ್ತಾ ಹೋಗಿದೆ!

"ಇಂದು ಅಧಿಕಾರಾತ್ಮಕ ರಾಜಕಾರಣವು ಹೆಚ್ಚುಕಡಿಮೆ ಅಧೋಗತಿಗೆ ಬಂದು ತಲುಪಿದೆ. ನನ್ನ ಎಷ್ಟೋ ನಿಕಟವರ್ತಿ ಜನರು ಸ್ವಾತಂತ್ರ್ಯ ದೊರೆಯುವುದಕ್ಕಾಗಿ ಮಾಡಿದ ತ್ಯಾಗ, ಅವರ ನಿಷ್ಠೆ ಮತ್ತು ಅಚಲ ದೇಶಪ್ರೇಮದ ಕಲ್ಪನೆ ನನಗೆ ಇದೆ. ದಿನಗಳು ಕಳೆದಂತೆ, ರಾಜಕಾರಣವೆಂದರೆ ಒಂದು ವೃತ್ತಿ ಎಂದು ಜನರು ನಂಬಲು ಪ್ರಾರಂಭಿಸಿದ್ದಾರೆ. ಕುರ್ಚಿಗಾಗಿ ಸ್ಪರ್ಧೆ ಪ್ರಾರಂಭವಾಗಿದೆ. ಅಧಿಕಾರ ಮತ್ತು ಅದರೊಂದಿಗೆ ಬೆಳೆಯುತ್ತಿರುವ ಮತ್ಸರ ಮತ್ತು ಆತ್ಮೋದ್ಧಾರದ ತತ್ವದಿಂದಾಗಿ ಈ ಕ್ಷೇತ್ರ ನನಗಾಗಿ ಅಲ್ಲವೆಂಬುದು ಸ್ಪಷ್ಟವಾಗುತ್ತಾ ಹೋಯಿತು. ಪವರ್ ಪಾಲಿಟಿಕ್ಸ್ ಎಂಬುದು ದೀಪದ ಸುತ್ತ ಹಾರಾಡುವ ರಾತ್ರಿಕೀಟಗಳ ಹಾಗಾಗಿದೆ.

ಗಾಂಧೀಜಿಯವರು ರಚನಾತ್ಮಕ ಕಾರ್ಯಗಳಿಗೆ ಪ್ರಾಧಾನ್ಯ ನೀಡಿದ್ದರು. ರಚನಾತ್ಮಕ ಕಾರ್ಯವನ್ನು ಮಾಡುವವರು ರಾಜಕಾರಣಕ್ಕೆ ಹೋಗುವಂತಿಲ್ಲ ಎನ್ನುವ ದೊಡ್ಡ ಆದರ್ಶ ತತ್ವವನ್ನು ಮಂಡಿಸಿದ್ದರು. ಸ್ವತಂತ್ರ ಭಾರತದಲ್ಲಿ ಈ ತತ್ವವನ್ನು ಅನುಸರಿಸುವವರಿಗಿಂತ ಅದನ್ನು ಮುರಿಯುವವರೇ ಜಾಸ್ತಿ ಕಂಡುಬರತೊಡಗಿದ್ದಾರೆ. ನಾನು ರಾಜಕಾರಣದ ರಾಜಮಾರ್ಗವನ್ನು ಬಿಟ್ಟು ರಚನಾತ್ಮಕ ಕಾರ್ಯದ ಬಳಸುದಾರಿಯನ್ನು ಹಿಡಿದುಕೊಂಡೆ. ಈ ಬಳಸುದಾರಿಯ ಕಾಲುಮಾರ್ಗ ನನಗೆ ಸುಂದರ ಮತ್ತು ಆಪ್ತವಾಗಿ ಕಂಡಿತು."

ಕಮಲಾದೇವಿ ಹೇಳಿದಂತೆ ಮಾಡುವ ಅಪರೂಪದ ವ್ಯಕ್ತಿಯಾಗಿದ್ದರು.

ಅವರು ಪ್ರಸಿದ್ಧಿ ಮತ್ತು ಪ್ರತಿಷ್ಠೆಯಿಂದ ಎಷ್ಟೇ ದೂರ ಉಳಿದರೂ ಕೂಡಾ ಅನೇಕ ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಪ್ರಶಸ್ತಿಗಳು ಅವರನ್ನು ಹುಡುಕಿಕೊಂಡು ಬಂದಿವೆ. ಭಾರತ ಸರಕಾರವು ತಾಮ್ರಪಟ. ಪದ್ಮಭೂಷಣ (1955) ಮತ್ತು ಪದ್ಮವಿಭೂಷಣ (1986)

ಪ್ರಶಸ್ತಿಯನ್ನು ನೀಡಿದೆ. ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ಮಾಡಿದ ಸೇವೆಗಾಗಿ ವಿಶ್ವಭಾರತಿಯ ದೇಶಿಕೋತ್ತಮ (1972), ಸಮುದಾಯ ಸೇವೆಗಾಗಿ ಏಶಿಯಾದ ನೊಬೆಲ್ ಪ್ರಶಸ್ತಿಯೆಂದು ಪರಿಗಣಿತವಾಗಿರುವ ರೆಮೋನ್ ಮ್ಯಾಗಸೆಸೆ (1972), ಸಂಗೀತ ನಾಟಕ ಅಕಾಡೆಮಿಯ ರತ್ನ ಸದಸ್ಯ (1974), ಕರಕುಶಲ ಕಲೆಯ ಪುನಶ್ಚೇತನ ಕಾರ್ಯಗಳಿಗಾಗಿ ಯುನೆಸ್ಕೋ ಪ್ರಶಸ್ತಿ, ಅವರಿಗೆ ದೊರೆತ ಕೆಲವು ಪ್ರಶಸ್ತಿಗಳಾಗಿವೆ. ಬನಾರಸಿನ ಹಿಂದೂ ವಿಶ್ವವಿದ್ಯಾಲಯ ಅವರಿಗೆ ಗೌರವ ಡಾಕ್ಟರೇಟ್ (1986) ನೀಡಿದ ವರ್ಷವೇ ಆಂಧ್ರಪ್ರದೇಶ ಸರಕಾರದಿಂದ ಅವರಿಗೆ 'ಕಲಾಸರಸ್ವತಿ' ಪ್ರಶಸ್ತಿ ದೊರೆತಿದೆ.

ಇವುಗಳಲ್ಲದೆ, ಜೆಕೋಸ್ಲಾವಿಕಿಯಾ, ಫಿಲಿಫೈನ್ಸ್, ಇರಾನ್ ದೇಶಗಳ ವಿಶೇಷ ಪ್ರಶಸ್ತಿ ಪ್ರದಾನಗಳಾಗಿವೆ. 1967ನೇ ಇಸವಿಯಲ್ಲಿ ಆಫ್ರಿಕಾದ ಸೆನೆಗಲ್ ದೇಶದಲ್ಲಿ ನಡೆದ ಡಾಕರ್ ಕಲಾಪ್ರದರ್ಶನದಲ್ಲಿ ಕಮಲಾದೇವಿ ಏಶಿಯಾ ಖಂಡದ ಏಕಮಾತ್ರ ಪ್ರತಿನಿಧಿಯಾಗಿದ್ದು ಅಲ್ಲಿ ಅವರನ್ನು ಸನ್ಮಾನಿಸಲಾಗಿತ್ತು.

ಇಂತಹ ಮಹತ್ವಪೂರ್ಣ ಪ್ರಶಸ್ತಿಗಳು ದೊರೆತಿದ್ದರೂ ಕಮಲಾದೇವಿ ನಿರ್ಲಿಪ್ತರಾಗಿಯೇ ಉಳಿದಿದ್ದರು. ಮ್ಯಾಗಸೆಸೆ ಅಂತಾರಾಷ್ಟ್ರೀಯ ಪ್ರಶಸ್ತಿ ಘೋಷಣೆಯಾದ ಸಂದರ್ಭದಲ್ಲಿ ಅವರ ಪರಿಚಯದ ಪತ್ರಿಕೋದ್ಯಮಿಯೊಬ್ಬರು ಅವರಿಗೆ ದೂರವಾಣಿ ಕರೆ ಮಾಡಿ ವಿಷಯ ತಿಳಿಸಿದಾಗ, "ಛೆ ! ಛೆ ! ಎಲ್ಲಿಯೋ ತಪ್ಪು ಸಂಭವಿಸಿರಬೇಕು ! ಯಾಕೆಂದರೆ ಇಷ್ಟು ಶ್ರೇಷ್ಠ ಪ್ರಶಸ್ತಿ ದೊಡ್ಡ ಮನುಷ್ಯರಿಗಷ್ಟೇ ಸಿಗುವುದು !" ಎಂಬುದು ಅವರ ತಕ್ಷಣದ ಪ್ರತಿಕ್ರಿಯೆಯಾಗಿತ್ತು.

ಮ್ಯಾಗಸೆಸೆ ಪ್ರಶಸ್ತಿ ಸ್ವೀಕಾರದ ಸಂದರ್ಭದಲ್ಲಿ ಸಭೆಯನ್ನು ಉದ್ದೇಶಿಸಿ ಅವರು ಆಡಿದ ಅಂತರಂಗದ ಎರಡು ಮಾತುಗಳು ಹೀಗಿದ್ದವು, "ನನಗೆ ದೊರೆತ ಈ ಗೌರವ, ಸಮೂಹ ಸಾಧನೆಗೆ ದೊರೆತ ಗೌರವ ! ಅದರ ಮುಖಂಡತ್ವಕ್ಕೆ ದೊರೆತ ಗೌರವವಲ್ಲವೆಂದು ನಾನು ತಿಳಿಯುತ್ತೇನೆ. ಪ್ರಶಸ್ತಿ ಪ್ರಾಪ್ತವಾಗುವುದು ಜನರ ವಿಶ್ವಾಸದಿಂದ. ಇದರಿಂದ ಸಮೂಹದಲ್ಲಿ ಕೆಲಸ ಮಾಡುವುದಕ್ಕೆ ಬಲ ಬರುತ್ತದೆ. ಯಾಕೆಂದರೆ, ವ್ಯಕ್ತಿಯ ಹುಸಿಬಿಂಬವು ಮುಖಂಡರೆನ್ನುವ ರೂಪದಲ್ಲಿ ಉಳಿಯುತ್ತದೆ ! ಪುಢಾರಿಯಾಗಿದ್ದ ಸಮಾಜಸೇವಕರು ಎಲ್ಲರಿಗಿಂತ ಹಿಂದೆ ಉಳಿದು, ಮಾರ್ಗದರ್ಶನ ನೀಡಬೇಕಾಗುತ್ತದೆ. ಇದು ಕಷ್ಟದ ಕೆಲಸ! ಸೇವೆಯೆಂದರೆ ಕರ್ತವ್ಯವೆಂಬ ಭಾವನೆಯನ್ನು ಬೆಳೆಸಿಕೊಂಡರೆ ಮಾತ್ರ ಜನರ ವಿಶ್ವಾಸ ದೊರೆಯುತ್ತದೆ ! ಜನರ ಪ್ರೀತಿ ಮತ್ತು ವಿಶ್ವಾಸ ಮಾತ್ರ ಅಮೂಲ್ಯ ದೇಣಿಗೆಯಾಗಿ ಕೊನೆಯವರೆಗೆ ಉಳಿಯುತ್ತದೆ !"

## ಅಧ್ಯಾಯ ೧೪

# ಹೇಗಿದ್ದರು, ನಮ್ಮ ಕಮಲಮ್ಮ?

ಕಮಲಾದೇವಿ ಅವರೊಂದಿಗೆ ಕೆಲಸ ಮಾಡಿದವರು, ಅವರ ಸಹಾಯದಿಂದ ಮುಂದೆ ಬಂದವರು, ಅವರ ಸಲಹೆ, ಸೂಚನೆಗಳಿಂದ ಲಾಭ ಪಡೆದವರು ದೇಶದಾದ್ಯಂತ ಹರಡಿಕೊಂಡಿದ್ದಾರೆ. ಅವರಲ್ಲಿ ಹೆಚ್ಚಿನವರಿಗೆ ಕಮಲಾದೇವಿ ಶಿಸ್ತಿನ ಸಿಪಾಯಿಯೇ ಆಗಿದ್ದರು. ಅವರ ಬಳಿ ಪೂಸಿ ಹೊಡೆಯುವುದು, ಅಗತ್ಯಕ್ಕಿಂತ ಹೆಚ್ಚು ಮಾತನಾಡುವುದು, ನೆವ ಹೇಳುವುದು, ಕೆಲಸ ಕಳ್ಳತನ ಇತ್ಯಾದಿ ನಡೆಯುತ್ತಿರಲಿಲ್ಲ! ಇದನ್ನು ತಿಳಿದುಕೊಂಡವರು ಅವರಿಗೆ ಹೆದರುತ್ತಿದ್ದರು. ಸ್ವಭಾವದಿಂದಲೇ ಅವರು ಮಿತಭಾಷಿ. ಅವರು ಚರ್ಚೆ, ತರ್ಕಗಳಿಗೆ ಅವಕಾಶ ನೀಡುತ್ತಿರಲಿಲ್ಲ. ಯಾವುದೇ ವ್ಯಕ್ತಿಯ ವರ್ತನೆ ಅಥವಾ ಕಾರ್ಯ ತಮ್ಮ ಮನಸ್ಸಿಗೆ ಹಿಡಿಸದಿದ್ದರೆ, ಮತ್ತೊಮ್ಮೆ ಅವರನ್ನು ಹಿಂದೆ ತಿರುಗಿ ಕೂಡಾ ನೋಡುತ್ತಿರಲಿಲ್ಲವಂತೆ. ಸಂಕ್ಷಿಪ್ತವಾಗಿ ಹೇಳುವುದಾದರೆ ಅವರನ್ನು ಗೌರವ, ವಿಶ್ವಾಸದಿಂದ ಕಾಣುವವರಲ್ಲಿ ಅವರ ಕುರಿತು ಭಯದ ಭಾವನೆಯನ್ನು ಹೊಂದಿದವರೇ ಜಾಸ್ತಿ ಇದ್ದರು.

ಆದರೆ ಅವರೊಂದಿಗೆ ಸಲಿಗೆ ಮತ್ತು ಆತ್ಮೀಯತೆ ಇದ್ದವರು ಅವರನ್ನು ಚೆನ್ನಾಗಿ ತಿಳಿದು ಕೊಂಡಿದ್ದರು. ಅವರ ಗಂಭೀರ ಮತ್ತು ಮಿತಭಾಷಿ ಮುಖವಾಡದ ಹಿಂದೆ ಸೌಮ್ಯವಾದ ಮಾತೃವಾತ್ಸಲ್ಯದ ಮನಸ್ಸು ಇತ್ತು. ಸರಳ ವಸ್ತುವಿನಲ್ಲಿ ಸೌಂದರ್ಯವನ್ನು ಕಂಡು ಖುಶಿ ಪಡುವ ಮುಗ್ಧ ಹೃದಯವಿತ್ತು. ಊಟ–ಉಪಹಾರ, ವೇಷಭೂಷಣ, ಸಜ್ಜಿಕೆಯ ಕುರಿತು ಅವರ ತಿಳಿವಳಿಕೆ ವೈವಿಧ್ಯಪೂರ್ಣವಾಗಿರುತ್ತಿತ್ತು. ಆದರೆ ಸಾದಾ, ಸಹಜ ಮತ್ತು ಅಗ್ಗದ ಸುಂದರ ಅಂಶ ಅವರ ಗಮನಕ್ಕೆ ಬರುತ್ತಿತ್ತು. ಅದರಿಂದ ಅವರು ಸಂತೋಷ ಅನುಭವಿಸುತ್ತಿದ್ದರು.

ಅವರು ಯಾವುದೇ ವಸ್ತು ಅಸಡ್ಡೆಗೆ ಒಳಗಾಗಲು ಬಿಡುತ್ತಿರಲಿಲ್ಲ. ಒಂದು ನೂಲಿನ ಎಳೆಯನ್ನು ಕೂಡ ಬಿಸಾಡುತ್ತಿರಲಿಲ್ಲ. ಹಳೆವಸ್ತುಗಳಾದರೂ ಅಷ್ಟೇ; ಒಂದು ಬದಿ ಖಾಲಿಯಿರುವ ಕಾಗದದ ಮೇಲೆ ಟಿಪ್ಪಣಿ ಮಾಡಿಕೊಳ್ಳುವುದು, ಬಂದ ಲಕ್ಕೋಟೆಯನ್ನು ತಿರುಗಿಸಿ ಉಪಯೋಗಿಸುವುದು ಅವರ ರೂಢಿಯಾಗಿತ್ತು. ಇದನ್ನು ಅವರು ತನ್ನ ಗುರು ಬಾಪೂಜಿಯವರಿಂದ ತಿಳಿದುಕೊಂಡಿರಬಹುದು! ಅವರಿಗೆ ಬಿಡುವು ದೊರೆಯುತ್ತಿದ್ದುದೇ ಕಡಿಮೆ! ಹಾಗಿದ್ದರೂ, ಸಮಯ ಸಿಕ್ಕಿದಾಗಲೆಲ್ಲಾ ಸೀರೆಯ ಅಂಚನ್ನು ತೆಗೆದು ರವಿಕೆಗಳಿಗೆ ಹಚ್ಚುವುದು, ಹಳೆಸೀರೆಯ ಅಂಚನ್ನು ವಿನ್ಯಾಸಗಳಿಲ್ಲದ ಸೀರೆಗೆ ಅಂಟಿಸುವುದನ್ನು ಸ್ವತಃ ತಮ್ಮ ಹೊಲಿಗೆ ಯಂತ್ರದಲ್ಲಿ ನಡೆಸುತ್ತಿದ್ದುದನ್ನು ಕಂಡ ಎಲ್. ಸಿ. ಜೈನ್ ಅದನ್ನು ನೆನಪಿಸಿಕೊಂಡಿದ್ದಾರೆ. ಪುರುಸೊತ್ತಿಲ್ಲದಿದ್ದರೆ, ರವಿಕೆಯ ಬಲತೋಳಿಗೆ ಮಾತ್ರ ಅಂಚನ್ನು ಹೊಲಿದು, ಇನ್ನೊಂದು ತೋಳನ್ನು ಸೆರಗಿನಿಂದ ಮುಚ್ಚಿಕೊಂಡು ಶೋಭಿಸುತ್ತಿದ್ದರು. ಈ ರೀತಿಯ ಸಾಧಾರಣ ಮನೆಗೆಲಸಗಳಲ್ಲಿ ಹೆಚ್ಚಿನ ಸಂತೋಷವನ್ನು ಹೊಂದುತ್ತಿದ್ದರು.

ಇಂದಿನ ಆಧುನಿಕ ರೀತಿಯನ್ನು ನೋಡಿದರೆ ಕೂಡಾ ಅವರು 'ಅತ್ಯುತ್ತಮ ಪೋಷಾಕು ಧರಿಸಿದ ಮಹಿಳೆ'ಯಾಗಿಯೇ ಪ್ರಸಿದ್ಧರಾಗಿದ್ದರು. ಯಾವಾಗಲೂ ಮ್ಯಾಚಿಂಗ್ ಸೀರೆ, ರವಿಕೆ, ಹಸ್ತಕೌಶಲ್ಯದ ಕೈಚೀಲ ಮತ್ತು ಆಭರಣ! ಆದರೆ ಅವು ಯಾವುದೂ ದುಬಾರಿಯದ್ದಾಗಲೀ, ಅಥವಾ ಹೆಚ್ಚು ಬೆಲೆಬಾಳುವುದಾಗಲೀ ಇರುತ್ತಿರಲಿಲ್ಲ. ಅವರು ಉಡುತ್ತಿದ್ದುದು ಸಾದಾ

ಹತ್ತಿಯ ಅಥವಾ ಕೈಮಗ್ಗದ ಸೀರೆ. ಹೆಚ್ಚೆಂದರೆ ಮೊಳಕಾಲ್ಮೂರಿನ ರೇಷ್ಮೆ ಸೀರೆ. ಆದರೆ ಅವು ಬಣ್ಣ ಮತ್ತು ವಿನ್ಯಾಸಗಳಲ್ಲಿ ಅಪರೂಪದ್ದಾಗಿದ್ದು, ಅವರ ಶ್ವೇತವರ್ಣ ಮತ್ತು ಸುಂದರ ವ್ಯಕ್ತಿತ್ವವನ್ನು ಎದ್ದು ಕಾಣಿಸುವಂತಿರುತ್ತಿದ್ದವು. ಅದರಲ್ಲಿನ ಕಲಾತ್ಮಕ ಅಭಿರುಚಿ ಮುಖ್ಯವಾಗಿರುತ್ತಿತ್ತು.

ಆಭರಣಗಳ ದೃಷ್ಟಿಯಿಂದ ಇಲ್ಲಿ ಒಂದು ವಿಚಾರವನ್ನು ಹೇಳಬೇಕು. ಅವರು ಬೆಳ್ಳಿ, ಮಣಿ, ಗಾಜು, ಅರಗು ಇತ್ಯಾದಿಗಳ ಕಂಠಹಾರ, ಮತ್ತು ಬಳೆಗಳನ್ನು ತೊಡುತ್ತಿದ್ದರು. ಇಂದು 'ಎತ್ನಿಕ್ ಜ್ಯುವೆಲ್ಲರಿ' ಎಂದು ಹೇಳಿಕೊಳ್ಳುವ ಇದೇ ರೀತಿಯ ವಿವಿಧ ವಿನ್ಯಾಸಗಳ ಅಗ್ಗದ ಮತ್ತು ಸರಿಜೋಡಿ ಆಭರಣಗಳು ಮಾರುಕಟ್ಟೆಗೆ ಬಂದಿವೆ. ಎಳೆ ವಯಸ್ಸಿನ ತರುಣಿಯರು ಬಹಳ ಉತ್ಸಾಹದಿಂದ ಅದನ್ನು ತೊಟ್ಟು ಸಂತೋಷಪಡುತ್ತಾರೆ. ಕೆಲವರು ಸ್ವತಃ ಮನೆಯಲ್ಲಿಯೇ ಅರಗಿನ ಮಣಿಯ ಅಲಂಕಾರದ ವಿನ್ಯಾಸವನ್ನು ಮಾಡುತ್ತಾರೆ! ಇಂದು ಫ್ಯಾಶನೇಬಲ್ ಎಂದು ಕರೆಯಿಸಿಕೊಳ್ಳುವ ಈ ಆಭರಣಗಳನ್ನು ಕಮಲಾದೇವಿಯವರು ನಲ್ವತ್ತು ವರ್ಷಗಳ ಹಿಂದೆಯೇ ಸ್ವತಃ ಧರಿಸುವುದನ್ನು ಪ್ರಾರಂಭಿಸಿದ್ದರು ಎಂಬುದನ್ನು ನಾವು ಗಮನಿಸ ಬೇಕಾಗುತ್ತದೆ. ಅವರು ಇದರಲ್ಲಿ ಅಗ್ರಶ್ರೇಣಿಯವರಾಗಿದ್ದರು. ಎತ್ನಿಕ್ ಅಥವಾ ವಿವಿಧ ಜನಾಂಗಗಳಲ್ಲಿ ಪ್ರಚಲಿತವಿದ್ದ ಆಭರಣಗಳನ್ನು ಶ್ರೇಷ್ಠವೆಂದು ತಿಳಿದು ಸಮಾಜದಲ್ಲಿ ಪ್ರಚಾರಕ್ಕೆ ತರುವುದು ಸಾಧ್ಯವಿದೆ.

ಕಮಲಾದೇವಿಯವರಿಗೆ ಹೂ ಹೆಚ್ಚು ಇಷ್ಟವಾಗುತ್ತಿತ್ತು. ಅವರ ತುರುಬಿನಲ್ಲಿ ಹೂ ಎಂದೂ ತಪ್ಪುತ್ತಿರಲಿಲ್ಲ. ಅದರಲ್ಲಿಯೂ ಮಲ್ಲಿಗೆ ಜಾತಿಯ ಜಾಜಿಮೊಗ್ಗು ಅವರಿಗೆ ಪ್ರಿಯವಾದುದು. ಫಿಲ್ಟರ್ ಕಾಫಿ ಬಹಳ ಇಷ್ಟವಂತೆ! ಕೊಂಕಣಿ ಅಡುಗೆ, ಮೆಂತೆ ದೋಸೆ, ಪೊಂಗಲ್, ಇಡ್ಲಿ, ಚಕ್ಕುಲಿ ಈ ರೀತಿಯ ತಿಂಡಿ ಅವರಿಗೆ ಸೇರುತ್ತಿತ್ತು. ಶುದ್ಧ ಶಾಕಾಹಾರಿಯಾಗಿದ್ದರಿಂದ ಅವರ ವಿಶ್ವ ಸಂಚಾರದಲ್ಲಿ ಎಷ್ಟೋ ಸಲ ಪೌಷ್ಟಿಕ ಆಹಾರದ ಕೊರತೆಯಿಂದ ಬಳಲಿದ್ದಾರೆ. ಅವರು ಬ್ರೆಡ್-ಜಾಮ್-ಬೆಣ್ಣೆ ಮತ್ತು ಕಾಫಿ ಸೇವಿಸಿ ವಾರಗಟ್ಟಳೆ ಇರಲು ಶಕ್ತರಿದ್ದರು.

ಅವರ ವೈಯಕ್ತಿಕ ಜೀವನ ನೋಡಿದರೆ, ಸಾಂಸಾರಿಕ ಸುಖ ಅವರ ಹಣೆಯಲ್ಲಿ ಬರೆದಿಲ್ಲವೆಂದು ಸ್ಪಷ್ಟವಾಗುತ್ತದೆ. ಅವರು ಬಾಲ್ಯದಲ್ಲಿಯೇ ತಮ್ಮ ತಂದೆಯನ್ನು ಕಳೆದು ಕೊಂಡರು. ನಂತರ ಬಾಲ್ಯವಿವಾಹ ನಡೆಯಿತು. ವರ್ಷ ಕಳೆಯುವುದರೊಳಗೆ ಗಂಡ ತೀರಿ ಕೊಂಡ. ಪ್ರೀತಿಯ ಸೋದರಿ ಕೂಡಾ ವಿಷಮಸಂಸಾರಕ್ಕೆ ಬಲಿಯಾದಳು. ಹರೀಂದ್ರನಾಥ್ ಚಟ್ಟೋಪಾಧ್ಯಾಯ ಅವರನ್ನು ಪ್ರೀತಿಸಿ ನಡೆಸಿದ ವಿವಾಹ ಹೆಚ್ಚು ದಿನ ಉಳಿಯಲಿಲ್ಲ. ಸಣ್ಣವಯಸ್ಸಿನಲ್ಲಿಯೇ ಗಾಂಧೀಜಿಯ ಪ್ರಭಾವಕ್ಕೆ ಒಳಗಾಗಿದ್ದ ಕಮಲಾದೇವಿಗೆ ಮದ್ಯಪಾನ, ಸ್ವಚ್ಛಂದ ಬದುಕಿನ ಕುರಿತು ತಿರಸ್ಕಾರವಿತ್ತು. ಅವರ ಅಕ್ಕ ಸಗುಣ ತನ್ನ ಪತಿಯ ಈ ದೌರ್ಬಲ್ಯದಿಂದಾಗಿ ಖಾಯಂ ದುಃಖಿಯಾಗಿದ್ದನ್ನು ಅವರು ಕಣ್ಣಾರೆ ಕಂಡಿದ್ದರು. ತನ್ನ ಖಾಸಗಿ ಬದುಕಿನಲ್ಲಿ ಕೂಡಾ ಇಷ್ಟವಿಲ್ಲದಿದ್ದರೂ, ಸಾರ್ವಜನಿಕ ರೂಪದಿಂದ ದುಃಖ, ಅವಮಾನ ಅನುಭವಿಸುವ ಸಂದರ್ಭ ಬರಬಹುದೆಂದು ಸ್ವತಃ ಕಮಲಾದೇವಿಯವರೇ ತಮ್ಮ ಕನಸಿನಲ್ಲಿ ಕೂಡಾ ಯೋಚಿಸಿರಲಿಲ್ಲವೆಂದು ಕಾಣುತ್ತದೆ!

ಹರೀಂದ್ರನಾಥ ಪ್ರತಿಭಾವಂತ ನಾಟಕಕಾರರು. ಕವಿ, ವಿದ್ವಾಂಸರು. ಆದರೆ ಗೃಹಸ್ಥ ಜೀವನಕ್ಕೆ ಬೇಕಾದ ಸಾದಾ ದರ್ಜೆಯ ಶಿಸ್ತು ಅವರಲ್ಲಿ ಇರಲಿಲ್ಲ! ಅವರಿಗೆ ಕುಡಿತ ಇಷ್ಟವಾಗುತ್ತಿತ್ತು. ಅವರಲ್ಲಿ ಹೆಂಗಸರ ದೌರ್ಬಲ್ಯ ಇತ್ತು. ತನ್ನದೆನ್ನುವ ವೃತ್ತಿ ಅಥವಾ ಉದ್ಯೋಗವಿರಲಿಲ್ಲ. ಇವುಗಳನ್ನೆಲ್ಲಾ ಕಮಲಾದೇವಿ ಸುಧಾರಿಸಿಕೊಂಡು ಹೋಗುತ್ತಿದ್ದರೋ ಏನೋ! ಆದರೆ

ಅವರು ಸಾರ್ವಜನಿಕ ಮುಖಂಡರಾದರು. ಸಾಂಸಾರಿಕ ಜೀವನ ದುರ್ಭರವಾಯಿತು. ಲಾಹೋರ್ ಕಾಂಗ್ರೆಸ್ (ಜೂನ್, 1930) ಕಮಲಾದೇವಿಯ ವಿಜಯದ ಕ್ಷಣವಾಗಿತ್ತು. ಅಧ್ಯಕ್ಷರಾಗಿ, ಯೂಸೂಫ್ ಮೆಹರಲ್ಲಿ ಜೊತೆಗೂಡಿ ಅವರು ಮಾಡಿದ ಯುವ ಅಧಿವೇಶನದ ಘೋಷಣೆ 'ಪೂರ್ಣ ಸ್ವರಾಜ್ಯ!'ದ ಕರಡನ್ನು ಕಾಂಗ್ರೆಸ್ ಸ್ವೀಕರಿಸಿಯಾಗಿತ್ತು. ಆದರೆ ಪ್ರವಾಸದಲ್ಲಿ ಹರೀಂದ್ರನಾಥ್ ಅವರು ಕುಡಿದು ಮಾಡಿದ ದಾಂಧಲೆ ಮತ್ತು ಅದರ ರಾಜಕೀಯ ಪ್ರತಿಕ್ರಿಯೆಯಿಂದ ಅವರು ಅಧಿವೇಶನದಲ್ಲಿ ಭಾಗವಹಿಸಲೇ ಇಲ್ಲ! ಅವರನ್ನು ಸೇವಾದಳದ ಮಹಿಳಾ ಬ್ರಿಗೇಡಿನ ಮುಖಂಡರಾಗಿ ಘೋಷಿಸಲಾಯಿತು. ಆ ಕಾರ್ಯಕ್ರಮದಲ್ಲಿ ಕೂಡಾ ಅವರು ಭಾಗವಹಿಸಲಿಲ್ಲ. ಈ ಕುರಿತು ಅಪಪ್ರಚಾರ ನಡೆಯದಂತೆ ಅವರು ಕಷ್ಟಪಡಬೇಕಾಯಿತು.

ಮಗ ರಾಮು, ಅಜ್ಜಿ ಗಿರಿಜಾಬಾಯಿ ಜೊತೆಯಲ್ಲಿದ್ದನು. ಆದರೆ ಕಮಲಾದೇವಿ ಜೈಲಿನಿಂದ ಹೊರಗೆ ಇದ್ದಾಗಲೂ, ಅವನ ತಂದೆ ಬಂದು ರಾಮನನ್ನು ಮತ್ತು ಅವನನ್ನು ನೋಡಿಕೊಳ್ಳುತ್ತಿದ್ದ ಸೀತಾಳನ್ನು ಕರೆದುಕೊಂಡು ಎಲ್ಲಿಗೋ ಹೋಗಿಬಿಡುತ್ತಿದ್ದರು. ಅವರನ್ನು ಹುಡುಕಿ ಹೋಗಿ ಮಗನ ಶಾಲಾ ಬದುಕನ್ನು ಮತ್ತೆ ಪ್ರಾರಂಭಿಸುವುದರಲ್ಲಿ ಕಮಲಾದೇವಿ ಸುಸ್ತಾಗಿಬಿಡುತ್ತಿದ್ದರು. ಇಂತಹ ಪರಿಸ್ಥಿತಿ ಪದೇ ಪದೇ ಕಾಣಿಸಿಕೊಳ್ಳುತ್ತಿದ್ದರಿಂದ ರಾಮನನ್ನು ದೂರದ ವಸತಿಶಾಲೆಗೆ ಸೇರಿಸಲಾಯಿತು. ಅಲ್ಲಿಗೂ ಅವನ ತಂದೆ ಹೋಗುತ್ತಿದ್ದರು. ತಾನು ಜೈಲಿಗೆ ಹೋದರೂ, ಸಾರ್ವಜನಿಕ ಜೀವನದಲ್ಲಿ ಮಗ್ನಳಾಗಿದ್ದರೂ ಮಗನ ಭವಿಷ್ಯವನ್ನು ಹರೀಂದ್ರನಾಥರು ನೋಡಿಕೊಳ್ಳುವರೆಂಬ ಕಮಲಾದೇವಿಯ ದೂರದ ಆಸೆ ಭಗ್ನವಾಯಿತು. ಪರಿಣಾಮ ಯಾವಾಗಲೂ ತಿರುವುಮುರುವಾಗಿರುತ್ತಿತ್ತು.

ಈ ನಡುವೆ ಹರೀಂದ್ರನಾಥ್ ಅಮೇರಿಕೆಗೆ ತೆರಳಿದರು. ಅಲ್ಲಿ ಒಬ್ಬ ಪ್ರಸಿದ್ಧ ನರ್ತಕಿ ಯೊಂದಿಗೆ ಅವರ ಪ್ರೇಮಸಂಬಂಧವಾಯಿತು. ನಂತರ ಅವರು ಭಾರತಕ್ಕೆ ಮರಳಿ ಬಂದರು. ಆದರೆ ಅವರ ಮಗುವನ್ನು ಹೆರಲಿದ್ದ ಆ ಮಹಿಳೆ ಭಾರತಕ್ಕೆ ಬಂದಾಗ, ಹರೀಂದ್ರನಾಥರು ಆ ಮಹಿಳೆಯೊಂದಿಗಿನ ತಮ್ಮ ಸಂಬಂಧವನ್ನು ಒಪ್ಪಲೇ ಇಲ್ಲ. ಇದ್ದಕ್ಕಿದ್ದಂತೆ ಅದೃಶ್ಯರಾಗಿ ಬಿಟ್ಟರು. ಜೈಲಿನಲ್ಲಿದ್ದ ಕಮಲಾದೇವಿಯವರು ಈ ಸುದ್ದಿ ತಿಳಿದು ಒಂಟಿಯಾಗಿ ಭಾರತಕ್ಕೆ ಬಂದಿಳಿದ ಆ ಮಹಿಳೆಯ ವಾಸದ ಮತ್ತು ಭವಿಷ್ಯದ ವ್ಯವಸ್ಥೆಯನ್ನು ತನ್ನ ಆಪ್ತ ಬಂಧುಗಳ ಮೂಲಕ ನಡೆಸಿದರು!

ಅವರ ಮನುಷ್ಯತ್ವ ಎಷ್ಟು ಉನ್ನತವಾದುದು ಎಂಬುದನ್ನು ಈ ನಿದರ್ಶನ ತೋರಿಸಿ ಕೊಡುತ್ತದೆ.

ಕೊನೆಗೆ ಗಾಂಧೀಜಿಯವರೊಂದಿಗೆ ಮಾತನಾಡಿದ ಕಮಲಾದೇವಿ ವಿವಾಹ ವಿಚ್ಛೇದನ ಮಾಡುವ ನಿರ್ಧಾರ ಕೈಗೊಂಡರು. ಇದು ಬಹಳ ಕಷ್ಟದಾಯಕವಾಯಿತು. ಸ್ವತಃ ಹರೀಂದ್ರನಾಥರಿಗೆ ವಿಚ್ಛೇದನ ಪಡೆಯುವ ಮನಸ್ಸು ಇರಲಿಲ್ಲ. ಅವರ ದೌರ್ಬಲ್ಯವನ್ನು ಹೊರತುಪಡಿಸಿದರೆ, ಕಮಲಾದೇವಿಯಲ್ಲಿ ಅವರಿಗೆ ಪ್ರೀತಿ ಇತ್ತು, ಗೌರವವಿತ್ತು. ಅವರಿಬ್ಬರ ಸ್ನೇಹ ಸಂಬಂಧ ಸಾಮಾನ್ಯ ದಂಪತಿಗಳ ವಿವಾಹ ಸಂಬಂಧಕ್ಕಿಂತ ಬೇರೆಯಾಗಿತ್ತಲ್ಲದೆ ಉನ್ನತ ಮಟ್ಟದ್ದಾಗಿತ್ತು. ಇದನ್ನು ಸಾಮಾನ್ಯರು ಅರ್ಥ ಮಾಡಿಕೊಳ್ಳುವುದು ಕಷ್ಟ. ಎಷ್ಟೋ ವರ್ಷಗಳ ನಂತರವೂ ಹರೀಂದ್ರನಾಥರು ಕಮಲಾದೇವಿಯವರನ್ನು ಭೇಟಿಯಾಗಲು ಬರುತ್ತಿದ್ದರು. ಅವರಿಗೆ ಇಷ್ಟವಾಗುವ ಊಟೋಪಹಾರವನ್ನು ಸ್ವತಃ ತಯಾರಿಸಿ ಕಮಲಾದೇವಿಯೇ ಬಡಿಸುತ್ತಿದ್ದರು. ವಿಶ್ರಾಂತಿ ತೆಗೆದುಕೊಳ್ಳುವಂತೆ ತಿಳಿಸುತ್ತಿದ್ದರು. ಇದರ

ಪ್ರತ್ಯಕ್ಷದರ್ಶಿಯಾಗಿದ್ದ ಎಲ್. ಸಿ. ಜೈನ್ ಹೇಳುತ್ತಾರೆ, "ಒಮ್ಮೆ ಅಪಘಾತವಾಗಿ ಕಮಲಾದೇವಿಯವರ ಕೈ ಮುರಿದಿತ್ತು. ಆಗ ಅವರನ್ನು ಭೇಟಿಯಾಗಲು ಹರೀಂದ್ರನಾಥರು ಬಂದಾಗ ಅವರಿಗಾದ ಸಂತೋಷ ಹೇಳತೀರದಾಗಿತ್ತು!"

ಬೆಳೆಯುತ್ತಿದ್ದಂತೆ ಮಗ ರಾಮನಿಗೆ ತಂದೆಯ ಗುಣ ಮತ್ತು ದೋಷ ಗೊತ್ತಾಗ ತೊಡಗಿತು. ಅದಕ್ಕಾಗಿಯೇ ಕಮಲಾದೇವಿ ವಿಚ್ಛೇದನ ತೆಗೆದುಕೊಳ್ಳುವ ನಿರ್ಧಾರ ಕೈಗೊಂಡರು. ವಿಚ್ಛೇದನ ಘೋಷಣೆಯಾಗಿ ನ್ಯಾಯಾಲಯ ಮಗನ ಹಕ್ಕನ್ನು ತಾಯಿಯ ವಶಕ್ಕೆ ಒಪ್ಪಿಸಿತ್ತು. ಆದರೆ ಅವನ ಶಿಕ್ಷಣ ಮುಖ್ಯವಾಗಿದ್ದುದರಿಂದ ಅವನನ್ನು ವಸತಿ ಶಾಲೆಗೆ ಸೇರಿಸ ಬೇಕಾಯಿತು. ತಾಯಿಯೊಂದಿಗೆ ಇರುವುದು ಕೂಡಾ ರಾಮನಿಗೆ ಸಾಧ್ಯವಾಗಲಿಲ್ಲ. ಕಮಲಾ ದೇವಿಯ ಆಗ್ರಹದ ಮೇರೆಗೆ ಮೊದಲಿನಿಂದಲೂ ಸಂಬಂಧವನ್ನು ಇಟ್ಟುಕೊಂಡಿದ್ದ ಸೀತಾಳ ಜೊತೆ ಹರೀಂದ್ರನಾಥರು ವಿವಾಹವಾದರೂ, ಹೊರಗಿನ ಆಕರ್ಷಣೆ ಕಡಿಮೆಯಾಗಲೇ ಇಲ್ಲ. ಈ ಹಂತದಲ್ಲಿ ರಾಮನಿಗೆ ತಂದೆಯ ದೌರ್ಬಲ್ಯದ ಅರಿವು ಉಂಟಾಗಲು ಪ್ರಾರಂಭವಾಯಿತು.

ರಾಮ ಸೀನಿಯರ್ ಕೇಂಬ್ರಿಡ್ಜ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಬಳಿಕ, ಅವನಿಗೆ ಇಷ್ಟವಾಗುವ ರೇಡಿಯೋ ಇಂಜಿನಿಯರಿಂಗ್ ಕ್ಷೇತ್ರದಲ್ಲಿ ಉಚ್ಚಶಿಕ್ಷಣವನ್ನು ಪಡೆಯುವುದಕ್ಕಾಗಿ ಕಮಲಾದೇವಿ ಅಮೇರಿಕೆಯಲ್ಲಿ ಸೂಕ್ತವ್ಯವಸ್ಥೆ ಮಾಡಿರುವುದನ್ನು ನಾವು ಕಂಡಿದ್ದೇವೆ. ಆಗಲೂ ಅವರು ಈ ಕುರಿತು ಹರೀಂದ್ರನಾಥರೊಂದಿಗೆ ವಿಚಾರವಿನಿಮಯ ನಡೆಸಿದ್ದರು.

ರಾಮನು ಅಮೇರಿಕೆಯಲ್ಲಿ ಡೋರಿಸ್ ಹೆಸರಿನ ಮಕ್ಕಳಿರುವ ವಿಚ್ಛೇದಿತ ಮಹಿಳೆಯನ್ನು ವಿವಾಹವಾದ. ಅವರಿಗೆ ನೀಲ್(ನೀಲಕಂಠ) ಎಂಬ ಮಗ ಮತ್ತು ನೀನಾ ಹೆಸರಿನ ಮಗಳು ಹುಟ್ಟಿದರು. ಕೆಲವೇ ವರ್ಷಗಳಲ್ಲಿ ಈ ಮದುವೆ ಮುರಿದುಬಿತ್ತು. ಆಮೇಲೆ ತನ್ನ ತಂದೆಗೆ ಪರಿಚಯವಿದ್ದ ಕುಟುಂಬದ ವಿವಾಹಿತ ಮಹಿಳೆಗೆ ವಿಚ್ಛೇದನ ಮಾಡಿಸಿ ರಾಮ ಅವಳನ್ನು ವಿವಾಹವಾದ. ಈ ಘಟನೆಯಿಂದ ಕಮಲಾದೇವಿಗೆ ಎಷ್ಟು ದುಃಖವಾಗಿರಬೇಡ! ಈ ಯಾವುದೇ ವಿಚಾರಗಳನ್ನು ಅವರು ತಮ್ಮ ಆತ್ಮಚರಿತ್ರೆಯಲ್ಲಿ ಬರೆದಿಲ್ಲ. ತಿಳಿದುಬಂದ ಸುದ್ದಿಯ ಪ್ರಕಾರ ಮೊದಲ ಸೊಸೆ ಡೋರಿಸ್ ಮತ್ತು ಎರಡನೆಯ ಸೊಸೆ ಮಾಯಾ ಇಬ್ಬರೂ ಕಮಲಾದೇವಿಗೆ ಆಪ್ತರಾಗಿಯೇ ಇದ್ದರು. ದೂರವಾದ ಎಷ್ಟೋ ವರ್ಷಗಳ ನಂತರ ಹಿರಿಯಾಕೆ ಕಮಲಾದೇವಿಯ ಮನೆಗೆ ಬಂದಿರುವುದನ್ನು ಎಲ್. ಸಿ. ಜೈನ್ ಕಂಡಿದ್ದಾರೆ. ವೈಯಕ್ತಿಕ ಇಷ್ಟಾನಿಷ್ಟಗಳಲ್ಲಿ ನಮಗೆ ಕಮಲಾದೇವಿಯವರ ಮಾನವೀಯ ಗುಣವೇ ಎದ್ದು ಕಾಣುತ್ತದೆ. ಅವರು ತಮ್ಮ ಸೊಸೆಗೆ ಅತ್ತೆಗಿಂತ ತಾಯಿಯ ಪ್ರೀತಿಯನ್ನು ನೀಡಿದ್ದಾರೆ.

ಕಮಲಾದೇವಿಗೆ ಅರವತ್ತು ವರ್ಷ ತುಂಬಿದಾಗ, ರೇಡಿಯೋ ಪ್ರಸಾರ ಭಾಷಣ ನೀಡುವಂತೆ ಕೋರಿಕೆ ಬಂದಿತ್ತು. ಅದರ ಶೀರ್ಷಿಕೆ ಹೀಗಿತ್ತು: *Ah if I were 21 again!* (ಮತ್ತೊಮ್ಮೆ ನಾನು ಇಪ್ಪತ್ತೊಂದು ವರ್ಷದವಳಾದರೆ!) ಈ ಭಾಷಣವನ್ನು ಓದಿದರೆ ಸಾಮಾನ್ಯ ಜನರಿಗೆ ಸಹಜವಾಗಿ ಸಿಗುವ ಬಿಡುವು, ಸಾಂಗತ್ಯ ಅಥವಾ ಸಣ್ಣಪುಟ್ಟ ಸಂತೋಷದ ಕ್ಷಣಗಳು ಕೂಡಾ ಅವರಿಗೆ ಸಿಗಲಿಲ್ಲ ಎಂಬುದನ್ನು ತಿಳಿದು ಮನಸ್ಸಿಗೆ ಬೇಸರವಾಗುತ್ತದೆ. ಆ ಭಾಷಣದ ಸಾರಾಂಶ ಹೀಗಿದೆ:

ನಾನು ಇಪ್ಪತ್ತೊಂದು ವರ್ಷದವಳಾದರೆ ಸಣ್ಣಸಣ್ಣ ವಿಚಾರಗಳನ್ನು ಇಷ್ಟಪಟ್ಟು ತನ್ನದಾಗಿಸಿಕೊಳ್ಳುತ್ತಿದ್ದೆ. ದೊಡ್ಡದೊಡ್ಡ ಘಟನೆಗಳನ್ನು ಅವುಗಳ ಪಾಡಿಗೆ ಹೋಗಲು ಬಿಡುತ್ತಿದ್ದೆ. ನಿಬಿಡ ಮತ್ತು ಧಾವಂತದ ಬದುಕಿನಿಂದ ದೂರ ಇರುತ್ತಿದ್ದೆ!

ಈಗ ಮನುಷ್ಯನ ಬದುಕಿನ ಐದಾರು ದಶಕಗಳು ಹೊರಳಿ ಹೋದ ಬಳಿಕ ಅದರ ನಡುವಿನಿಂದ ಕೆಲವು ಅಮೂಲ್ಯ ಕ್ಷಣಗಳು ಗೊತ್ತಿಲ್ಲದೆ ಜಾರಿ ಹೋದ ಅನುಭವ ಸ್ಪಷ್ಟವಾಗುತ್ತದೆ! ಆದರೂ, ಹಿಂದೆ ತಿರುಗಿ ನೋಡಿದಾಗ, ನನ್ನ ಧ್ಯೇಯ ಮತ್ತು ದೃಷ್ಟಿಕೋನ ವ್ಯತ್ಯಾಸ ಹೊಂದಿಲ್ಲವೆಂದು ಕಂಡುಬರುತ್ತದೆ. ಅವಸರ ನನಗೆ ಸೇರುವುದಿಲ್ಲ. ಮತ್ತೆ ಇಪ್ಪತ್ತು ವರ್ಷದ ಯುವತಿಯಾದರೆ ಪ್ರತಿಯೊಂದು ದಿನವನ್ನೂ ಆರಾಮವಾಗಿ, ಅರ್ಥಪೂರ್ಣವಾಗಿ ಕಳೆಯುವಂತೆ ನಾನು ಯೋಜನೆಯನ್ನು ಹಾಕಿಕೊಳ್ಳುತ್ತಿದ್ದೆ.

ಬೆಳಗ್ಗಿನ ಉಪಹಾರ, ಊಟದ ವ್ಯವಸ್ಥೆಯನ್ನು ಬಿಡುವಾಗಿ ಮಾಡಿಕೊಳ್ಳುತ್ತಿದ್ದೆ. ದೂರವಾಣಿಯ ಕಾಟ ಮತ್ತು ಬೇರೆ ತೊಂದರೆಗಳು ಬರದಂತೆ ನೋಡಿಕೊಳ್ಳುತ್ತಿದ್ದೆ. ನಾನು ಊಟವಿಲ್ಲದೆ ದಿನ ಕಳೆಯಬಲ್ಲೆ ಆದರೆ ಗಡಿಬಿಡಿಯಿಂದ ಗಪಗಪನೆ ನುಂಗುವುದು ಮಾತ್ರ ನನ್ನಿಂದ ಸಾಧ್ಯವಿಲ್ಲ.

ಓದಲು, ಬರೆಯಲು ಹೆಚ್ಚು ಸಮಯವನ್ನು ಉಳಿಸಿಕೊಳ್ಳುತ್ತಿದ್ದೆ. ಮಗನೊಂದಿಗೆ, ಕುಟುಂಬದವರೊಂದಿಗೆ, ಸ್ನೇಹಿತರೊಂದಿಗೆ ವಿರಾಮವಾಗಿ ಹರಟೆ ಹೊಡೆಯಲು, ತಮಾಷೆ ಮಾತನಾಡಲು ವೇಳೆ ಹೊಂದಿಸಿಕೊಳ್ಳುತ್ತಿದ್ದೆ. ಆಪ್ತರಿಗೆ ಉದ್ದುದ್ದದ ಪತ್ರ ಬರೆಯಲು, ಅವರಲ್ಲಿ ಮನಸ್ಸಿನ ವಿಚಾರಗಳನ್ನು ಹೇಳಿಕೊಳ್ಳಲು ಬಿಡುವಾಗುವಂತೆ ನೋಡಿಕೊಳ್ಳುತ್ತಿದ್ದೆ.

ಮನೆಯ ಬಾಲ್ಕನಿಗೆ ಹೋಗಿ ಸೂರ್ಯೋದಯ ಮತ್ತು ಚಂದ್ರೋದಯ ನೋಡುತ್ತಿದ್ದೆ. ನನ್ನ ಪ್ರೀತಿಯ ಹಾಡನ್ನು ಕೇಳುತ್ತಿದ್ದೆ. ಸಂಜೆ ಹೊತ್ತು ಒಂದೆರಡು ಟೆನ್ನಿಸ್ ಅಥವಾ ಶಟ್ಲ್‌ಕಾಕ್ ಆಟಗಳನ್ನು ಆಡುತ್ತಿದ್ದೆ. ಸಾಧ್ಯವಿರುವಷ್ಟು ಸಂಗೀತಪ್ರಕಾರ, ನಾಟಕಗಳನ್ನು ನೋಡುತ್ತಿದ್ದೆ, ನಾಟಕ ನಿರ್ದೇಶನ ಮಾಡುತ್ತಿದ್ದೆ, ಅದರಲ್ಲಿ ಭಾಗವಹಿಸುವುದೂ ಮಾಡುತ್ತಿದ್ದೆ. ಯಾಕೆಂದರೆ, ರಂಗಭೂಮಿ ಅಥವಾ ನಾಟಕದ ಪ್ರಕಾರವಿದೆಯಲ್ಲ, ಅದನ್ನು ತಿಳಿದಿರುವಂತಹ ನನ್ನಂತಹ ಅನೇಕ ಮಂದಿಗೆ ಅಭಿವ್ಯಕ್ತಿಯ ಬೇಕಾದಷ್ಟು ಆಯಾಮಗಳನ್ನು ಈ ಮಾಧ್ಯಮ ಸೂಚಿಸುತ್ತದೆ! ನನ್ನ ಮನಸ್ಸಿಗೆ ಹತ್ತಿರವಿರುವ ಮಾಧ್ಯಮವೆಂದರೆ ನಾಟಕ!

ಸಂಜೆ ಹೊತ್ತು ಊರಿಂದ ಹೊರಗೆ ಶಾಂತ ಪ್ರದೇಶದಲ್ಲಿ ತಿರುಗಾಡಲು, ದೋಣಿಯಲ್ಲಿ ತೇಲಿಕೊಂಡೇ ಇರಲು, ದೂರಪ್ರವಾಸಕ್ಕೆ ಹೋಗಲು ಅನುಕೂಲ ಮಾಡಿಕೊಳ್ಳುತ್ತಿದ್ದೆ.

ಈ ಆಶಯಗಳು ಸಣ್ಣಸಣ್ಣವುಗಳೆನ್ನುವುದು ನಿಜ. ಆದರೆ ಸಣ್ಣ ಆಶಯಗಳೇ ಕೋಮಲ, ನಾಜೂಕು, ಹಕ್ಕಿಯ ಹಾಗೆ ಇರುತ್ತವೆ! ಅವುಗಳಿಗೆ ಇರುವುದು ನಾಜೂಕಿನ ರೆಕ್ಕೆಗಳು. ಜೀವನದ ಕಠಿಣ, ಕರ್ಕಶ ಬೇಡಿಕೆಗಳು ಮತ್ತು ಕರ್ತವ್ಯದ ಧಾವಂತದಲ್ಲಿ ಈ ಸುಕೋಮಲ ಹಕ್ಕಿ ಹಾರಿಹೋಗದಂತೆ ಕೈಯಲ್ಲಿಯೇ ಇಟ್ಟುಕೊಳ್ಳುತ್ತಿದ್ದೆ.

ಈ ಮಾತುಗಳಿಂದ ಕಮಲಾದೇವಿಯವರ ಮನಸ್ಸು ಎಷ್ಟು ಸರಳ ಮತ್ತು ಅವರ ಮನದ ಆಶಯ ಎಷ್ಟು ಸಾದಾ ಎನ್ನುವ ಕಲ್ಪನೆ ಬರುತ್ತದೆ. ಇವತ್ತು ಪ್ರಾಯದವರಿಗೆ ಸುಲಭವಾಗಿ ಸಿಗುವ ವಿರಾಮದ ಸಮಯ ಅವರಿಗೆ ಎಂದೂ ದೊರೆತಿಲ್ಲ. ಓದುವುದಕ್ಕೆ, ಪತ್ರ ಬರೆಯುವುದಕ್ಕೆ, ಒಂದೆರಡು ಟೆನ್ನಿಸ್ ಪಂದ್ಯಗಳನ್ನು ಆಡುವುದಕ್ಕೆ, ವಾಕಿಂಗ್ ಹೋಗುವುದಕ್ಕೆ ಪುರುಸೊತ್ತಿಲ್ಲದೆ ಅವರ ಪ್ರಾಯ ಕಳೆಯಿತು. ಹತ್ತೊಂಭತ್ತು ವರ್ಷ ವಯಸ್ಸಿನಲ್ಲಿಯೇ ಅವರ ರಾಜಕೀಯ ಮತ್ತು ಸಾಮಾಜಿಕ ಬದುಕು ಪ್ರಾರಂಭವಾಯಿತು. ಒಂದೆರಡಲ್ಲ, ಅರವತ್ತು ವರ್ಷಗಳಿಗೂ ಮೀರಿ ಅವರು ಕ್ರಿಯಾತ್ಮಕ ರೀತಿಯಿಂದ ಬದುಕನ್ನು ನಡೆಸಿದರು. ಊಟ ಉಪಹಾರದ ಸಮಯದಲ್ಲಿ ಕೂಡಾ ದೂರವಾಣಿ ಕರೆಗಳು ಬರುತ್ತಿದ್ದವು. ಮತ್ತು ಅವುಗಳನ್ನು ಸ್ವತಃ ಅವರೇ ಸ್ವೀಕರಿಸುವ ಪದ್ಧತಿ ಕೂಡಾ ಇತ್ತು. ಅವರು ಕಾರ್ಯದರ್ಶಿ

ಅಥವಾ ಆಪ್ತ ಸಹಾಯಕರನ್ನು ಇಟ್ಟುಕೊಂಡಿರಲಿಲ್ಲ. ಪತ್ರಗಳನ್ನು ಕೈಯಿಂದ ಬರೆದು ಕಳುಹಿಸುತ್ತಿದ್ದರು. ಅತಿ ಮುಖ್ಯವಾದ ವಿಚಾರವೆಂದರೆ ಯಾರೇ ಪತ್ರ ಬರೆದರೂ ಅದಕ್ಕೆ ತಪ್ಪದೆ ಉತ್ತರ ಬರೆಯುತ್ತಿದ್ದರು.

ಅವರ ಸೇವಾಕ್ಷೇತ್ರ ಬಹಳ ವಿಶಾಲವಾಗಿದ್ದು, ಆದಷ್ಟು ಕೆಲಸವನ್ನು ಸ್ವತಃ ಮಾಡಿ ಕೊಳ್ಳುತ್ತಿದ್ದರು. ಅವರದು ಸಾರ್ವಜನಿಕ ಬದುಕಾಗಿದ್ದರೂ, ಅಂತರಂಗದಲ್ಲಿ ಅವರು ಏಕಾಂಗಿಯಾಗಿದ್ದರು. ಕೊನೆಯಲ್ಲಿ ಏಕಾಂಗಿಯಾಗಿಯೇ ದಿನಗಳನ್ನು ಕಳೆದ ಸಂದರ್ಭಗಳು ಹಲವು ಇದ್ದವು. ಸ್ವಾರಸ್ಯಕರವಾದ ಸುದ್ದಿಯೆಂದರೆ, ತಮ್ಮ ಕೊನೆಯ ದಿನಗಳಲ್ಲಿ ಅವರು ತಮ್ಮ ಆತ್ಮಚರಿತ್ರೆಯನ್ನು ಬರೆದರು. ಅದರ ಹೆಸರು *Inner Recesses And Outer Spaces.* ಇದನ್ನು ಸರಳವಾಗಿ ಅನುವಾದಿಸುವುದಾದರೆ 'ಆಂತರಿಕ ಮೂಲೆಗಳು ಮತ್ತು ಬಾಹ್ಯ ಅವಕಾಶಗಳು' ಎಂದು ಹೇಳಿದಂತಾಗುತ್ತದೆ. ಕಮಲಾದೇವಿಯವರ ವ್ಯಕ್ತಿತ್ವದ ಎರಡು ಪರಸ್ಪರ ವಿರೋಧಿ ಮುಖಗಳು ನೋಡುತ್ತಿವೆ ಎಂದು ಭಾಸವಾಗುತ್ತದೆ! ಮನಸ್ಸಿನ ಮೂಲೆಯಲ್ಲಿ ಇರುವಂತಹ, ಇವತ್ತಿನವರೆಗೆ ಅವರು ವ್ಯಕ್ತಪಡಿಸುವುದಕ್ಕೆ ಸಾಧ್ಯವಾಗದ ಸುದ್ದಿಗಳು ಮತ್ತು ಅವರು ತಲುಪಬೇಕಾದಷ್ಟು ಉನ್ನತಿಯನ್ನು ತಲುಪಿದ ಚಿತ್ರಣ ಅವರ ಈ ಗ್ರಂಥದಲ್ಲಿ ದೊರೆಯುತ್ತದೆ ಎಂದು ಅರ್ಥ ಮಾಡಿಕೊಳ್ಳಬಹುದು. ಸ್ಕೈ ಇಸ್ ದಿ ಲಿಮಿಟ್ ಎಂದು ಇಂಗ್ಲಿಷಿನಲ್ಲಿ ಒಂದು ಮಾತು ಇದೆ. ಮನುಷ್ಯನ ಪರಿಶ್ರಮಕ್ಕೆ, ಆಕಾಂಕ್ಷೆಗೆ, ಶೋಧಕ ಮತ್ತು ಇತರ ಗುಣಗಳಿಗೆ ಕೂಡಾ ಆಕಾಶವೇ ಮಿತಿಯಾಗಿದೆ. ಇದಕ್ಕೆ ಸೀಮೆ ಇಲ್ಲ. ಅವಕಾಶ ಮತ್ತು ಆಕಾಶವನ್ನು ಒಂದೇ ಅರ್ಥದಲ್ಲಿ ತೆಗೆದುಕೊಂಡರೆ ಕಮಲಾದೇವಿಯವರು ತಮ್ಮ ಮುಂದೆ ಬಹಳ ಎತ್ತರದ ಆದರ್ಶವನ್ನು ಇಟ್ಟುಕೊಂಡಿದ್ದರು ಮತ್ತು ಅದನ್ನು ತಲುಪಲು ಅವರು ಶಕ್ತರಾದರು ಎಂದು ತೋರುತ್ತದೆ.

ಅವರು ಚೆಲುವು ಅಥವಾ ಸೌಂದರ್ಯವನ್ನು ಆರಾಧಿಸುತ್ತಿದ್ದರು ಎನ್ನುವುದರಲ್ಲಿ ಯಾವ ಸಂದೇಹವೂ ಇಲ್ಲ. ಮನುಷ್ಯನ ಮನಸ್ಸಿನ ಮತ್ತು ಕರಣಗಳ ಸುಂದರತೆ ಅವರಿಗೆ ಬಹಳ ಇಷ್ಟವಾಗುತ್ತಿತ್ತು. ಬೇರೆಯವರಲ್ಲಿ ಈ ಎರಡೂ ಗುಣಗಳನ್ನು ಗುರುತಿಸಲು ಅವರು ಶಕ್ತರಾಗಿದ್ದರು. ಅದೇ ರೀತಿ ಬೆಳೆಯಲು ಅವರು ಪ್ರೋತ್ಸಾಹ ನೀಡುತ್ತಿದ್ದರು. ಚಿಕ್ಕ ವಯಸ್ಸಿನಿಂದಲೇ ಈ ಗುಣಗಳನ್ನು ಅವರು ಪ್ರಯತ್ನಪಟ್ಟು ತನ್ನಲ್ಲಿ ಬೆಳೆಸಿಕೊಂಡಿದ್ದರು. ಹರೀಂದ್ರನಾಥರ ಆಂತರಿಕ ಪ್ರತಿಭೆಯನ್ನು ಅವರು ಉತ್ತಮ ರೀತಿಯಿಂದ ಗುರುತಿಸಿದ್ದರು. ಅಪರೂಪದ ಅವರ ಜಾಣತನದಿಂದ ಅವರತ್ತ ಆಕರ್ಷಿತರಾಗಿದ್ದ ಕಮಲಾದೇವಿ, ಇದನ್ನು ಒಪ್ಪಿಕೊಂಡಿದ್ದರಲ್ಲದೆ, ಕೊನೆಯವರೆಗೆ ಇದಕ್ಕಾಗಿಯೇ ಅವರನ್ನು ಗೌರವದಿಂದ ಕಾಣುತ್ತಿದ್ದರು.

ಈ ದೇಶಕ್ಕೆ ಕಮಲಾದೇವಿಯವರ ಸೇವೆ ಹಲವು ರೀತಿಯಿಂದ ಸಂದಿದೆ. ಮುಖ್ಯವಾಗಿ ಅದನ್ನು ಆರು ಕ್ಷೇತ್ರಗಳಲ್ಲಿ ಗುರುತಿಸಬಹುದು: 1. ಸ್ವಾತಂತ್ರ್ಯ ಚಳವಳಿ 2. ಮಹಿಳೆಯರ ಕ್ಷೇಮಚಿಂತನೆ 3. ನಿರಾಶ್ರಿತರ ಪುನರ್ನಿವೇಶನ 4. ಸಹಕಾರಿ ಸಂಘ-ಸಂಸ್ಥೆಯ ಕಟ್ಟುವಿಕೆ 5. ಲಲಿತಕಲೆಗಳು 6. ಕರಕುಶಲ ಕಲೆ. ಅವರ ಸಮಕಾಲೀನರಲ್ಲಿ ಅವರಷ್ಟು ಪ್ರಸಿದ್ಧಿ ಹೊಂದಿದವರು ಬೇರೆ ಯಾರೂ ಇಲ್ಲ. ಎಲ್ಲಾ ಕ್ಷೇತ್ರಗಳಲ್ಲಿಯೂ ಅವರ ಪ್ರಯತ್ನ ಪ್ರಪ್ರಥಮ ವಾಗಿರುತ್ತಿತ್ತು. ಯಶಸ್ವಿ ಕೂಡಾ ಆಗಿತ್ತು. ಆದರೆ ಜನರು ಅವರ ಯೋಗ್ಯತೆಯನ್ನು ಸರಿಯಾದ ರೀತಿಯಿಂದ ತಿಳಿದುಕೊಂಡಿಲ್ಲ. ನಮ್ಮ ದೇಶದಲ್ಲಿ ರಾಜಕೀಯರಂಗಕ್ಕೆ ಅಕಾರಣವಾಗಿ ಸಲ್ಲುತ್ತಿರುವ ಮಹತ್ವವೇ ಇದಕ್ಕೆ ಕಾರಣ. ರಾಜಕಾರಣದಲ್ಲಿ ಮುಂಚೂಣಿಯಲ್ಲಿ ಇರುವ ಮಂದಿಯನ್ನು ಮಾತ್ರ ನಾವು ಮುಖಂಡರೆಂದು ತಿಳಿಯುತ್ತೇವೆ. ಕಮಲಾದೇವಿಯವರು

ರಾಜಕಾರಣ ಮತ್ತು ಅದರಿಂದ ದೊರೆಯುವ ಪ್ರತಿಷ್ಠೆ, ಪ್ರಸಿದ್ಧಿ ಮತ್ತು ಹಣವನ್ನು ಮನಃಪೂರ್ವಕವಾಗಿ ದೂರವಿಟ್ಟಿದ್ದರು. ಇದರಿಂದಾಗಿ, ಅವರ ದೇಣಿಗೆಯನ್ನು ಗುರುತಿಸಬೇಕಾದರೆ, ವಿಶೇಷ ಪ್ರಯತ್ನವನ್ನು ನಡೆಸಬೇಕಾಗುತ್ತದೆ.

ಅವರು ಪ್ರಾರಂಭಿಸಿದ ಹಲವಾರು ಕೆಲಸಗಳು, ಅರ್ಧದಲ್ಲಿಯೇ ನಿಂತುಬಿಟ್ಟಿವೆ. ಥಿಯೇಟರ್ ಕ್ರಾಫ್ಟ್ ಮ್ಯೂಸಿಯಂ ಜೀವ ಹಿಡಿದುಕೊಂಡಿದೆ ಅಷ್ಟೇ. ಸಹಕಾರಿ ಸಂಸ್ಥೆಗಳೆಲ್ಲಾ ವಿಕೃತರೂಪ ತಾಳಿ, ಸರಕಾರದ ಸಹಾಯದಿಂದ ಮೂಲ ಉದ್ದೇಶವೇ ಮಾಯವಾಗಿ, ಜನರ ಜವಾಬ್ದಾರಿ ಮರೆಯಲು ಕಾರಣವಾಗಿವೆ. ಪ್ರತಿಯೊಂದೂ ಜೀವನೋಪಯೋಗಿ ಕಾರ್ಯಗಳು ಸರಕಾರದ ಜವಾಬ್ದಾರಿ ಎನ್ನುವ ವಿಕೃತ ಸಮಾಜವಾದಿ ಆದರ್ಶವನ್ನು ಈ ಐವತ್ತು ವರ್ಷಗಳಲ್ಲಿ ಜನರು ರೂಢಿಸಿಕೊಂಡಿದ್ದಾರೆ. ಪ್ರತಿಯೊಬ್ಬ ವ್ಯಕ್ತಿಯ ಮತ್ತು ಸಂಘಟಿತ ರೂಪದ ಜನರ ಪ್ರಯತ್ನ ಪೂರ್ತಿಯಾಗಿ ಮರೆತುಹೋಗಿದೆ. ಪ್ರತಿಯೊಂದು ಕ್ಷೇತ್ರದಲ್ಲಿ ಲಂಚ ಮತ್ತು ಪ್ರಭಾವ ಬೆಳೆಯಲು ಯಾರು ? ಯಾಕೆ ? ಹೇಗೆ ? ಕಾರಣರಾಗಿದ್ದಾರೆ? ಎಂದು ಯೋಚಿಸಿದರೆ ಕಮಲಾದೇವಿ ಪ್ರಾರಂಭಿಸಿದ ಕೃಷಿ, ಕರಕುಶಲ ಕಾರ್ಯ, ಸಮಾಜ ಕಲ್ಯಾಣದ ಇತರ ಪ್ರಕಾರಗಳು ಹಿಂದೆ ಬೀಳಲು ಕಾರಣಗಳು ಗೊತ್ತಾಗುತ್ತವೆ. ಆದರೆ ತಳಹದಿ ಭದ್ರವಾಗಿ ಉಳಿದುಬಂದಿರುವ ಅವರ ದೇಣಿಗೆ ಕೂಡ ಇವೆ. ಅದರ ಕುರಿತು ಯೋಚಿಸೋಣ !

## ಅಧ್ಯಾಯ ೧೫

# ಕಮಲ ಬಾಡಿತು: ಪರಂಪರೆ ಉಳಿಯಿತು

(ನಿಧನ 29–10–1988)

ಕಮಲಾದೇವಿಯಂತಹ ಸತತ ಪರಿಶ್ರಮಿಗಳಿಗೆ ಹೊತ್ತು ಕಳೆಯುವುದು ಹೇಗೆ? ಎಂಬ ಸಮಸ್ಯೆ ಯಾವಾಗಲೂ ಬರುವುದಿಲ್ಲ. ಆದರೆ ದೇಹ ಮಾತ್ರ ದುರ್ಬಲವಾಗುತ್ತಾ ಹೋಗುತ್ತದೆ. ಪ್ರಾಯ ಸಂದ ಹಾಗೆ ಒಂದೊಂದೇ ಅವಯವ, ಕಣ್ಣು, ಕೈ–ಕಾಲು, ಕಿವಿ, ಜೀರ್ಣಶಕ್ತಿ ಕುಂಠಿತವಾಗುವುದು ಸಾಮಾನ್ಯ. ಕಮಲಾದೇವಿ ತನ್ನ ಎಂಭತ್ತೈದು ವರ್ಷಗಳ ಬಾಳ್ವೆಯುದ್ದಕ್ಕೂ ಸಕ್ರಿಯವಾಗಿದ್ದರು, ಜನರಿಗೆ ನೆರವಾಗುತ್ತಿದ್ದರು, ಬರೆಯುತ್ತಿದ್ದರು ಎನ್ನುವುದು ಆಚ್ಚರಿಯ ಸಂಗತಿ. ಪ್ರಸಿದ್ಧ ಪತ್ರಕರ್ತೆ, ಸ್ತ್ರೀವಾದಿ, ಇಂಗ್ಲಿಷ್ ಬರಹಗಾರ್ತಿ, ಡಾ. ಶಕುಂತಳಾ ನರಸಿಂಹನ್ ಅವರು ಕಮಲಾದೇವಿಯನ್ನು ಅವರ ಮರಣ ಹೊಂದುವ ಕೆಲವು ದಿನಗಳ ಮೊದಲು ಅವರ ಗೆಳತಿಯ ಮನೆಯಲ್ಲಿ ಭೇಟಿಯಾಗಿದ್ದರು. ಕಮಲಾದೇವಿಗೆ ಕಿವಿ ಮಂದವಾಗಿದೆ ಎಂಬ ಸುದ್ದಿ ಅವರಿಗೆ ತಲುಪಿತ್ತು. ಸಹಜವಾಗಿ ಮಾತನಾಡುತ್ತಿರುವಾಗ, "ನೀವು ಸಮಯವನ್ನು ಹೇಗೆ ಕಳೆಯುತ್ತೀರಿ ಅಮ್ಮ?" ಎಂದು ಶಕುಂತಳಾ ನರಸಿಂಹನ್ ದೊಡ್ಡ ಧ್ವನಿಯಲ್ಲಿ ಅವರನ್ನು ವಿಚಾರಿಸಿದರಂತೆ. ಶಕುಂತಳಾ ಅವರನ್ನು ಗಂಭೀರವಾಗಿ ದಿಟ್ಟಿಸಿ ನೋಡುತ್ತಾ, "ಮಾಡಬೇಕಾಗಿರುವ ಎಷ್ಟೋ ಕೆಲಸಗಳು ಬಾಕಿ ಇವೆ. ಸಮಯ ಸಾಕಾಗುತ್ತಿಲ್ಲ!" ಎಂದು ಕಮಲಾದೇವಿ ಉತ್ತರಿಸಿದರಂತೆ. ನಂತರ ಎದ್ದು ನಿಂತು, "ಇಷ್ಟು ಗಟ್ಟಿಯಾಗಿ ಮಾತನಾಡಬೇಕಾಗಿಲ್ಲ, ನನಗೆ ಕಿವಿ ಸ್ಪಷ್ಟವಾಗಿ ಕೇಳಿಸುತ್ತದೆ!" ಎಂದು ಕಮಲಾವಾಣಿ ಹೊರಬಿತ್ತಂತೆ. ಶಕುಂತಳಾ ಆಶ್ಚರ್ಯಚಕಿತರಾದರು. "ನಾನು (ಅವರ ಹಾಗೆ ಇದ್ದರೆ) ಇನ್ನೂ ಇಪ್ಪತ್ತು ವರ್ಷಗಳ ಕಾಲ ನಿರುಮ್ಮಳವಾಗಿ ಕೆಲಸ ಮಾಡಬಹುದು" ಎಂದು ಅವರಿಗೆ ಅನಿಸಿತಂತೆ.

ಕಮಲಾದೇವಿಯ ಆತ್ಮಚರಿತ್ರೆ ಅವರು ಸಾಯುವ ಎರಡು ವರ್ಷಗಳ ಮೊದಲು ಬಂದಿದೆ. ಅದರ ವಿಸ್ತಾರವನ್ನು ನೋಡಿದರೆ, ಅವರ ಅಗಾಧ ಸ್ಮರಣಶಕ್ತಿಯ ಕಲ್ಪನೆ ಬರುತ್ತದೆ. ಇಂದಿರಾಗಾಂಧಿಯವರು ವಿನಾಕಾರಣ ಅವರಿಗೆ ಅತ್ಯಂತ ಪ್ರಿಯವಾಗಿದ್ದ ಕರಕುಶಲ ಕಲೆಯ ಪುನಶ್ಚೇತನ ಕಾರ್ಯದಿಂದ ಅವರನ್ನು ದೂರಮಾಡಿದ್ದರು. ಅವರ ಕರಕುಶಲ ಮಂಡಳಿಯ ಅಧ್ಯಕ್ಷ ಹುದ್ದೆಯು ವೇತನರಹಿತ(ಗೌರವಹುದ್ದೆ)ವಾಗಿತ್ತು. ರಾಜಕೀಯದ್ದೂ ಆಗಿರಲಿಲ್ಲ. ಆದರೆ ಇಂದಿರಾಗಾಂಧಿಯವರು ತಮ್ಮ ಅಧಿಕಾರದ ಅವಧಿಯಲ್ಲಿ ತನ್ನ ಸಮೀಪವರ್ತಿಯಾಗಿದ್ದ ಇಬ್ಬರು ಮೂವರು ಮಹಿಳೆಯರನ್ನು ಬಿಟ್ಟರೆ, ಇತರ ಸಮರ್ಥ ಮತ್ತು ಬುದ್ಧಿವಂತ ಮಹಿಳೆಯರಿಗೆ ಕೆಲಸ ಮಾಡುವ ಅವಕಾಶವನ್ನು ನೀಡಿದ್ದು ಬಹಳ ಕಡಿಮೆ. ಅವರ ಇಷ್ಟಾನಿಷ್ಟಗಳು ಪ್ರತಿಯೊಬ್ಬರಿಗೂ ಪರಿಚಿತವೇ. ಅವರು ಕಮಲಾದೇವಿಯಂತಹ ಸ್ವತಂತ್ರ ವಿಚಾರವನ್ನು ಹೊಂದಿದ ಮಹಿಳೆಯನ್ನು ಸಹಿಸಿಕೊಳ್ಳುವುದಾದರೂ ಹೇಗೆ? ತುರ್ತು ಪರಿಸ್ಥಿತಿಯಲ್ಲಿ ಅವರನ್ನು ಜೈಲಿಗೆ ಕಳುಹಿಸದಿರುವುದೇ ದೊಡ್ಡದು! ಅದಕ್ಕೆ ಕಮಲಾದೇವಿ ರಾಜಕಾರಣದಿಂದ ದೂರವಿದ್ದು ಇಪ್ಪತ್ತು ವರ್ಷ ದಾಟಿದ್ದೇ ಕಾರಣ! ಈ ಅವಧಿಯಲ್ಲಿ ಅವರಿಗೆ ಸರಕಾರಿ ಕಿರಿಕಿರಿ ತಪ್ಪಿದ್ದಲ್ಲ. ಆದರೆ ಅವರು ತಮ್ಮ ಆತ್ಮಚರಿತ್ರೆಯಲ್ಲಿ ಯಾರ

ಕುರಿತೇ ಆಗಲೀ ಯಾವುದೇ ರೀತಿಯ ಬೇಸರ, ಉಪೇಕ್ಷೆ, ಕಹಿಯನ್ನು ತೋರಿಸಿದ್ದು ಇಲ್ಲ. ದೇಶವಿದೇಶದ ಎಷ್ಟೋ ಮುಖಂಡರ ಉಲ್ಲೇಖವನ್ನು ಅವರು ನಿರ್ಲಿಪ್ತ ರೀತಿಯಲ್ಲಿ ಮಾಡಿದ್ದಾರೆ. 'ವಸುದೈವ ಕುಟುಂಬಂ' ಎನ್ನುವ ಹಾಗೆ ಈ ವಿಶ್ವಸಂಚಾರಿಗೆ ಜಗತ್ತೇ ಕುಟುಂಬವಾಗಿ ಕಂಡಿದ್ದರೆ ಆಶ್ಚರ್ಯವೇನಿಲ್ಲ.

ಕರಕುಶಲ ಮಂಡಳಿಯಿಂದ ದೂರವಾದರೂ ಕೂಡಾ ಪ್ರತಿ ರಾಜ್ಯದಲ್ಲಿ ಅವರು ಪ್ರಾರಂಭಿಸಿದ ಕ್ರಾಫ್ಟ್ ಕೌನ್ಸಿಲ್‌ಗಳೊಂದಿಗೆ ಅವರ ಸಂಬಂಧ ಮುಂದುವರಿದಿತ್ತು. ಸಂಬಳವಿಲ್ಲದೆ ಕೆಲಸ ಮಾಡಬಲ್ಲ ಸಮರ್ಥ ಗೃಹಿಣಿಯರನ್ನು ಅವರು ಹುಡುಕಿ ತೆಗೆದಿದ್ದರು. ಅವರು ಅಧ್ಯಕ್ಷರಾದ ನಂತರ ಈ ಮಹಿಳೆಯರ ಮನೆಗಳಲ್ಲಿ ಅಥವಾ ಸಂಬಂಧಿಸಿದ ಸಂಸ್ಥೆಯಲ್ಲಿ ಅನೌಪಚಾರಿಕ ರೀತಿಯಲ್ಲಿ ಸಭೆ ನಡೆಯುತ್ತಿದ್ದವು. ಈ ಸಭೆಗಳಲ್ಲಿ ಕಮಲಾದೇವಿ ಹಾಜರಿರುತ್ತಿದ್ದರು. ನಿಶ್ಚಿತ ಕಾರ್ಯ ನಡೆಯುತ್ತಿತ್ತು. ಮದ್ರಾಸಿನ ಸೀತಾ ಕೃಷ್ಣನ್, ಅನಸೂಯಾ ಪಾವಂಜೆ, ಮುಂಬೈಯ ಹೋಮಿ ತಲ್ಯೆರಖಾನ್, ವಿಜಯಾ ರಾಜನ್, ಬೆಂಗಳೂರಿನ ವಿಮಲಾ ರಂಗಾಚಾರ್ ಮೊದಲಾದವರು ಕಮಲಾದೇವಿ ಪ್ರಾರಂಭಿಸಿದ ಕೆಲಸವನ್ನು ಮುಂದುವರಿಸಿದ್ದಾರೆ. ಜಗತ್ತಿನ ಬೇರೆ ಬೇರೆ ದೇಶಗಳ ಜನರು ಅವರಿಗೆ ಆಮಂತ್ರಣ ನೀಡಿ ಅವರ ಸಲಹೆಯನ್ನು ತೆಗೆದುಕೊಳ್ಳುತ್ತಿದ್ದರು. ಅವರು ವರ್ಲ್ಡ್ ಕ್ರಾಫ್ಟ್ ಕೌನ್ಸಿಲ್‌ನ ಉಪಾಧ್ಯಕ್ಷರಾಗಿದ್ದುದರಿಂದ ಯುನೆಸ್ಕೋ ವತಿಯಿಂದ ಅವರ ವಿಶ್ವಸಂಚಾರ ಚಲಾವಣೆಯಲ್ಲಿ ಇತ್ತು.

ಕ್ರಮೇಣ ಅವರ ತಿರುಗಾಟ ದೆಹಲಿ–ಮುಂಬೈ, ಕೆಲವೊಮ್ಮೆ ಬೆಂಗಳೂರು ಮತ್ತು ಊರಿಗೆ ಸೀಮಿತವಾಗತೊಡಗಿತು. ಯಾವಾಗಲೂ ಜನರ ನಡುವೆ ಸಕ್ರಿಯವಾಗಿ ಇರುತ್ತಿದ್ದವರು ಏಕಾಂಗಿಯಾಗಿ ದಿನಗಳನ್ನು ಕಳೆಯಬೇಕಾಗಿ ಬಂತು. ಆದರೆ ತಮ್ಮ ಸಮಯವನ್ನು ಅವರು ಬರೆವಣಿಗೆಗೆ ವಿನಿಯೋಗಿಸುತ್ತಿದ್ದರು. ಯಾರಾದರೂ ಸಹಾಯ ಮಾಡುತ್ತೇನೆ ಎಂದು ಹೇಳಿದರೆ, ನಮ್ರವಾಗಿ ಬೇಡವೆಂದು ಹೇಳುತ್ತಿದ್ದರು.

ಇಂತಹ ಮಹಿಳೆಯ ಅಂತ್ಯವನ್ನು ಪ್ರತ್ಯಕ್ಷ ಕಂಡವರು ಈಗ ಕರ್ನಾಟಕ ಕ್ರಾಫ್ಟ್ ಕೌನ್ಸಿಲ್‌ನ ಉಪಾಧ್ಯಕ್ಷರಾಗಿರುವ ಎಂ.ವಿ. ನಾರಾಯಣ ರಾವ್ ಅವರು. ಯು.ಎಸ್.ಎಸ್.ಆರ್. ನ ಹಸ್ತಕಲಾ ಪ್ರದರ್ಶನವನ್ನು ಆಯೋಜಿಸುವುದಕ್ಕಾಗಿ ಅವರು ಮದ್ರಾಸಿಗೆ ಹೋಗಿದ್ದರು. ಕಮಲಾದೇವಿಯವರು ದೆಹಲಿಯಿಂದ ಮುಂಬೈ ಶಿಲ್ಪ ಕೇಂದ್ರಕ್ಕೆ ಬಂದಿದ್ದರು. ಇದ್ದಕ್ಕಿದ್ದಂತೆ ಅವರ ಆರೋಗ್ಯ ಕೆಟ್ಟುಹೋಗಿ ಅವರು ಆಸ್ಪತ್ರೆ ಸೇರಿದ ಸುದ್ದಿ ನಾರಾಯಣ್ ಅವರಿಗೆ ಮುಟ್ಟಿತು. ಅವರು ತಕ್ಷಣ ಮುಂಬೈಗೆ ಹೊರಟುಬಂದರು. ಕಮಲಾದೇವಿಯನ್ನು ತುರ್ತು ನಿಗಾ ಕೇಂದ್ರದಲ್ಲಿ ಇಡಲಾಗಿತ್ತು. ಒಂದು ನಿಮಿಷಕ್ಕಿಂತ ಹೆಚ್ಚು ಯಾರಿಗೂ ಒಳಹೋಗಲು ಬಿಡುತ್ತಿರಲಿಲ್ಲ. ಅವರು ಆ ಒಂದು ನಿಮಿಷಕ್ಕಾಗಿ ಬೆಳಿಗ್ಗೆ ಮತ್ತು ಸಂಜೆ ಅಲ್ಲಿಗೆ ಹೋಗಿ ಕಮಲಾದೇವಿಯ ಆರೋಗ್ಯದ ಸುದ್ದಿಯನ್ನು ಉಳಿದ ಶಿಲ್ಪಕೇಂದ್ರಗಳಿಗೆ (ಕ್ರಾಫ್ಟ್ ಕೌನ್ಸಿಲ್) ತಿಳಿಸುತ್ತಿದ್ದರು. ಅಕ್ಟೋಬರ್ 29, 1988ರಂದು ಎಂದಿನಂತೆ ಅವರು ಆಸ್ಪತ್ರೆಗೆ ಹೋದರು. ಅವರನ್ನು ಒಳಗೆ ಹೋಗಲು ಅವಕಾಶ ನೀಡಿದ ವೈದ್ಯರು ತಿಳಿಸಿದ್ದು, 'ಒಂದೇ ನಿಮಿಷ! ಬಿಲ್‌ಕುಲ್ ಮಾತನಾಡಲೇಬಾರದು'. ಆಸ್ಪತ್ರೆಯ ಬಿಳಿಯುಡುಪಿನಲ್ಲಿ ಕೃಶವಾಗಿ ಸೋತು ಬಾಡಿದ ಕಮಲಾದೇವಿಯ ದೇಹವನ್ನು ಅವರು ನೋಡಿದರು. ಅವರು ಕೋಣೆಯನ್ನು ಪ್ರವೇಶಿಸಿದ ಕೂಡಲೇ ಕಮಲಾದೇವಿ ಕಣ್ಣುಬಿಟ್ಟರು. ಅದು ಎಂದಿನ ಹೊಳಪಿನ ತೀಕ್ಷ್ಣ ನೋಟವಾಗಿತ್ತು! "ಅಮ್ಮಾ, ನೀವು ಎಂದಿಗಿಂತ ಇವತ್ತು ಹೆಚ್ಚು ಸೌಖ್ಯವಿರುವಂತೆ

ಕಾಣುತ್ತೀರಿ" ರಾವ್ ಅವರ ಬಾಯಿಂದ ಉದ್ಗಾರ ಹೊರಟಿತು. "ಇವತ್ತಿನಷ್ಟು ನಿಶ್ಚಿಂತೆ ನನಗೆ ಯಾವಾಗಲೂ ಕಂಡಿದ್ದಿಲ್ಲ" ಕಮಲಾದೇವಿ ತಕ್ಷಣ ಉತ್ತರ ನೀಡಿದರು. ಒಳಪ್ರವೇಶಿಸಿದ ವೈದ್ಯರು ಸಿಟ್ಟಿನಿಂದ ನಾರಾಯಣ್ ರಾವ್ ಅವರನ್ನು ಎಳೆದುಕೊಂಡು ಹೊರಬಂದರು. ಅದು ಕಮಲಾದೇವಿಯವರ ಅಂತಿಮ ನುಡಿಯಾಗಿತ್ತು. ಅವರು ಮಧ್ಯಾಹ್ನ ಎರಡು ಗಂಟೆ ಸುಮಾರಿಗೆ ಶಾಶ್ವತವಾಗಿ ಕಣ್ಣುಮುಚ್ಚಿದರು.

ಕಮಲಾದೇವಿ ಅಗಲಿದರು. ಆದರೆ ಅವರು ಬಿಟ್ಟುಹೋಗಿರುವ ಪರಂಪರಾಗತ ಸ್ವತ್ತು ದೊಡ್ಡ ಪ್ರಮಾಣದಲ್ಲಿ ಹಿಂದೆ ಉಳಿಯಿತು. ಅದರಲ್ಲಿ ಕೆಲವನ್ನು ನೋಡೋಣ !

ಕರಕುಶಲ ಕಲೆಯಲ್ಲಿ ಅವರು ಸಾಧಿಸಿದ ಜನಜಾಗೃತಿ ದೊಡ್ಡ ಪ್ರಮಾಣದ್ದಾಗಿದೆ. ಉತ್ತಮ ಕಾರ್ಯ ನಿರ್ವಹಿಸಿದ ಸುಮಾರು 15 ಮಂದಿ ಕುಶಲಕರ್ಮಿ ಕಲಾವಿದರಿಗೆ ಪ್ರತಿವರ್ಷ ಗಣತಂತ್ರ ದಿನದಂದು ರಾಷ್ಟ್ರಪ್ರಶಸ್ತಿ ದೊರೆಯುತ್ತದೆ. ಅಸಡ್ಡೆಗೆ ಒಳಗಾದ ಹಸ್ತಕಲೆ ಮತ್ತೆ ಜೀವಂತವಾಯಿತು. ಅದರ ಕೃತಿಗಳಿಗೆ ಬೇಡಿಕೆ ಬಂತು. ಕಲಾವಿದರಿಗೆ ಗೌರವ ಪ್ರಾಪ್ತವಾಯಿತು. ಇಂದು ಅನೇಕ ಮನೆಗಳ ನಡುಕೋಣೆಯಲ್ಲಿ ಹಳೆಯ ಕಲಾವಸ್ತುಗಳು ಹೊಳಪಿನೊಂದಿಗೆ ಶೋಭಿಸುತ್ತಿವೆ. ಮಧ್ಯಮವರ್ಗಕ್ಕೆ ಕಂಚು, ಹಿತ್ತಾಳೆ , ತಾಮ್ರದ ಕಲಾತ್ಮಕ ವಸ್ತುಗಳ ಮೌಲ್ಯ ತಿಳಿಯಲಾರಂಭಿಸಿದೆ.

ಚಿಕ್ಕಪುಟ್ಟ ಊರುಗಳಲ್ಲಿ ಅದೆಷ್ಟೋ ಗುಡಿಕೈಗಾರಿಕೆಗಳು, ನಾರಿನ ಕೆಲಸಗಳು, ಚಾಪೆ, ಹಾಸುಗಂಬಳಿ, ಜಮಖಾನಿನ ಹೆಣಿಗೆ, ಕಸೂತಿ, ನೇಯ್ಗೆಯ ಕೆಲಸ ನಡೆಯುತ್ತಲೇ ಇದೆ. ದೇಶದಾದ್ಯಂತ ಲಕ್ಷಗಟ್ಟಳೆ ಮಹಿಳೆಯರು, ಪುರುಷರು ಕೈಕೆಲಸಗಳಲ್ಲಿ ನಿರತರಾಗಿದ್ದಾರೆ. ಅವರ ವೃತ್ತಿಯ ಪುನಶ್ಚೇತನಕ್ಕೆ ಕಾರಣರಾದವರು ಕಮಲಾದೇವಿ. ಪ್ರಾದೇಶಿಕ ಕೇಂದ್ರಗಳಿಂದ ಅವುಗಳ ಉಸ್ತುವಾರಿ, ಕಚ್ಚಾ ಸಾಮಾಗ್ರಿಗಳ ಪೂರೈಕೆ ಮತ್ತು ಪ್ರಶಸ್ತಿಯ ವ್ಯವಸ್ಥೆ ಇತ್ಯಾದಿ ನಡೆದದ್ದು ಅವರಿಂದಲೇ.

ಮಹಿಳೆಯರಲ್ಲಿ ಅವರ ಜನ್ಮಜಾತ ಹಕ್ಕುಗಳ ಕುರಿತು ಜಾಗೃತಿ ಮೂಡಿಸಿದ ಮೊದಲ ಮಹಿಳೆ ಕಮಲಾದೇವಿ. ಮೊದಲು ಪ್ರಸೂತಿ ರಜೆ, ಅನಾರೋಗ್ಯ ರಜೆ, ಕೆಲಸ ಮಾಡಲು ಬೇಕಾದ ಸವಲತ್ತುಗಳ ನಿರ್ಮಾಣ ಬಂತು. ನಂತರ ಅದು ಬೆಳೆಯಿತು.

ಭಾರತದಲ್ಲಿ ಪ್ರದರ್ಶನ ಕಲಾಪ್ರಕಾರ ಪ್ರಾರಂಭಗೊಳ್ಳುವುದಕ್ಕೆ, ಬೆಳೆಯುವುದಕ್ಕೆ ಕಮಲಾದೇವಿಯೇ ಕಾರಣರಾದರು. ಅದೀಗ ಜನಜೀವನದ ಭಾಗವಾಗಿದೆ. ಮಹಾವಿದ್ಯಾಲಯ-ವಿಶ್ವವಿದ್ಯಾಲಯಗಳಲ್ಲಿ ಕಲಿಯುವ, ಕಲಿಸುವ ವಿಷಯವಾಗಿದೆ.

ಅಸೆಂಬ್ಲಿ ಚುನಾವಣೆಯಲ್ಲಿ ಸ್ಪರ್ಧಿಸಿದ, ಉಪ್ಪಿನ ಸತ್ಯಾಗ್ರಹದಲ್ಲಿ ಬಂಧಿಯಾದ, ಸಣ್ಣವಯಸ್ಸಿನಲ್ಲಿ ಅಖಿಲಭಾರತ ಯುವ ಅಧಿವೇಶನದ ಅಧ್ಯಕ್ಷರಾದ, ಬಾಂಬ್ ದಾಳಿ ನಡೆಯುತ್ತಿರುವ ತೀರಾ ಅಪರಿಚಿತ ದೇಶದಲ್ಲಿ ಸಂಚರಿಸಿದ, ಕುಟುಂಬ ಯೋಜನೆಯ ಸಂಘಟಿತ ರೂಪದ ಪರಿಚಯವನ್ನು ಮೊದಲ ಬಾರಿಗೆ ಮಾಡಿಸಿದ, ಸಹಕಾರಿ ರೂಪದಲ್ಲಿ ಕೃಷಿ, ಉದ್ಯೋಗ, ಶಾಲೆ, ವ್ಯಾಪಾರ, ಆಸ್ಪತ್ರೆ ನಡೆಸುವುದು ಸಾಧ್ಯವೆಂದು ತೋರಿಸಿಕೊಟ್ಟ, ಯುವ ಕುಶಲಕರ್ಮಿಗಳ, ಅವರ ಮಕ್ಕಳ ಭವಿಷ್ಯವನ್ನು ರೂಪಿಸಿದ, ಪ್ರಥಮ ಮಹಿಳೆ ಕಮಲಾದೇವಿ ! ಎಂಬುದನ್ನು ನಾವು ನೆನಪಿಸಿಕೊಳ್ಳಬೇಕು.

ಅವರು ಮನಸ್ಸು ಮಾಡಿದರೆ, ಐವತ್ತು ವರ್ಷ ಹಿಂದೆಯೇ ರಾಷ್ಟ್ರದ ಪ್ರಪ್ರಥಮ ಮಹಿಳಾ ರಾಷ್ಟ್ರಪತಿ ಕೂಡಾ ಆಗುತ್ತಿದ್ದರು !

ಸಾಹಸಿಕಾರ್ಯಗಳ ಮೂಲ ವ್ಯಕ್ತಿ ಒಬ್ಬರೇ ಆಗಿರುತ್ತಾರೆ. ಅವರು ನೀಡಿದ

ಮಾರ್ಗದರ್ಶನದಲ್ಲಿ ಆಯಾಯ ಕೆಲಸವನ್ನು ನಡೆಸಿಕೊಂಡು ಹೋಗುವುದು ಬೇರೆಯವರ ಜವಾಬ್ದಾರಿಯಾಗಿರುತ್ತದೆ. ದುರ್ದೈವವಶಾತ್ ನಮ್ಮ ದೇಶದಲ್ಲಿ ಕಮಲಾದೇವಿಯವರ ಹಾಗೆ ನಿಸ್ವಾರ್ಥಿ, ನಿಸ್ಪೃಹ ರೀತಿಯಲ್ಲಿ ಕೆಲಸ ಮಾಡುವ ಆದರ್ಶವನ್ನು ತನ್ನದಾಗಿಸಿಕೊಂಡವರು ಬಹಳ ಕಡಿಮೆ! ಆದರೆ ಕಮಲಾದೇವಿಯವರ ಕಾರ್ಯಕ್ಷೇತ್ರ ವಿಶಾಲವಾದುದು ಮತ್ತು ವೈವಿಧ್ಯಪೂರ್ಣವಾಗಿದ್ದುದರಿಂದ ಅದರ ಬಹಳಷ್ಟು ಸಂಪ್ರದಾಯ ಮುಂದುವರಿದುಕೊಂಡು ಬಂದಿದೆ.

ಕಮಲಾದೇವಿಯವರ ಪರಂಪರೆ ಮುಂದುವರಿದಂತೆ ಕಾಣುವುದೇ ಎಂದು ಅವರೊಡನೆ ನಲ್ವತ್ತು ವರ್ಷ ಕೆಲಸ ಮಾಡಿಕೊಂಡಿದ್ದ ಗಾಂಧಿವಾದಿ ಅರ್ಥಶಾಸ್ತ್ರಜ್ಞ ಎಲ್.ಸಿ. ಜೈನ್ ಅವರನ್ನು ನಾನು ವಿಚಾರಿಸಿದೆ. ಅವರು ಹಿಂದಿನ ದಿನವಷ್ಟೇ ಬೆಂಗಳೂರಿನಲ್ಲಿ ಆಯೋಜಿಸ ಲಾಗಿದ್ದ ಬೋಡೋಲ್ಯಾಂಡ್ ಕರಕುಶಲ ಪ್ರದರ್ಶನಕ್ಕೆ ಹೋಗಿಬಂದಿದ್ದರು. ಅಸ್ಸಾಂ ಮತ್ತು ಮಾಯನ್ಮಾರ್ ಪ್ರದೇಶದ ನಡುವೆ ಇರುವ ಅತ್ಯಂತ ಶೋಷಿತ ಜನರನ್ನೊಳಗೊಂಡ ಭೂಮಿ ಬೋಡೋಲ್ಯಾಂಡ್. ಅಲ್ಲಿಯ ನಿರುದ್ಯೋಗಿ ತರುಣರಿಗೆ ಬೆಂಗಳೂರಿನ ಒಬ್ಬ ದಂಪತಿ ಮಾರ್ಗದರ್ಶನ ನೀಡಿ, ಅವರದೇ ಕರಕುಶಲ ಕಲೆಯ ಉತ್ತಮ ತರಬೇತಿ ದೊರೆಯುವಂತೆ ನೋಡಿದ್ದಾರೆ. ಅವರು ನೇಯ್ದ ಒಂದು ಹಾಸುಬಟ್ಟೆಯನ್ನು ಜೈನ್ ಅವರು ನನಗೆ ತೋರಿಸಿದರು. ಮೃದು ಮೃದುವಾದ ನೂಲಿನಿಂದ ಗುಲಾಬಿ, ಕೆಂಪು, ನೀಲಿ ವರ್ಣದ ಆಹ್ಲಾದಕರವಾದ ವಿನ್ಯಾಸದಲ್ಲಿ ಕೈಯಿಂದಲೇ ನೇಯ್ದ ಆ ಬಟ್ಟೆಯನ್ನು ನೋಡಿ ನಾನು ಆಶ್ಚರ್ಯಚಕಿತಳಾದೆ! ಒಂದೇ ಪ್ರತ್ಯಕ್ಷ ಉದಾಹರಣೆಯಿಂದ ಎಲ್.ಸಿ. ಜೈನ್ ಅವರು ನನ್ನ ಪ್ರಶ್ನೆಗೆ ಉತ್ತರ ನೀಡಿದರು.

"ಕಮಲಾದೇವಿ ಒಬ್ಬ ದಾರ್ಶನಿಕರಾಗಿದ್ದರು. ಗಾಂಧೀಜಿಗೆ ದೇಶದ ನಾಡಿಯನ್ನು ತಿಳಿದುಕೊಳ್ಳುವುದು ಸಾಧ್ಯವಿದ್ದ ಹಾಗೆ, ಕಮಲಾದೇವಿಗೆ ತನ್ನ ಸಮಾಜದ ನಾಡಿಯ ಧ್ವನಿ ಕೇಳಿಸುತ್ತಿತ್ತು! ಅವರು ಮಹಿಳೆಯರ, ನಿರಾಶ್ರಿತರ, ಕೂಲಿಕಾರರ, ಕುಶಲಕರ್ಮಿಗಳ ಸಂಕಷ್ಟವನ್ನು ಹತ್ತಿರದಿಂದಲೇ ಕಂಡಿದ್ದರು. ಅದನ್ನು ದೂರ ಮಾಡುವ ಉಪಾಯವನ್ನು ಬೇಗನೇ ಹುಡುಕಿಕೊಳ್ಳುತ್ತಿದ್ದರು, ಮತ್ತು ಆ ಉಪಾಯವನ್ನು ಉತ್ತಮ ರೀತಿಯಿಂದ ಕಾರ್ಯರೂಪಕ್ಕೆ ತರುತ್ತಿದ್ದರು. ಇಂದು ಆ ರೀತಿಯಲ್ಲಿ ಸುಧಾರಣೆ ತರುವ ಶಾಸನ ವ್ಯವಸ್ಥೆ ನಮ್ಮಲ್ಲಿ ಇಲ್ಲವಲ್ಲ" ಎಂದು ಶ್ರೀ ಜೈನ್ ಹೇಳಿದರು.

ಗಾಂಧಿತತ್ವದ ಪಾಲನೆ-ಪ್ರಚಾರವನ್ನು ನಡೆಸಿಕೊಂಡು ಬಂದಿರುವ ಎಲ್.ಸಿ. ಜೈನ್ ಅವರಿಗೆ, ಸಮುದಾಯ ಸೇವೆಗಾಗಿ 1989ನೇ ಸಾಲಿನ ಮ್ಯಾಗಸೆಸೆ ಪ್ರಶಸ್ತಿ ದೊರೆತಿದೆ. ಅವರು ಹೇಳುವ ಪ್ರಕಾರ, "ಕಮಲಾದೇವಿಯ ಸಲಹೆ-ಸೂಚನೆ ಯಾವಾಗಲೂ ಮೌಲಿಕ ವಾಗಿಯೇ ಇರುತ್ತಿತ್ತು.. ಅವರು ನನ್ನ ಮುಖಂಡರು, ಅವರು ಹಾಕಿಕೊಟ್ಟ ಸೂಚನೆಯಲ್ಲಿ ನಾನು ಕೆಲಸ ಮಾಡುತ್ತಾ ಉಳಿದೆ. ನಾನು ಅವರ ಒಬ್ಬ ಅನುಯಾಯಿ ಮಾತ್ರ. ಯಾವುದೇ ಸಮಸ್ಯೆಗೆ ಅವರು ಪರಿಹಾರವನ್ನು ಸೂಚಿಸುತ್ತಿದ್ದರು. ಜನಶಕ್ತಿಯಲ್ಲಿ ಅವರಿಗೆ ಬಹಳ ನಂಬಿಕೆ ಇತ್ತು."

ತನ್ನದಾಗಿ ಹಣ, ಆಸ್ತಿ ಯಾವುದನ್ನೂ ಕಮಲಾದೇವಿ ಇಟ್ಟುಕೊಂಡಿರಲಿಲ್ಲ. ಅವರು ಮ್ಯಾಗಸೆಸೆ ಬಹುಮಾನದ ಹಣ ಮತ್ತು ಒಂದೆಡೆ ಸಂಗ್ರಹಿಸಿದ್ದ ದೇಶ-ವಿದೇಶಗಳ ಕಲಾತ್ಮಕ ವಸ್ತುಗಳನ್ನೆಲ್ಲಾ ಮೆಹರೂಲಿಯ ಮ್ಯೂಸಿಯಂಗೆ ದಾನವಾಗಿ ನೀಡಿದ್ದರು. ಅವರು ಖರೀದಿಸಿದ್ದ, ಉಡುತ್ತಿದ್ದ ಸೀರೆಗಳು ಸುಂದರವಾಗಿ, ವಿಶಿಷ್ಟ ವಿನ್ಯಾಸಗಳನ್ನು ಹೊಂದಿದ್ದು,

ಅವುಗಳನ್ನು ದೇಶದ ವಿವಿಧ ಕರಕುಶಲ ಮ್ಯೂಸಿಯಂಗಳು ತಮ್ಮೊಳಗೆ ಹಂಚಿಕೊಂಡಿವೆ.

ಮಂಗಳೂರಿನ ಅವರ ದೊಡ್ಡ ಮನೆಯನ್ನು ಮಾರಿಬಂದ ಹಣವನ್ನು ಕೂಡಾ ಅವರು ದಾನರೂಪದಲ್ಲಿ ಸಮಾಜಕ್ಕೆ ನೀಡಿದ್ದಾರೆ.

ಸ್ವಾತಂತ್ರ್ಯ ಚಳವಳಿಯಲ್ಲಿ ಗಂಡು-ಹೆಣ್ಣು ಎಂಬ ಅಂತರವಿಲ್ಲದಿರುವಾಗ ಮುಖಂಡತ್ವ ಕಾರ್ಯ ನಿರ್ವಹಿಸುತ್ತಿತ್ತು. ಗಾಂಧೀಜಿಯವರು ಕೂಡಾ ಜೊತೆಗೂಡಿ ಕೆಲಸ ಮಾಡುವುದಕ್ಕೆ ಹೆಚ್ಚು ಪ್ರೋತ್ಸಾಹ ನೀಡಿದ್ದರು. ಆದರೆ ಭಾರತೀಯ ಸಮಾಜವು ಲಿಂಗಸಮಾನತೆಯನ್ನು ಸಹಿಸಿಕೊಳ್ಳುವುದಕ್ಕೆ ತಯಾರಿರಲಿಲ್ಲ (ಕೆಲವು ವಿಚಾರಗಳಲ್ಲಿ ಇವತ್ತಿಗೂ ಇಲ್ಲ). ಸುಂದರ ಮತ್ತು ಆಕರ್ಷಕ ವ್ಯಕ್ತಿತ್ವದ ಕಮಲಾದೇವಿಯವರು ದೇಶದ ಮುಂದಾಳುಗಳಾಗಿದ್ದ ತರುಣ, ವಿಧುರ ವ್ಯಕ್ತಿಗಳೊಂದಿಗೆ ಕೆಲಸ ಮಾಡುವ ಸಂದರ್ಭಗಳು ಇರುತ್ತಿದ್ದವು. ಜನರು ಅವರ ಕುರಿತು ರಂಜಕ ರೀತಿಯಲ್ಲಿ ಮಾತನಾಡುವುದನ್ನು ಪ್ರಾರಂಭಿಸಿದರು. ಪತ್ರ ಬರೆದು ಗಾಂಧೀಜಿಗೆ ತಿಳಿಸಿದ್ದರು ಕೂಡಾ. ಕಮಲಾದೇವಿಯನ್ನು ತಿಳಿದುಕೊಂಡಿದ್ದ ಗಾಂಧೀಜಿ ಆ ಪತ್ರವನ್ನು ಓದಲು ಅವರಿಗೆ ನೀಡಿದ್ದರು. ಆಗ ಕಮಲಾದೇವಿ ಹರೀಂದ್ರನಾಥರಿಂದ ದೂರ ಸರಿದಿದ್ದರು. ಗಾಂಧೀಜಿಯವರೊಂದಿಗೆ ಈ ಕುರಿತು ಸಮಾಲೋಚನೆಯನ್ನು ನಡೆಸಿಯೇ ಅವರು ವಿಚ್ಛೇದನದ ನಿರ್ಧಾರವನ್ನು ಕೈಗೊಂಡಿದ್ದರು. ಕಮಲಾದೇವಿ ಹೇಳಿದರು, “ನಾನು ಆ ಮುಖಂಡನನ್ನು ಲಗ್ನವಾಗುವುದಕ್ಕಾಗಿಯೇ ವಿಚ್ಛೇದನ ಪಡೆದುಕೊಂಡೆ ಎಂದು ಹೇಳುತ್ತಾರೆ. ಈ ವದಂತಿ ಸುಳ್ಳೆಂಬುದನ್ನು ಸಮಯವೇ ನಿರ್ಧರಿಸಲಿದೆ”

ಅವರ ಕುರಿತು ಇನ್ನೂ ಕೆಲವು ಗಾಳಿಮಾತುಗಳಿದ್ದವು. ತನ್ನ ಅಂತರಾತ್ಮದ ಧ್ವನಿಗೆ ಗಮನ ನೀಡುವ ವ್ಯಕ್ತಿ ಜಾಗ್ರತನಾಗಿರುತ್ತಾನೆ, ತಪ್ಪು ಮಾಡುವುದಿಲ್ಲ ಎಂಬ ಮಹಾತ್ಮರ ಮಾತಿನಲ್ಲಿ ಕಮಲಾದೇವಿ ವಿಶ್ವಾಸವನ್ನಿಟ್ಟರು. ಅದೇ ರೀತಿ ಅವರು ನಡೆದುಕೊಂಡರು ಕೂಡಾ.

ಮಹಿಳೆಯರ ಉದ್ಧಾರಕ್ಕಾಗಿ ನಿರಂತರವಾಗಿ ಶ್ರಮ ಪಟ್ಟಂತಹ, ಸ್ತ್ರೀ-ಪುರುಷ ಸಮಾನತೆಗಾಗಿ ಕೆಲಸ ಮಾಡಿದ ಈ ಹಿರಿಯ ಮಹಿಳೆಯ ಒಂದು ಮುಖ್ಯ ಅಭಿಪ್ರಾಯವನ್ನು ಇಲ್ಲಿ ಹೇಳಲೇಬೇಕಾಗಿದೆ. ಅವರು ಮಹಿಳಾ ಮೀಸಲಾತಿ ನಿಯಮದ ವಿರೋಧಿಯಾಗಿದ್ದರು! ಇದು ಈಗಿನ ಜ್ವಲಂತ ಸಮಸ್ಯೆಯಾಗಿದೆ. ಅಸೆಂಬ್ಲಿ ಮತ್ತು ಸಂಸತ್ತಿನಲ್ಲಿ ಮಹಿಳೆಯರಿಗೆ ಶೇಕಡಾ 33 ಮೀಸಲಾತಿ ಸಿಗಬೇಕೆಂದು ಚಳವಳಿ ಪ್ರಾರಂಭ ವಾಗಿದೆ. ಈ ಕುರಿತು ಕಮಲಾದೇವಿಯ ವಿಚಾರವನ್ನು ತಿಳಿದುಕೊಳ್ಳೋಣ. ಬೆಂಗಳೂರಿನ ಎನ್.ಎಮ್.ಕೆ.ಆರ್.ವಿ. ಕಾಲೇಜಿನ ಪ್ರಾಂಶುಪಾಲರಾಗಿದ್ದ (ದಿ) ಚಿ.ನ. ಮಂಗಳಾ ಅವರಿಗೆ 4.9.1987ರಂದು ಬರೆದ ಪತ್ರ ಆ ಕಾಲೇಜಿನ 'ಸಮನ್ವಿತ' ಪತ್ರಿಕೆಯಲ್ಲಿ ಪ್ರಕಟವಾಗಿದೆ.

“ರಾಜಕಾರಣದಲ್ಲಿ ಅಗತ್ಯವಿಲ್ಲದೆ ಲಿಂಗಭೇದಕ್ಕೆ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಇದರಿಂದ ಚಿಂತೆಗೆ ಅವಕಾಶವಾಗಿದೆ. ಸ್ವಾತಂತ್ರ್ಯ ಹೋರಾಟದ ದಿನಗಳಲ್ಲಿ ತಪ್ಪಿಕೂಡಾ ಭೇದ ಗಮನಕ್ಕೆ ಬರುತ್ತಿರಲಿಲ್ಲ...ಹಿಂದೆ ಮಹಿಳೆಯರು, ಪುರುಷರು ಒಟ್ಟಾಗಿ ನಾಗರಿಕ ಹಕ್ಕುಗಳಿಗಾಗಿ ಹೋರಾಟ ನಡೆಸುತ್ತಿದ್ದರು. ಅವರು ನಾವು ಮಹಿಳೆಯರು ಎಂದು ವಿಶೇಷ ಸ್ಥಾನ-ಮಾನ ಬೇಡಿದ್ದಿಲ್ಲ. ಈಗ ಬೇಡುತ್ತಿದ್ದಾರೆ. ಇದರ ಅರ್ಥ ನಾವು ಮಹಿಳೆಯರಾಗಿ ದುರ್ಬಲರು. ಮತ್ತು ದುರ್ಬಲರೆಂದು ಸಾರ್ವಜನಿಕವಾಗಿ ಗುರುತಿಸಿಕೊಳ್ಳಿ ಎಂದು ಘೋಷಿಸಿದ ಹಾಗಾಗುತ್ತದೆ... ನಮ್ಮ ದೇಶದಲ್ಲಿ ಮಹಿಳೆಯರ ಹಾಗೆಯೇ ಅವಕಾಶ ವಂಚಿತ ಜನಾಂಗದವರು ಬೇಕಾದಷ್ಟು ಮಂದಿ ಇದ್ದಾರೆ. ಅವರ ಪ್ರಗತಿಯ ಕಡೆಗೆ ಕೂಡಾ ಗಮನವನ್ನು ಹರಿಸಬೇಕಾಗಿದೆ... ನಮ್ಮ ದೋಷಪೂರ್ಣ ಸಮಾಜ ಇದಕ್ಕೆ ಕಾರಣವಾಗಿದೆ.

ಮೊದಲು ಅದರ ನಿರ್ಮೂಲನ ಆಗಬೇಕಾಗಿದೆ... ಕೆಲವು ಮಹಿಳೆಯರು ಉಚ್ಚ ಪದವಿಯನ್ನು ತಲುಪಿದ್ದಾರೆ. ಇದರ ಅರ್ಥ ಎಲ್ಲಾ ಮಹಿಳೆಯರ ಸ್ಥಾನಮಾನ ಉತ್ತಮ ರೀತಿಯಿಂದ ಸುಧಾರಿಸಿದೆ ಎಂದು ಹೇಳುವುದು ಸಾಧ್ಯವಿಲ್ಲ. ಸ್ವಾತಂತ್ರ್ಯ ಆಂದೋಲನದ ಸಮಯದಲ್ಲಿಯೇ ಮಹಿಳಾ ಆಂದೋಲನವು ವಿಶಾಲ ತಳಹದಿಯ ಮೇಲೆ ರೂಪಿತವಾಗಿದೆ. ಅದು ಗುಣಾತ್ಮಕವಾಗಿತ್ತು. ಅದೇ ದೃಷ್ಟಿಕೋನ ಮತ್ತು ಧ್ಯೇಯವನ್ನು ಮುಂದುವರಿಸಿಕೊಂಡು ಹೋಗುವುದಕ್ಕೆ ವಿಶೇಷವಾದ ಮಾಹಿತಿ–ಶಿಕ್ಷಣದ ಅಗತ್ಯವಿದೆ"

ಭಾರತೀಯ ಮಹಿಳೆಯರ ಸರ್ವತೋಮುಖ ಅಭಿವೃದ್ಧಿ ಆಗಲಿಲ್ಲವೆಂಬ ಕಳಕಳಿ ಕಮಲಾದೇವಿ ಅವರಿಗೆ ಕೊನೆಯವರೆಗೆ ಇತ್ತು.

ಕಮಲಾದೇವಿಯವರ ಬಹುಮುಖ ಪ್ರತಿಭೆಯಲ್ಲಿ ಅವರ ಲೇಖನ–ಸಾಮರ್ಥ್ಯ ಕೂಡಾ ಬರುತ್ತದೆ. ಅವರು 18 ಗ್ರಂಥಗಳನ್ನು ಬರೆದಿದ್ದಾರೆ. ನೂರಾರು ಲೇಖನಗಳು, ಕರಪತ್ರಗಳನ್ನು ಬರೆದಿದ್ದಾರೆ; ಅವರ ಆತ್ಮಚರಿತ್ರೆಗೆ ಪ್ರಸ್ತಾವನೆ ಬರೆದಿರುವ ಪ್ರಸಿದ್ಧ ಇಂಗ್ಲಿಷ್ ಲೇಖಕ ರಾಜಾರಾವ್ ಅವರು, ಕಮಲಾದೇವಿಯವರ ಬರವಣಿಗೆಯನ್ನು ಹೊಗಳಿದ್ದಾರೆ.

ಇಂಗ್ಲಿಷ್ ಪ್ರಾಧ್ಯಾಪಕ, ಕುಲಪತಿ, ಮತ್ತು ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ಡಾ.ವಿ.ಕೆ. ಗೋಕಾಕ್ ಅವರು ಎರಡೇ ವಾಕ್ಯಗಳಲ್ಲಿ ಅವರ ವ್ಯಕ್ತಿತ್ವವನ್ನು ನಿರೂಪಿಸಿದ್ದಾರೆ "ಅವರ ಆತ್ಮಕಥನದಿಂದ ಅವರ ಜೀವನ, ವೀರ, ಕರುಣ, ಮತ್ತು ಶಾಂತರಸದಿಂದ ತುಂಬಿತ್ತು ಎಂದು ತಿಳಿದುಬರುತ್ತದೆ. ರಾಷ್ಟ್ರಮಟ್ಟದಲ್ಲಿ ಕೀರ್ತಿ ಹೊಂದಿದ ಕರ್ನಾಟಕದ ಮಹಿಳೆಯರು ಬಹಳ ಕಡಿಮೆ. ಇಂತಹ ವಿರಳ ವ್ಯಕ್ತಿ ಕಮಲಾದೇವಿ".

ಕಮಲಾದೇವಿಗೆ ಬಹಳ ಪ್ರೀತಿಪಾತ್ರವಾಗಿದ್ದ ನಾಟಕರಂಗದ ನವರಸದಿಂದ ಅವರಿಗೆ ಶೋಭಿಸುವ ರಸಗಳ ಉಲ್ಲೇಖನದ ಮೂಲಕ ವಿದ್ವಾಂಸರಾದ ಗೋಕಾಕ್ ಅವರು ಸರಿಯಾದ ಮೆಚ್ಚುಗೆಯನ್ನೇ ಅವರಿಗೆ ನೀಡಿದ್ದಾರೆ. ಅವರ ರಾಷ್ಟ್ರಮಟ್ಟದ ಪಾತ್ರವನ್ನು ಕೂಡಾ ಸಮರ್ಪಕವಾಗಿ ಗುರುತಿಸಿದ್ದಾರೆ. ನಮ್ಮವರೇ ಆಗಿ, ನಮ್ಮ ನೆಲದ ವಿಶೇಷ ಪ್ರೀತಿಯನ್ನು ಉಳಿಸಿಕೊಂಡು, ಅಂತಾರಾಷ್ಟ್ರೀಯ ಮಟ್ಟವನ್ನು ತಲುಪಿದ ಈ ಹಿರಿಯ ತಾಯಿ ಬಹಳ ವಿಚಾರಗಳಲ್ಲಿ ಮುಂದಿನ ಪೀಳಿಗೆಗೆ ಆದರ್ಶವನ್ನು ಹಿಂದೆ ಬಿಟ್ಟು ಹೋಗಿದ್ದಾರೆ. ಅವರು ಒಂದೊಂದು ಕ್ಷೇತ್ರದಲ್ಲಿ ಸಾಧಿಸಿದ ಉನ್ನತಿಯಿಂದಾಗಿ ಕನಿಷ್ಠ ಒಂದು ಕ್ಷೇತ್ರದಲ್ಲಿಯಾದರೂ ಏನನ್ನಾದರೂ ಸಾಧಿಸಬೇಕು ಎನ್ನುವವರಿಗೆ ಕೂಡಾ ಅವರು ಮಾದರಿಯಾಗಿದ್ದಾರೆ. ತಾನು ಕಾರ್ಯ ನಡೆಸಿದ ಎಲ್ಲಾ ಕ್ಷೇತ್ರಗಳಲ್ಲಿ ಉನ್ನತಸ್ಥಾನವನ್ನು ತಲುಪಿದ್ದರು ಎಂಬ ಸತ್ಯ, ಸ್ವತ್ತಿನ ರೂಪದಲ್ಲಿ ಅವರು ಹಿಂದೆ ಬಿಟ್ಟುಹೋಗಿದ್ದಾರೆ.

# ಕಮಲಾದೇವಿಯವರ ಬದುಕಿನ ಪ್ರಮುಖ ಘಟ್ಟಗಳು

1. 1903, ಎಪ್ರಿಲ್, 3 : ಜನನ, ಮಂಗಳೂರಿನಲ್ಲಿ. ತಾಯಿ: ಗಿರಿಜಾಬಾಯಿ ತಂದೆ: ಅನಂತಯ್ಯ ಧಾರೇಶ್ವರ್
2. 1910 : ತಂದೆಯ ನಿಧನ
3. 1917 : ನಯಂಪಳ್ಳಿ ಕೃಷ್ಣರಾವ್ ಜೊತೆ ವಿವಾಹ
4. 1918 : ಪತಿ ಕೃಷ್ಣರಾವ್ ನಿಧನ
5. 1919 : ಶಿಕ್ಷಣ ಮುಂದುವರಿಕೆ. ಸತ್ಯಾಗ್ರಹ ಸಭೆಗಳಲ್ಲಿ ಪಾಲುಗೊಳ್ಳಲು ಪ್ರಾರಂಭ. ಸೀನಿಯರ್ ಕೇಂಬ್ರಿಡ್ಜ್ ಪರೀಕ್ಷೆಯಲ್ಲಿ ಉತ್ತೀರ್ಣ
6. 1920 : ಮದ್ರಾಸಿನಲ್ಲಿ ಶಿಕ್ಷಣ
   ಹರೀಂದ್ರನಾಥ್ ಚಟ್ಟೋಪಾಧ್ಯಾಯ ಅವರೊಂದಿಗೆ ವಿವಾಹ,
   ಯುರೋಪು ಪ್ರವಾಸ
7. 1923 : ಮೊದಲ ರಾಜಕೀಯ ಭಾಷಣ
   ಅಖಿಲಭಾರತ ಮಹಿಳಾ ಪರಿಷತ್ತಿನ ಪರಿಚಯ
   ಜಿನೆವಾ ಅಂತಾರಾಷ್ಟ್ರೀಯ ಸಮ್ಮೇಳನದಲ್ಲಿ ಭಾರತದ ಪ್ರತಿನಿಧಿತ್ವ
   ಮಗ ರಾಮನ ಜನನ
8. 1824 : ಹಿಂದೂಸ್ಥಾನ ಸೇವಾದಳದ ಸ್ವಯಂ ಸೇವಿಕೆ
   ಬೆಂಗಳೂರು ಕಾಂಗ್ರೆಸ್ ಅಧಿವೇಶನದಲ್ಲಿ ಸಕ್ರಿಯ ಕೆಲಸ
9. 1926 : ಮದ್ರಾಸ್ ಲೆಜಿಸ್ಲೇಟಿವ್ ಅಸೆಂಬ್ಲಿ ಚುನಾವಣೆಗೆ ನಿಂತ ಪ್ರಥಮ ಮಹಿಳೆ
10. 1927 : ಕಾಂಗ್ರೆಸ್ ಪಕ್ಷದ ಸದಸ್ಯತ್ವ
    ಮದ್ರಾಸ್ ಅಧಿವೇಶನದಲ್ಲಿ ಸ್ವಯಂಸೇವಕರ ಅಥವಾ ದಳದ ಸಂಘಟನೆಗೆ ಪಕ್ಷ ಜವಾಬ್ದಾರಿ ವಹಿಸಿಕೊಟ್ಟದ್ದು
11. 1928 : ಅಖಿಲಭಾರತ ಯುವಕಾಂಗ್ರೆಸ್ ಸಮಿತಿಗೆ ಆಯ್ಕೆಗೊಂಡದ್ದು
12. 1929 : ಅಖಿಲಭಾರತ ಯೂತ್ ಲೀಗಿನ ಅಧ್ಯಕ್ಷರಾಗಿ ಆಯ್ಕೆ
13. 1930 : ಉಪ್ಪಿನ ಸತ್ಯಾಗ್ರಹದಲ್ಲಿ ಬಂಧಿಯಾಗಿ ಯರವಾಡ ಜೈಲಿನಲ್ಲಿ
14. 1931 : ಜೈಲಿನಿಂದ ಬಿಡುಗಡೆ. ರಾಷ್ಟ್ರೀಯ ದೇಶಸೇವಿಕಾ ಸ್ವಯಂಸೇವೆ
    ಹಿಂದುಸ್ಥಾನ ಸೇವಾದಳದ ಜನರಲ್ ಸಮಿತಿಯ ಅಧಿಕಾರಿಯಾಗಿ ನೇಮಕ
15. 1932 : ದೆಹಲಿಯ ಲೇಡಿ ಇರ್ವಿನ್ ಕಾಲೇಜಿನಲ್ಲಿ ಗೃಹವಿಜ್ಞಾನ ಶಾಖೆ ಪ್ರಾರಂಭಿಸಲು ನೆರವು
16. 1933 : ಎರಡನೇ ಬಾರಿ ಬಂಧಿಯಾಗಿ ಜೈಲುವಾಸ
17. 1936 : ಮೀರತ್‌ನಲ್ಲಿ ನಡೆದ ಕಾಂಗ್ರೆಸ್ ಸೋಶಿಯಲಿಸ್ಟ್ ಪಕ್ಷದ ವಾರ್ಷಿಕ ಅಧಿವೇಶನದ ಅಧ್ಯಕ್ಷಸ್ಥಾನ
18. 1939–41 : ಇಂಗ್ಲೆಂಡ್–ಅಮೇರಿಕಾ ಪ್ರವಾಸ; ಅಲ್ಲಿಯ ಸಾಮಾನ್ಯ ಜನರಿಗೆ ಭಾರತದ ಸ್ವಾತಂತ್ರ್ಯ ಸಂಗ್ರಾಮದ ಪರಿಚಯ ನೀಡಿಕೆ

19. 1941–44 : ಅಖಿಲಭಾರತ ಮಹಿಳಾ ಪರಿಷತ್ತಿನ ಅಧಿವೇಶನ ಅಧ್ಯಕ್ಷರಾಗಿ ಆಯ್ಕೆ ಬಂಧಿಯಾಗಿ ವೆಲ್ಲೂರು ಜೈಲಿನಲ್ಲಿ ಕಠಿಣಶಿಕ್ಷೆ
20. 1944 : ಜೈಲಿನಿಂದ ಬಿಡುಗಡೆ. ಅಖಿಲಭಾರತ ಮಹಿಳಾ ಪರಿಷತ್ತಿನ ಅಧ್ಯಕ್ಷಸ್ಥಾನ
21. 1947–52 : ನಿರಾಶ್ರಿತರಿಗಾಗಿ ಸಹಕಾರಿ ಸಂಘಟನೆ ನಡೆಸಲು ಹಗಲು-ರಾತ್ರಿ ದುಡಿತ ಎಂಪೋರಿಯಂ ಸ್ಥಾಪನೆ
22. 1952–67 : ಅಖಿಲಭಾರತ ಕರಕುಶಲಮಂಡಳಿಯ ಅಧ್ಯಕ್ಷರಾಗಿ ನೇಮಕ
23. 1953 : ಏಡನ್ ನಗರದಲ್ಲಿ ನಡೆದ ಅಂತಾರಾಷ್ಟ್ರೀಯ ಸಭೆಯಲ್ಲಿ ಮಹಿಳೆಯರ ಅಭಿವೃದ್ಧಿ ಕುರಿತು ಭಾಷಣ
24. 1955 : ಭಾರತ ಸರಕಾರದಿಂದ ಪದ್ಮಭೂಷಣ ಪ್ರಶಸ್ತಿ ಪ್ರದಾನ
25. 1962 : ವಾಟುಮಲ್ ಪ್ರತಿಷ್ಠಾನ ಪ್ರಶಸ್ತಿ: ಸಾಮಾಜಿಕ, ಆರ್ಥಿಕ ಕ್ಷೇತ್ರದ ಸೇವೆಗಾಗಿ
26. 1964 : ಇರಾನ್ ದೇಶದ ಕರಕುಶಲ ಕಾರ್ಯಗಳ ಸುಧಾರಣೆಗಾಗಿ ಆಮಂತ್ರಣ
27. 1967 : ಸೆನೆಗಲ್ ದೇಶದ ಅಧ್ಯಕ್ಷರಿಂದ ಆಹ್ವಾನ. ಡಾಕರ್ ರಾಜಧಾನಿಯಲ್ಲಿ ನೆರೆದ ಕಲಾಪ್ರದರ್ಶನದ ಮುಖ್ಯ ಅತಿಥಿ (ಏಶಿಯಾ ಖಂಡದ ಏಕಮಾತ್ರ ಪ್ರತಿನಿಧಿ)
28. 1970 : ಶಾಂತಿನಿಕೇತನದ ದೇಶಿಕೋತ್ತಮ ಪ್ರಶಸ್ತಿ: ದೇಶದ ಸಾಂಸ್ಕೃತಿಕ ಕಾಪಾಡುವಿಕೆಗಾಗಿ
29. 1972 : ಭಾರತ ಸರಕಾರದಿಂದ ತಾಮ್ರಪತ್ರ ನೀಡಿಕೆ: ಸ್ವಾತಂತ್ರ್ಯ ಯೋಧರಾಗಿ, ನೇತಾರರಾಗಿ ನೀಡಿದ ಸೇವೆಯನ್ನು ಗುರುತಿಸಿ
30. 1972 : ರೆಮೊನ್ ಮ್ಯಾಗಸೆಸೆ ಪ್ರಶಸ್ತಿ : ಸಮುದಾಯ ಸೇವೆಗಾಗಿ
31. 1974 : ಸಂಗೀತ ನಾಟಕ ಅಕಾಡೆಮಿ ವತಿಯಿಂದ ರತ್ನಸದಸ್ಯ ಪ್ರಶಸ್ತಿ
32. 1977 : ಯುನೆಸ್ಕೊ ಪುರಸ್ಕಾರ : ಕರಕುಶಲ ಕಲೆಗಳ ಪುನಶ್ಚೇತನಕ್ಕಾಗಿ
33. 1986 : ಭಾರತ ಸರಕಾರದ ಪದ್ಮವಿಭೂಷಣ ಪ್ರಶಸ್ತಿ
ಬನಾರಸ್ ಹಿಂದು ವಿಶ್ವವಿದ್ಯಾಲಯದ ಗೌರವ ಡಿ.ಲಿಟ್.
ಆಂಧ್ರಪ್ರದೇಶ ಕಲಾವೇದಿಕೆಯಿಂದ ಕಲಾಸರಸ್ವತಿ ಪ್ರಶಸ್ತಿ
34. 1988 : ಅಕ್ಟೋಬರ್ 29, ಮುಂಬೈಯಲ್ಲಿ ನಿಧನ

## ಆಧಾರ ಗ್ರಂಥಗಳು


1. Inner Recesses and Outer Spaces-Memoirs
- Kamaladevi Chattopadhyaya, Navrang New Delhi, 1986
2. Carpets And Floor Coverings Of India
- Kamaladevi Chattopaadhyay, Taraporewala, Bombay, 1976 (II Ed.)
3. Kamaladevi Chattopadhyaya- A True Karmayogi
- A Tribute to the Mother of Handicrafts, Crafts Council of Karnataka, Bangalore - 2003
4. Kamaladevi Chattopadhyaya- a Biography
- Jamila Brijbhushan, Abhinav, New Delhi, 1976

5. Women Pioneers In India's Renaissance
- Sushila Nayar, Kamala Mankikar(Eds), National Book Trust, New Delhi, 2002
6. Kamaladevi Chattopadhyaya- A Biography
- Jasleen Dhamija, National Book Trust, New Delhi, 2007
7. Women In Modern India
- Geraldine Forbes, The New Cambridge University Press, Asian Editon, 1998
8. 100 Most Important Women of the 20th Century
- Ladies Home Journal books, Meredith Books Des Moines IOWA(USA), 1998
9. On the Wings of Time- An Autobiography
- Kamala Dongerkery, Bharatiya Vidyaabhavan, Bombay, 1968
10. Umabai Kundapur
Daimond Jubilee Souvenir, Bhagini Mandal, Hubli, 1952
11. ಭಾರತೀಯ ಮಹಿಳೆಯರ ಸ್ವಾತಂತ್ರ್ಯ ಹೋರಾಟ
– ಕಮಲಾದೇವಿ ಚಟ್ಟೋಪಾಧ್ಯಾಯ
– ವೈದೇಹಿ(ಅನು), ಅಕ್ಷರ ಪ್ರಕಾಶನ, ಸಾಗರ, 1984
12. ಕರಾವಳಿ ಜನಪದ ಕಲೆಗೆ ಕಮಲಾದೇವಿಯವರ ಕೊಡುಗೆ ಕರ್ನಾಟಕ ಕರಕುಶಲ ಮಂಡಳಿ, ಬೆಂಗಳೂರು, 2004
13. ನೆನಪಿನಲ್ಲಿ ನಿಂತವರು(ಸಾಧಕಿಯರ ಪರಿಚಯ)
– ಡಾ. ಜ್ಯೋತ್ಸ್ನಾ ಕಾಮತ್, ಮಹಿಳಾ ಸಾಹಿತ್ಯಿಕ, ಹುಬ್ಬಳ್ಳಿ, 2000
14. ನಮ್ಮ ವೀರವನಿತೆಯರು
– ಕಮಲಾ ಸಂಪಳ್ಳಿ, ಸ್ವಂತ ಪ್ರಕಾಶನ, ಬೆಂಗಳೂರು, 1992
15. ನಾನೊಂದು ಕನಸ ಕಂಡೆ – ಕಮಲಾದೇವಿ ಚಟ್ಟೋಪಾಧ್ಯಾಯ ಅವರ ಜೀವನಚರಿತ್ರೆ
– ಸರೋಜಿನಿ ಶಿಂತ್ರಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1981
16. ಕಮಲಾದೇವಿ ಏಕ್ ಸಮರ್ಪಿತ್ ವ್ಯಕ್ತಿತ್ವ (ಹಿಂದಿ)
– ಕಮಲಾ ರತ್ನಂ, ಆಲೇಖ ಪ್ರಕಾಶನ, ದೆಹಲಿ, 1990

ಕಮಲಾದೇವಿ ಅವರೊಂದಿಗೆ ಸುಮಾರು ನಲ್ವತ್ತು ವರ್ಷಗಳ ಕಾಲ ಕೆಲಸ ಮಾಡಿರುವ ಮ್ಯಾಗಸೆಸೆ ಪ್ರಶಸ್ತಿ ಪುರಸ್ಕೃತ ಶ್ರೀ ಎಲ್. ಸಿ. ಜೈನ್, ಕರ್ನಾಟಕ ಕರಕುಶಲ ಮಂಡಳಿಯ ಉಪಾಧ್ಯಕ್ಷರಾಗಿರುವ ಶ್ರೀ ಎಂ. ವಿ. ನಾರಾಯಣ ರಾವ್, ಕನ್ನಡ ವಾರಪತ್ರಿಕೆ 'ತರಂಗ'ದ ಮಾಜಿ ಸಂಪಾದಕರಾಗಿದ್ದ ಶ್ರೀ ಸಂತೋಷ್ ಕುಮಾರ್ ಗುಲ್ವಾಡಿ ಇವರಿಗೆ ಕಮಲಾದೇವಿ ಕುರಿತು ಅಗತ್ಯವಿದ್ದ ಮಾಹಿತಿಯನ್ನು ನೀಡಿರುವುದಕ್ಕಾಗಿ ಲೇಖಕಿ ಋಣಿಯಾಗಿದ್ದಾರೆ.

## ಜ್ಯೋತ್ಸ್ನಾ ಕೃಷ್ಣಾನಂದ ಕಾಮತ್ : ಕಮಲಾದೇವಿ ಚಟ್ಟೋಪಾಧ್ಯಾಯ

ಈ ಕೃತಿಯೂ ಸೇರಿದಂತೆ ಒಟ್ಟು ನವಕರ್ನಾಟಕ ಶೀರ್ಷಿಕೆಗಳು : **1396**

ಮರುಮುದ್ರಣಗಳು ಸೇರಿ ಒಟ್ಟು ನವಕರ್ನಾಟಕ ಪ್ರಕಟಣೆಗಳು : **3394**

**ಶೀರ್ಷಿಕೆಗಳ ಅಂಕಿ-ಅಂಶಗಳು**

| | |
|---|---|
| ಮಕ್ಕಳ ಪುಸ್ತಕಗಳು ... | 148 |
| – ಪುಟಾಣಿ ಪುಸ್ತಕ ಮಾಲೆ (11) | |
| – ಕಿರಿಯರ ಕಥಾ ಮಾಲೆ (16) | |
| ಕಲೆ, ರಂಗಭೂಮಿ, ಕಲಾಕೋಶ ... | 13 |
| – ಚಿತ್ರಕಲಾ ಮಾಲಿಕೆ (4) | |
| ವಿಜ್ಞಾನಕೋಶ, ಮಾಹಿತಿಕೋಶಗಳು, ಸ್ಪರ್ಧಾ ಕೈಪಿಡಿಗಳು ... | 12 |
| ಲೋಕಜ್ಞಾನ ಮಾಲೆ ... | 9 |
| ನವಕರ್ನಾಟಕ ಜ್ಞಾನ-ವಿಜ್ಞಾನ ಮಾಲೆ | 7 |
| ವಿಜ್ಞಾನ – ಸರಳ ಪರಿಚಯ ಮಾಲೆ ... | 14 |
| ಜನಪ್ರಿಯ ವಿಜ್ಞಾನ, ಇಂದ್ರಜಾಲ, ಗಣಿತ | 81 |
| ಜನಪ್ರಿಯ ತಂತ್ರಜ್ಞಾನ ... | 8 |
| ಪರಿಸರ ವಿಜ್ಞಾನ, ವನ್ಯಜೀವಿ ಸಂರಕ್ಷಣೆ | 16 |
| ಕೃಷಿ , ಹೈನುಗಾರಿಕೆ, ಅಡುಗೆ ... | 20 |
| – ತೋಟದಿಂದ ತಾಟಿಗೆ ಮಾಲೆ (5) | |
| ಆರೋಗ್ಯ, ವೈದ್ಯಕೀಯ, ಮನೋವಿಜ್ಞಾನ ... | 131 |
| ಯೋಗ, ವ್ಯಾಯಾಮ, ಕ್ರೀಡೆ ... | 5 |
| ವ್ಯಕ್ತಿ ವಿಕಸನ ಮಾಲೆ ... | 37 |
| ವ್ಯಕ್ತಿತ್ವ ವಿಕಾಸ, ಸ್ವ-ಸಹಾಯ ... | 2 |
| ಶಿಕ್ಷಣ ... | 23 |
| ವ್ಯಾಕರಣ, ಭಾಷಾಶಾಸ್ತ್ರ ... | 8 |
| ಪದಕೋಶಗಳು, ಅರ್ಥಕೋಶಗಳು | 12 |
| ಕಾನೂನು, ಅಪರಾಧ ನಿಯಂತ್ರಣ, ಗ್ರಾಹಕ ಸಂರಕ್ಷಣೆ, ಸಂವಿಧಾನ ... | 19 |
| ತತ್ವಶಾಸ್ತ್ರ ... | 23 |
| ವಿಚಾರ ಸಾಹಿತ್ಯ, ವೈಜ್ಞಾನಿಕ ಮನೋಧರ್ಮ ... | 44 |
| ಸಮಾಜ ಶಾಸ್ತ್ರ ... | 21 |
| ಆರ್ಥಿಕ, ಸಾಮಾಜಿಕ, ರಾಜಕೀಯ ... | 69 |
| ಸ್ವಾತಂತ್ರ್ಯೋತ್ತರ ಭಾರತ ಅವಲೋಕನ | 12 |
| ಇತಿಹಾಸ ... | 40 |
| ಕ್ರಾಂತಿ ಕಿಡಿಗಳು ಮಾಲೆ ... | 20 |
| ಹೊಸತು ವಾಚಿಕೆ ಮಾಲೆ ... | 18 |
| ಜೀವನ ಚರಿತ್ರೆ, ವ್ಯಕ್ತಿ ಚಿತ್ರಣ ... | 36 |
| ಸಾಹಿತ್ಯ ಚರಿತ್ರೆ, ವಿಮರ್ಶೆ, ಸಂಕೀರ್ಣ... | 15 |
| ನವಕರ್ನಾಟಕ ಸಾಹಿತ್ಯ ಸಂಪದ ಮಾಲೆ | 44 |
| ಪ್ರವಾಸ ಕಥನ, ಅನುಭವ, ಪ್ರಬಂಧ... | 22 |
| ಆತ್ಮಕಥನ ... | 7 |
| ವನಿತಾ ಚಿಂತನ ಮಾಲೆ ... | 20 |
| ವಿಶ್ವಕಥಾಕೋಶ ಮಾಲೆ ... | 25 |
| ಕಾದಂಬರಿ, ಕಥೆ, ಕವನ, ನಾಟಕ ... | 88 |
| ಹಾಸ್ಯಸಾಹಿತ್ಯ ... | 21 |
| ಅಕ್ಷರ ಕಿರಣ ಮಾಲೆ ... | 135 |
| ನವಕರ್ನಾಟಕ ಚಿತ್ರ ಖಜಾನೆ ... | 19 |
| Children's Literature ... | 28 |
| – Mini Books Series (11) | |
| – Look Learn Series (11) | |
| English Grammar & Language | 17 |
| – Welcome to English Series (9) | |
| Popular Science, Magic ... | 6 |
| Health & Medical Science ... | 15 |
| Law & Consumer Protection ... | 9 |
| – Citizen's Guide Series (4) | |
| History, Eco. & Socio-Pol. ... | 6 |
| Philosophy ... | 11 |
| – Global Philosophy Series (8) | |
| Literature & General Interest ... | 13 |
| Navakarnataka Picture Treasure | 19 |
| ಹಿಂದಿ ಪುಸ್ತಕಗಳು ... | 5 |
| ಇತರೆ ... | 23 |
| **ಒಟ್ಟು ಶೀರ್ಷಿಕೆಗಳು** | **...1396** |
| ಮರುಮುದ್ರಣಗಳು (ಕನ್ನಡ) | ...1846 |
| ಮರುಮುದ್ರಣಗಳು (ಇಂಗ್ಲಿಷ್) | ... 152 |
| **ಒಟ್ಟು ಪ್ರಕಟಣೆಗಳು** | **...3394** |

# ನವಕರ್ನಾಟಕ ಪ್ರಕಾಶನದ ಪ್ರಕಟಣೆಗಳು

## ವನಿತಾ ಚಿಂತನ ಮಾಲೆ

ನೂರಿ (ಕಾದಂಬರಿ) ಡಾ|| ಜಾನಕಿ ಸುಂದರೇಶ್ 140.00

**(ಕರ್ನಾಟಕ ಲೇಖಕಿಯರ ಸಂಘದ 'ಕಾಕೋಳು ಸರೋಜಮ್ಮ ದತ್ತಿನಿಧಿ' ಪ್ರಶಸ್ತಿ 2009)**

ಮಣ್ಣಿಂದ ಎದ್ದವರು (ಕಾದಂಬರಿ) ಕುಸುಮಾ ಶಾನುಭಾಗ 80.00

ಶಕ್ತಿಧಾಮದ ಕಥೆಗಳು (ನೈಜ ಘಟನೆಗಳು) ಜಿ. ಎಸ್. ಜಯದೇವ 65.00

ಆಲಾಹಳ ಹೆಣ್ಣುಮಕ್ಕಳು (ಕಾದಂಬರಿ) *ಮಲಯಾಳಂ ಮೂಲ : ಸಾರಾ ಜೋಸೆಫ್*

**(ಮೂಲ ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ)** *(ಅನು : ಪಾರ್ವತಿ ಜಿ. ಐತಾಳ)* 100.00

ಸಂಗತಿ (ಆತ್ಮಕಥೆ) *ತಮಿಳು ಮೂಲ : ಬಾಮ (ಅನು : ಎಸ್. ಪ್ಲೋಮಿನ್ ದಾಸ್)* 65.00

ಉಷೋದಯ (ಕಾದಂಬರಿ) *ತೆಲುಗು ಮೂಲ : ಓಲ್ಗ (ಅನು : ಮಿಸ್ ಸಂಪತ್)* 65.00

ಬದುಕು ನಮ್ಮದು (ಆತ್ಮಕಥೆ) *ಮರಾಠಿ ಮೂಲ : ಬೇಬಿತಾಯಿ ಕಾಂಬಳೆ*

*(ಅನು : ಚಂದ್ರಕಾಂತ ಪೋಕಳೆ)* 55.00

ನೋವು ತುಂಬಿದ ಬದುಕು (ಆತ್ಮಕಥೆ) *ಬಂಗಾಳಿ ಮೂಲ : ಬೇಬಿ ಹಾಲ್ದಾರ್*

*(ಅನು : ಜಿ. ಕುಮಾರಪ್ಪ)* 90.00

ನಿರಕ್ಷರಿಯ ಆತ್ಮಕಥೆ (ಆತ್ಮಕಥೆ) *ಹಿಂದಿ ಮೂಲ : ಸುಶೀಲಾ ರಾಯ್ (ಅನು : ಜಿ. ಕುಮಾರಪ್ಪ)* 55.00

ಅಂತಿಮ ಜ್ವಾಲೆ (ಕಾದಂಬರಿ) *ಹಿಂದಿ ಮೂಲ : ಹಿಮಾಂಶು ಜೋಶಿ*

*(ಅನು : ಡಾ|| ಜಿ. ಎಸ್. ಕುಸುಮ ಗೀತ)* 55.00

**(ಕುವೆಂಪು ಭಾಷಾ ಭಾರತಿ ಅನುವಾದ ಪುರಸ್ಕಾರ 2009)**

ಸೀತಾ ಕಾವ್ಯಕಥನ (ಕಾವ್ಯ) ಡಾ|| ಎಮ್. ಎನ್. ಕೇಶವರಾವ್ 45.00

ಅಮ್ಮನಿಗೆ ಹಜ್ ಬಯಕೆ *ಮೂಲ : ಅಸ್ಮಾ ನಾಡಿಯಾ*

(ಇಂಡೋನೇಶಿಯಾದ ದಿಟ್ಟಮಹಿಳೆಯರ ಸಹಜ ಕಥೆಗಳು) *(ಅನು : ಎಚ್. ಎನ್. ಗೀತಾ)* 70.00

ಸೂಫಿ ಮಹಿಳೆಯರು ಫಕೀರ್ ಮುಹಮ್ಮದ್ ಕಟ್ಪಾಡಿ 60.00

**(ಕರ್ನಾಟಕ ಸಂಘ, ಶಿವಮೊಗ್ಗ ಇದರ 'ಪಿ. ಲಂಕೇಶ್ ಪ್ರಶಸ್ತಿ' 2010)**

ದೀಪಧಾರಿಣಿ (ಫ್ಲಾರೆನ್ಸ್ ನೈಟಿಂಗೇಲ್ ಬದುಕು-ಸಾಧನೆ) ಬಿ. ಜಿ. ಕುಸುಮಾ 40.00

ಬಿ. ರಂಗನಾಯಕಮ್ಮ (ಬದುಕು-ಸಾಧನೆ) ಪ್ರೊ|| ಬಿ. ಎಸ್. ಮಯೂರ 40.00

ಕಾಲುಹಾದಿಯ ಕೋಲ್ಮಿಂಚುಗಳು - ಮಹಿಳಾ ವಿಜ್ಞಾನಿಗಳು (2ನೇ ಮು.) ನೇಮಿಚಂದ್ರ 75.00

ಹೋರಾಟದ ಹಾದಿಯಲ್ಲಿ ಧೀಮಂತ ಮಹಿಳೆಯರು (2ನೇ ಮು.) ನೇಮಿಚಂದ್ರ 50.00

ಕಮಲಾದೇವಿ ಚಟ್ಟೋಪಾಧ್ಯಾಯ. ಬದುಕು-ಸಾಧನೆ 70.00

*ಕೊಂಕಣಿ ಮೂಲ : ಜ್ಯೋತ್ಸ್ನಾ ಕೃಷ್ಣಾನಂದ ಕಾಮತ್ (ಅನು : ಡಾ|| ಗೀತಾ ಶೆಣೈ)*

ಧೀಮತಿಯರು ನಾಗಮಣಿ ಎಸ್. ರಾವ್ 95.00

ಸ್ತ್ರೀಪಥ (ಪ್ರಬಂಧಗಳು) ನಾಗಮಣಿ ಎಸ್. ರಾವ್ 65.00

## ವಿಶ್ವಕಥಾ ಕೋಶ (ಪ್ರಧಾನ ಸಂಪಾದಕರು : ನಿರಂಜನ)

**(25 ಸಂಪುಟಗಳ ಸೆಟ್. 3ನೇ ಮುದ್ರಣ. ಬಿಡಿ ಪ್ರತಿ ರೂ. 75. ಸೆಟ್ ಬೆಲೆ ರೂ. 1750.00)**

ಧರಣಿಮಂಡಲ ಮಧ್ಯದೊಳಗೆ (ಸಂಪುಟ-1 : 22 ಕನ್ನಡ ಕಥೆಗಳು) ಪ್ರ.ಸಂ. : ನಿರಂಜನ

ಆಫ್ರಿಕದ ಹಾಡು (ಸಂಪುಟ-2 : ಆಫ್ರಿಕ ಖಂಡದ ಕಥೆಗಳು.) ಅನು : ಸಿ. ಸೀತಾರಾಮ್

ಕಾಡಿನಲ್ಲಿ ಬೆಳದಿಂಗಳು (ಸಂಪುಟ-3 : ವಿಯೆಟ್ನಾಮ್ ಕಥೆಗಳು) ಅನು : ಸಿ. ಪಿ. ರವಿಕುಮಾರ್

ಚೆಲುವು (ಸಂಪುಟ-4 : ಮಂಗೋಲಿಯ, ಚೀನ, ಜಪಾನ್, ಕೊರಿಯ ಕಥೆಗಳು) ಅನು : ಜಿ. ಎಸ್. ಸದಾಶಿವ

ಸುಭಾಷಿಣಿ (ಸಂಪುಟ-5 : ಭಾರತ, ನೆರೆಹೊರೆಯ 23 ಕಥೆಗಳು) ಅನು : ವಿವಿಧ ಅನುವಾದಕರು

ವಿಚಿತ್ರ ಕಕ್ಷಿದಾರ (ಸಂಪುಟ-6 : ಇಂಗ್ಲೆಂಡ್ ಕಥೆಗಳು. ಅನು : ಎನ್. ಎಸ್. ರಾಮಚಂದ್ರಯ್ಯ

ಮಂಜುಹೂವಿನ ಮದುವಣಿಗ (ಸಂಪುಟ-7 : ಹಂಗೆರಿ, ರುಮಾನಿಯ ಕಥೆಗಳು) ಅನು : ಕೆ. ಎಸ್. ನಾರಾಯಣಸ್ವಾಮಿ

ಬೂದುಬಣ್ಣದ ಕಾಂಗರೂ (ಸಂಪುಟ-8 : ಆಸ್ಟ್ರೇಲಿಯ, ನ್ಯೂಜಿಲೆಂಡ್ ಕಥೆಗಳು) ಅನು : ಪಾ. ಸಂಜೀವ ಬೋಳಾರ

ಹೆಜ್ಜೆಗುರುತು (ಸಂಪುಟ-9 : ರಷ್ಯ-ನೆರೆಹೊರೆ ಕಥೆಗಳು) ಅನು : ಕೆ. ಎಸ್. ನಿಸಾರ್ ಅಹಮದ್

ಅರಬಿ (ಸಂಪುಟ-10 : ಐರ್‌ಲೆಂಡ್, ವೇಲ್ಸ್, ಸ್ಕಾಟ್‌ಲೆಂಡ್ ಕಥೆಗಳು) ಅನು : ಶಾ. ಬಾಲುರಾವ್

ನೆತ್ತರು ದೆವ್ವ (ಸಂಪುಟ-1 : ಚೆಕೊಸ್ಲೊವಾಕಿಯ, ಪೋಲೆಂಡ್ ಕಥೆಗಳು) ಅನು : ಎಚ್. ಕೆ. ರಾಮಚಂದ್ರಮೂರ್ತಿ

ಬಾವಿಕಟ್ಟೆಯ ಬಳಿ (ಸಂಪುಟ-12 : ಯುಗೊಸ್ಲಾವಿಯ, ಆಲ್ಬೇನಿಯ, ಬಲ್ಗೇರಿಯ ಕಥೆಗಳು) ಅನು : ಟಿ. ಶ್ರೀನಿವಾಸರಾಜು

ಅದೃಷ್ಟ (ಸಂಪುಟ-13 : ಅಮೆರಿಕ, ಕೆನಡ, ಮೆಕ್ಸಿಕೊ ಕಥೆಗಳು. ಅನು : ವೀಣಾ ಶಾಂತೇಶ್ವರ

ಸಜ್ಜನನ ಸಾವು (ಸಂಪುಟ-14 : ಐಸ್‌ಲೆಂಡ್, ಡೆನ್‌ಮಾರ್ಕ್, ನಾರ್ವೆ, ಸ್ವೀಡನ್, ಫಿನ್‌ಲೆಂಡ್ ಕಥೆಗಳು.) ಅನು : ಕ. ನಂ. ನಾಗರಾಜು

ಡೇಗೆ ಹಕ್ಕಿ (ಸಂಪುಟ-15 : ಇಟಲಿ, ಆಸ್ಟ್ರಿಯ ಕಥೆಗಳು) ಅನು : ಎಸ್. ಅನಂತನಾರಾಯಣ

ಅವಸಾನ (ಸಂಪುಟ-16 : ಗ್ರೀಸ್, ಸೈಪ್ರಸ್, ಟರ್ಕಿ ಕಥೆಗಳು) ಅನು : ಈಶ್ವರಯ್ಯ

ತಾತನ ಹುಟ್ಟುಹಬ್ಬ (ಸಂಪುಟ-17 : ಹಾಲೆಂಡ್, ಬೆಲ್ಜಿಯಮ್, ಸ್ವಿಟ್ಜರ್‌ಲೆಂಡ್ ಕಥೆಗಳು) ಅನು : ಸಿ. ಎಚ್. ಪ್ರಹ್ಲಾದರಾವ್

ಬಾಲ ಮೇಧಾವಿ (ಸಂಪುಟ-18 : ಜರ್ಮನಿ ಕಥೆಗಳು) ಅನು : ಎಚ್. ಎಸ್. ರಾಘವೇಂದ್ರರಾವ್

ಇಬ್ಬರು ಗೆಳೆಯರು (ಸಂಪುಟ-19 : ಸ್ಪೇನ್, ಪೋರ್ಚುಗಲ್ ಕಥೆಗಳು) ಅನು : ಕೆ. ವಿ. ನಾರಾಯಣ

ಅಬಿಂದಾ - ಸಯೀದ್ (ಸಂಪುಟ-20 : ಇಂಡೋನೇಷ್ಯ, ಫಿಲಿಪ್ಪೀನ್ಸ್, ಮಲಯ, ಸಿಂಗಾಪುರ, ಥಾಯ್‌ಲೆಂಡ್ ಕಥೆಗಳು.) ಅನು : ಎಸ್ಸಾರ್ಕೆ

ನಿಗೂಢ ಸೌಧ (ಸಂಪುಟ-21 : ಫ್ರಾನ್ಸ್ ಕಥೆಗಳು.) ಅನು : ಬಸವರಾಜ ನಾಯ್ಕರ

ಬೆಳಗಾಗುವ ಮುನ್ನ (ಸಂಪುಟ-22 : ಕ್ಯೂಬಾ, ಜಮೇಯಿಕ ಕಥೆಗಳು. ಅನು : ಶ್ರೀಕಾಂತ

ಮರಳುಗಾಡಿನ ಮದುವೆ (ಸಂಪುಟ-23 : ಪಶ್ಚಿಮ ಏಷ್ಯ ಕಥೆಗಳು) ಅನು : ವಾಸುದೇವ

ಕಿವುಡು ವನದೇವತೆ (ಸಂಪುಟ-24 : ದಕ್ಷಿಣ ಅಮೆರಿಕ ಕಥೆಗಳು) ಅನು : ಈಶ್ವರಚಂದ್ರ

ಸಾವಿಲ್ಲದವರು (ಸಂಪುಟ-25 : ಪಂಚ ಮಹಾಕಾವ್ಯಗಳಿಂದ ಆಯ್ದಕಥೆಗಳು) ನಿರೂಪಣೆ : ಸಿ. ಕೆ. ನಾಗರಾಜ ರಾವ್

